श्री स्कंदपुराणान्तर्गत

# कृष्णामाहात्म्यम्

## शूर्पाकारक्षेत्रमाहात्म्यं च

ಕನ್ನಡ ಅನುವಾದ :

**ಪಂ. ಲಕ್ಷ್ಮಣಾಚಾರ್ಯ ಪಾಂಗರಿ**

ಪ್ರಕಾಶನ :

**ಪಂ. ಲಕ್ಷ್ಮಣಾಚಾರ್ಯ ಪಾಂಗರಿ**

31, ಗೋಪಾಲಪೂರ, ಮಾಳಮಡ್ಡಿ

ಧಾರವಾಡ



*This Book is published*
*with financial assistance from*
*Tirumala Tirupati Devasthanams*
*under the scheme*
*"Aid to Publish Religious Books"*

श्रीमद्धनुमत्प्रतिष्ठां चक्रिरे। तदानींतन महिशूरमहाराजस्य भोजनकाले प्रत्यहं कृमिदर्शनं आसीत्। तैः प्रार्थिताः श्रीमच्चरणाः मन्त्रिततीर्थप्रदानादिना राज्ञः कृमिदर्शनं नाशयांचक्रुः। तज्ज्ञापनार्थं श्रीरंगपट्टणे श्रीविद्याधीशतीर्थेभ्यः जहागिरी दत्ता महिशूरराजैः अद्यापि वर्तते। सर्वमिदं शूर्पालयक्षेत्रे अन्नदानफलमिति तर्कयितुं शक्यते श्रीविद्याधीशगुरवः।

शेषवाक्यार्थचंद्रिकाकारैः पांडुरंगी केशवाचार्यैः गुरुराज अपरनामधेयैः श्रीयादवार्याणां अस्थिक्षालनं शूर्पालयस्य कृष्णावेणीनद्यां कोटीश्वरतीर्थे यदा कृतं तदा अस्थिषु भागवतटिप्पणीवर्णान् चिह्नितान् दृष्ट्वा विस्मयमापेदिरे॥ श्रीगुरुराजानामपि परंधामसूचकः अश्वत्थवृक्षः अद्यापि विराजते। एतादृशः शूर्पालयमाहात्म्यसहित कृष्णवेणीमाहात्म्यं कर्नाटकभाषान्तरोपेतं सर्वैः गृहीत्वा कृतार्था भवेयुः इति।

शूर्पाकारमगाद्बलः इति भागवतोक्तमहिमोपेते शूर्पालये श्रीमन्नारदानुग्रहीत श्री श्रीमद्भागवतविरोधोद्धार श्रीमद्भगवद्गीता त्रिविधार्थवृत्ति इत्यादिग्रंथादि टिप्पण्याचार्यपौत्रैः समीरणाचार्यैः ऐतरेयभाष्यस्य मंगलं विधाय गलगली मध्वाचार्य, मुनी मध्वाचार्य, श्री रामकेशवाचार्य, रंगाचार्य प्रभृतिभ्यः सच्छास्त्राणि अध्याप्य बहुदिनपर्यन्तं वासं चक्रुः।

श्रीव्यासतीर्थोत्पलशोभिहंसः श्रीच्छात्रवृंदोद्धरणैकदक्षः समीरणाचार्य पदाब्जभृंगः श्रीकृष्णाचार्यः (ताताचार्य गोपांग्री) श्रीमध्वभाष्यानुसारेण वैदिककोशं निर्माय तत्साहाय्येन पवमानमण्डलस्य संपूर्णस्य व्याख्यां विधाय मंत्रव्याख्याकृदाचार्यः वेदाचार्यः इति अन्वर्थलाभ रेभिरे। एतैरैव अस्मिन् शूर्पालयक्षेत्रे एव ऋक्संहितास्वाहाकारं पवमानहोमं च विधाय माघमासे पंचदशदिनपर्यन्तं प्रत्यहं सहस्रशः ब्राह्मणसुवासिनीसन्तर्पणं कृत्वा श्रीलक्ष्मीनरसिंहदेवाय समर्पयांबभूवुः।

श्रीव्यासतीर्थोत्पलशोभिहंसाः श्रीसमीरणाचार्याः तत्पौत्रेण श्रीकृष्णाचार्यपुत्रेण श्रीमद्भागवतरसास्वादपुण्यं साधु तथा अधिकारिजनेभ्यः दत्तवता पण्डितप्रकाण्डानां श्री वाणी विहार विद्यालय, सत्यध्यान विद्यापीठ स्थापकानां महाव्याघ्र गोपालाचार्याणां निकटे आदितः श्रीमन्न्यायामृत(तरंगिणीसहित)पर्यन्तं अधीतवता ततः श्रीमदुत्तरादिमठाधीशानां परमहंसपरिव्राजकाचार्याणां जगद्गुरूणां श्री १००८ श्री सत्यप्रमोदतीर्थानां सन्निधाने श्रीमन्न्यायसुधां अधीत्य राजगोपालपुरक्षेत्रे कावेरीतीरे सुधामंगलं कृतवता लक्ष्मणाचार्येण (पांगी) स्कांदपुराणोक्त कृष्णावेणीमहात्म्यं ग्रन्थेन्द्रे श्रीविद्यापादसन्निधाने कर्नाटकभाषया

ಮಾಹಾತ್ಮ್ಯವಿಷಯವು ಸೂಚಿತವಾಗುತ್ತದೆ.

ತ್ರೈಲೋಕ್ಯಪಾವನಳಾದ ಭಾಗೀರಥಿಯು ತನ್ನಲ್ಲಿ ಉಂಟಾದ ಪಾಪಗಳ ಪರಿಹಾರಕ್ಕಾಗಿ ಈ ಕ್ಷೇತ್ರಕ್ಕೇ ವಿಶ್ವೇಶ್ವರನ ಸಮೇತಳಾಗಿ ಬಂದು ಕ್ಷೇತ್ರವಾಸಿಯಾದ ಬ್ರಾಹ್ಮಣನಿಗೆ ಶೂರ್ಪ ಎಂದರೆ ಮೊರದ ಬಾಗಿಣವನ್ನು ದಾನಮಾಡಿ ಕೃತಾರ್ಥಳಾದಳೆಂದು ಸ್ಕಂದ ಪುರಾಣದಲ್ಲಿ ವರ್ಣಿಸಲ್ಪಟ್ಟಿದೆ. ಪವಿತ್ರಳಾದ ಗಂಗೆಗೂ ಸಹ ಪಾವಿತ್ರ್ಯವನ್ನು ತಂದು ಕೊಟ್ಟ ಈ ಕ್ಷೇತ್ರದಲ್ಲಿಯ ವಿಷ್ಣುಸನ್ನಿಧಾನವನ್ನು ಯಾರು ವರ್ಣಿಸಬಲ್ಲರು ?

ಕರ್ಮಾನುಸಾರವಾಗಿ ಕ್ಷೇತ್ರಸ್ಥನಾದ ಬ್ರಾಹ್ಮಣನಿಗೆ ಒದಗಿಬಂದ ಬ್ರಹ್ಮರಾಕ್ಷಸಯೋನಿಯ ಪರಿಹಾರಕ್ಕೂ ಇದೇ ಕ್ಷೇತ್ರವೇ ಕಾರಣವಾಯಿತು. ಇದು ಬ್ರಹ್ಮದೇವರ ಯಜ್ಞಕ್ಷೇತ್ರವು. ಯಜ್ಞಮಹೋತ್ಸವಕ್ಕೆ ಪ್ರಾಪ್ತನಾದ ಪರಶುರಾಮನು ಆ ಬ್ರಾಹ್ಮಣನನ್ನು ದುಷ್ಟಯೋನಿಯಿಂದ ಮೋಚನಗೊಳಿಸಿದನು. ಆ ಬ್ರಾಹ್ಮಣನಿಂದ ಪ್ರಾರ್ಥಿತನಾಗಿ ಇದೇ ತೀರ್ಥದಲ್ಲಿಯೇ ನಿತ್ಯಸನ್ನಿಹಿತನಾಗಿದ್ದಾನೆ.

ಇದಲ್ಲದೇ ಈ ಕ್ಷೇತ್ರದಲ್ಲಿಯ ಚಕ್ರತೀರ್ಥ, ಕಂಕತೀರ್ಥ, ಉತ್ತುಂಗತೀರ್ಥ ಮುಂತಾದ ಅನೇಕ ತೀರ್ಥಗಳು ಇದರ ಪಾವಿತ್ರ್ಯವನ್ನು ತುಂಬಿಕೊಟ್ಟಿವೆ. ಇಲ್ಲಿಯ ಋಣಮೋಚನತೀರ್ಥದಿಂದ ಋಣತ್ರಯಗಳಿಂದ ಪರಿಹಾರವು ಲಭಿಸುವದೆಂದು ಪ್ರಮಾಣಗಳಿವೆ.

ಕೃಷ್ಣಾನದಿಯೇ ಪರಮಪವಿತ್ರಳು. ಅದರಲ್ಲಿಯೂ ನಾಲ್ಕು ಸ್ಥಳಗಳಲ್ಲಿಯ ಕೃಷ್ಣಾನದಿಗೆ ವಿಶೇಷ ಮಹಾತ್ಮ್ಯವಿದೆ. ಶೂರ್ಪಾಲಯ, ಸಂಗಮ, ಛಾಯಾ ಮತ್ತು ಶ್ರೀಶೈಲ. ಈ ನಾಲ್ಕು ಕ್ಷೇತ್ರಗಳ ಮಧ್ಯದಲ್ಲಿಯೂ ಶೂರ್ಪಾಲಯವೇ ಕಲಿಯುಗದಲ್ಲಿ ವಿಶೇಷವಾಗಿ ಪರಮ ಪವಿತ್ರವಾಗಿದೆಯೆಂಬುದು ಸಿದ್ಧಾಂತ.

ಇಷ್ಟೇ ಅಲ್ಲದೇ, ಅನೇಕ ಪರಮಹಂಸರು, ಶ್ರೀ ವಿದ್ಯಾಧೀಶತೀರ್ಥರು, ಶ್ರೀ ಸತ್ಯಸಂಧತೀರ್ಥರು ಮತ್ತು ಜ್ಞಾನವರೇಣ್ಯರಾದ ಯಾದವಾರ್ಯರು, ಗುರುರಾಜರು, ಮುಂತಾದವರು ಇದೇ ಕ್ಷೇತ್ರದಲ್ಲಿಯೇ ಬಹುಕಾಲ ವಾಸಮಾಡಿ "तीर्थीकुर्वन्ति साधवः" ಎಂಬಂತೆ ಇದಕ್ಕೆ ಹೆಚ್ಚಿನ ಪಾವಿತ್ರ್ಯವನ್ನು ತಂದು ಕೊಟ್ಟಿರುವರು.

ಇಂಥ ಮಹಾತ್ಮ್ಯವು ಎಲ್ಲರಿಗೂ ತಿಳಿಯುವಂತೆ ಭಗವದ್ಭಕ್ತರ ಪ್ರಾರ್ಥನೆಯಂತೆ ನಮ್ಮ ಮಿತ್ರರಾದ ಪಂಡಿತ ವೇ. ಮೂ. ಲಕ್ಷ್ಮಣಾಚಾರ್ಯ ಪಾಂಪ್ರಿ ಇವರು ಸ್ಕಂದಪುರಾಣದಲ್ಲಿಯ ಭಾಗವನ್ನು ಆಯ್ದುಕೊಂಡು ಸುಲಭಶೈಲಿಯಿಂದ ಕನ್ನಡದಲ್ಲಿ ಅದನ್ನು ಭಾಷಾಂತರಿಸಿ ಸಜ್ಜನರಿಗೆ ಮಹೋಪಕಾರ ಮಾಡಿದ್ದಾರೆ. ಇದನ್ನು ಓದಿ ಎಲ್ಲ ಸಜ್ಜನರು ಕೃತಾರ್ಥರಾಗಲೆಂದು ಹಾರೈಸುತ್ತೇನೆ, ಮತ್ತು ಶ್ರೀ ಲಕ್ಷ್ಮಣಾಚಾರ್ಯರಿಗೆ ಶ್ರೀ

शूर्पालक्षेत्रमित्येतत्पवित्रं पापनाशनम् ।
तत्तीरेश्वत्थवृक्षेऽस्मिन् विष्णुरूपेण संस्थितिः ।

ಪರಶುರಾಮದೇವರ ಆನಂದಬಾಷ್ಪಗಳಿಂದ ಉದ್ಭೂತವಾದ ಅಶ್ವತ್ಥವೃಕ್ಷ ತದ್ಗತ ಶ್ರೀಲಕ್ಷ್ಮೀನರಸಿಂಹದೇವರ ಸನ್ನಿಧಾನ ಕೃಷ್ಣವೇಣೀತೀರ ಶ್ರೀ ಶೂರಪಾಲಯಕ್ಷೇತ್ರಕ್ಕೆ ಕಾಶೀಯಾತ್ರಿಕರ ಸ್ನಾನಾದಿಗಳಿಂದ ಬಿಡಲ್ಪಟ್ಟ ಪಾಪ (ದಿಂದ ಬಿಡುಗಡೆಗೆ) ಪ್ರಕ್ಷಾಲನಾರ್ಥ ಕಾಶೀಕ್ಷೇತ್ರದಿಂದ ವಿಶ್ವೇಶ್ವರನ ಜೊತೆಗೇ (ವಿಷ್ಣುಪದೀ) ಭಾಗೀರಥೀದೇವಿಯು ಬಂದು ಕ್ಷೇತ್ರಸ್ಥ ಬ್ರಾಹ್ಮಣರಿಗೆ ಮರದ ಬಾಗಿಣ ಕೊಟ್ಟು ಪಾಪಪರಿಹೃತಳಾಗಿ ಕ್ಷೇತ್ರ ಮಹಾತ್ಮ್ಯವನ್ನು ಅಧಿಕಾರಿಜೀವರಿಗೆ ಅನುಭವ ತಂದುಕೊಟ್ಟಳು.

ಆ ಶೂರಪಾಲಯದ ಮಹಿಮೆಯು ಉತ್ತರಾದಿಮಠಾಧೀಶರಾದ ಶ್ರೀಮನ್ಮೂಲ ಸೀತಾಸಮೇತ ಮೂಲರಾಮಚಂದ್ರ, ದಿಗ್ವಿಜಯರಾಮಚಂದ್ರದೇವರ ಪಾದಪದ್ಮಾ-ರಾಧಕರಾದ ಪರಮಹಂಸ ಪೀಠಾಧೀಶರಾದ ಹಾಗೂ ಶ್ರೀಮನ್ನ್ಯಾಯಸುಧಾಕ್ಕೆ ಟಿಪ್ಪಣೀಕಾರರಾದ ವಾಕ್ಯಾರ್ಥಚಂದ್ರಿಕಾಚಾರ್ಯರಾದ ಶ್ರೀ 1008 ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದಂಗಳವರು ದ್ವಾದಶವರ್ಷ ಪರ್ಯಂತ ಶೂರಪಾಲಯಕ್ಷೇತ್ರದಲ್ಲಿ ಪಾಠಪ್ರವಚನನಿರತರಾಗಿ ''ನ ಮಾತುಃ ಪರದೈವತಂ'' ಎಂಬ ವಚನಕ್ಕನುಸಾರವಾಗಿ ಮಾತೃವಾಕ್ಯಪರಿಪಾಲಕರಾಗಿ ಜೀವೋತ್ತಮರಾದ ವಾಯುದೇವರ ಸಾಕ್ಷಿಯಾಗಿ ಸಾಧನೀದ್ವಾದಶೀ (ನ ತಿಥಿರ್ದ್ವಾದಶೀ ಸಮಾ) ದಿನದಲ್ಲಿ ಯಾದವಾರ್ಯರೇ ಪ್ರಮುಖರಾದ ಲಕ್ಷಬ್ರಾಹ್ಮಣರಿಗೆ ಏಕಾಪೋಶನಮಾಡಿಸಿ ಶ್ರೀಲಕ್ಷ್ಮೀನರಸಿಂಹಾಭಿನ್ನ ಶ್ರೀಮನ್ಮೂಲದಿಗ್ವಿಜಯರಾಮದೇವರ ಪರಮಾನುಗ್ರಹಕ್ಕೆ ಪಾತ್ರರಾಗಿ ಶ್ರೀ ಶೂರಪಾಲಯ ಕ್ಷೇತ್ರಮಹಾತ್ಮ್ಯವನ್ನು ಪ್ರಸಿದ್ಧಿಗೆ ತಂದರು.

ब्राह्मणाः कृष्णरूपाश्च लक्ष्मीरूपाश्च तत्स्त्रियः ।
यत्र गत्वा तु तौ पूज्य वैकुंठं वसते चिरम् ॥

ಹೀಗೆ ಪರಮಪವಿತ್ರವಾದ ಶೂರಪಾಲಯಕ್ಷೇತ್ರದಲ್ಲಿ ಪರಮ ವೈಭವದಿಂದ ವಜ್ರಖಚಿತರತ್ನಪೀಠದಲ್ಲಿ ವಿಷ್ಣುಪಾದ ಗಯಾಕ್ಷೇತ್ರದಲ್ಲಿ ಪೂಜೆ ಸಲ್ಲಿಸಿದ ವೈಭವದಂತೆ

ಮಹಾಪೂಜೆಯನ್ನು ವೈಭವದಿಂದ ನಮಗೆ ಅರ್ಥಾತ್ ಅಧಿಕಾರಿಗಳಿಗೆ ದರ್ಶನಮಾಡಿಸಿ ಎಲ್ಲ ತಾಪತ್ರಯಗಳನ್ನೂ (ಆಧ್ಯಾತ್ಮಿಕಾದಿ) ಪರಿಹಾರ ಮಾಡಿ ಉದ್ಧಾರಮಾಡಿದ ಶ್ರೀಸತ್ಯಪ್ರಮೋದತೀರ್ಥರು ಅಭಿನವ ವಿದ್ಯಾಧೀಶತೀರ್ಥರಾದರು. ಹಾಗೂ ಅಭಿನವ ಸತ್ಯಧ್ಯಾನತೀರ್ಥರೂ ಆಗಿ ಅವರಂತೆ ಉದ್ಧಾರ ಮಾಡಿದ ಜಗದ್ಗುರುಗಳ ಪಾದಪಂಕಜಗಳಲ್ಲಿ ಅನಂತಾನಂತ ಶಿರಸಾಷ್ಟಾಂಗ ನಮಸ್ಕಾರಗಳ ಪೂರ್ವಕ ಈ ಕೃಷ್ಣವೇಣೀ ಮಾಹಾತ್ಮ್ಯ ಭಾಷಾಂತರೀಕರಿಸಿದ್ದನ್ನು ಅರ್ಪಣೆಮಾಡಿ ಕೃತಕೃತ್ಯನಾಗುವೆನು.

ಎಲ್ಲ ಕ್ಷೇತ್ರಸ್ಥ ಭಗವದ್ಭಕ್ತರ ಪರವಾಗಿ ನಮ್ರ ಪಾರ್ಥನೆ.

**प्रातःकाले तु शूर्पाले त्वपराण्हे च संगमे ।**
**सायं महेंद्रे वसति रामक्षत्रकुलांतकः ॥**
**शूर्पालस्य महेंद्रस्य संगमस्तीर्थमुत्तमम् ॥**

ಕರ್ನಾಟಕ ಭಾಷೆಯಲ್ಲಿ ಭಾಷಾಂತರೀಕರಿಸಲಿಕ್ಕೆ 11 ಅಧ್ಯಾಯದಿಂದ 22 ಅಧ್ಯಾಯದವರೆಗೂ ಸಹಾಯಕರಾಗಿ ಭಾಷಾಂತರೀಕರಿಸಿ ಕೊಟ್ಟವರು ನನ್ನ ಪರಮ ಮಿತ್ರರಾದ ಶ್ರೀ ಪಂಡಿತ ಶಿರೋಮಣಿ ಉಮರ್ಜಿ ದಾಮೋದರಾಚಾರ್ಯ ಅವರಿಗೆ ಅನೇಕ ನಮಸ್ಕಾರಪೂರ್ವಕ ಕೃತಜ್ಞತೆಗಳು. ಹಾಗೂ ಈ ಗ್ರಂಥ ಪ್ರಕಾಶನದ ಮಹತ್ಕಾರ್ಯಕ್ಕೆ 5000 (ಐದು ಸಾವಿರ) ದಿಂದ 1001 ಹಾಗೂ 500, 200, 100 ಹೀಗೆ ಸಹಾಯ ಮಾಡಿದ ಭಗವದ್ಭಕ್ತರಿಗೆ ಅಸ್ಮದ್ಗುರ್ವಂತರ್ಗತ ಶ್ರೀಮೂಲದಿಗ್ವಿಜಯ ರಾಮಚಂದ್ರಾಭಿನ್ನ ಶ್ರೀಲಕ್ಷ್ಮೀನರಸಿಂಹದೇವರು ಆಯು, ಆರೋಗ್ಯ ಜ್ಞಾನ, ಭಕ್ತಿ ವೈರಾಗ್ಯಗಳನ್ನು ಇತೋಪ್ಯಧಿಕವಾಗಿ ಸಮೃದ್ಧಿಯಾಗಿ ದಯಪಾಲಿಸಲಿ ಎಂದು ಸವಿನಯ ಪ್ರಾರ್ಥನೆ.

ಭಗವದ್ಭಕ್ತರ ಹಾಗೂ ಜಗದ್ಗುರುಗಳ ಪಾದಪದ್ಮಾರಾಧಕರಾದ

**ಲಕ್ಷ್ಮಣಾಚಾರ್ಯ ಹಾಂಗರಿ**

ಧಾರವಾಡ

| | | |
|---|---|---|
| 3. | ಶ್ರೀ ರಾಘವೇಂದ್ರ ದೇಶಪಾಂಡೆ, ಮೂಡಲಗಿ | 5000 |
| 4. | ಶ್ರೀ ಶಾಮಸುಂದರ ಕುಲಕರ್ಣಿ, ಜಮಖಂಡಿ | 1000 |
| 5. | ಶ್ರೀ ರಾಘವೇಂದ್ರ ಅನಂತರಾವ ಕುಲಕರ್ಣಿ-ಧಾರವಾಡ | 1000 |
| 6. | ಶ್ರೀ ರಾಘವೇಂದ್ರ ಕುಲಕರ್ಣಿ, ಜಮಖಂಡಿ | 1000 |
| 7. | ಶ್ರೀ ಪುರೋಹಿತ, ಸ್ಟೇಟ ಬ್ಯಾಂಕ್ ಮ್ಯಾನೇಜರ್ | 500 |
| 8. | ಶ್ರೀ ಡಾ. ಬೇಳವಡಿ, ಜಮಖಂಡಿ | 500 |
| 9. | ಶ್ರೀ ರಂಜನ ಕುಲಕರ್ಣಿ, ಸತ್ತಿ | 500 |
| 10. | ಶ್ರೀ ಮುಗಳೀ, ಧಾರವಾಡ | 500 |
| 11. | ಶ್ರೀ ಭೀಮಸೇನ ನಾರಾಯಣ ಬೆಳಗಲಿ, ಸಾಂಗಲಿ | 500 |
| 12. | ಶ್ರೀ ಪುರಂದರದಾಸ ವಾ. ಶಿಂಗರೆ, ಪುಣೆ | 500 |
| 13. | ಶ್ರೀ ಅಪ್ಪಣ್ಣಾ ಬಂಡಾಚಾರ್ಯ ಅಧ್ಯಾಪಕ, ಡೊಂಬಿವಲಿ | 500 |
| 14. | ಶ್ರೀ (ಪಾಥರ್ಡೀ) ಬ್ರದರ್ಸ-ಮದಭಾವೀ | 500 |
| 15. | ಶ್ರೀ ಬಿಂದೂರಾವ ಕುಲಕರ್ಣಿ, ಖವಟಕೊಪ್ಪ | 500 |
| 16. | ಶ್ರೀ ರಾಘವೇಂದ್ರ, ಯಲಗುರ್ದರಾವ ಕುಲಕರ್ಣಿ, ಮೋಟಗುಡ್ಡ ವಿಜಾಪುರ | 500 |
| 17. | ಶ್ರೀ ಹುಲ್ಯಾಳಕರ ವಕೀಲ, ಜಮಖಂಡೀ | 200 |
| 18. | ಶ್ರೀ ಶೂರ್ಪಾಲಯ ಕ್ಷೇತ್ರ | 200 |
| 19. | ಶ್ರೀ ದೇಶಪಾಂಡೆ, ಸ್ಟೇಟ ಬ್ಯಾಂಕ್, ಧಾರವಾಡ | 200 |
| 20. | ಶ್ರೀ ಪ್ರಭಂಜನಾಚಾರ್ಯ ವ್ಯಾಸನಕೆರೆ, ಬೆಂಗಳೂರು | 200 |
| 21. | ಶ್ರೀ ವಾಮನ ಕೃಷ್ಣಾಚಾರ್ಯ ಜೋಶೀ, ಡೊಂಬಿವಲೀ | 151 |
| 22. | ಶ್ರೀ ಪಾಂಡುರಂಗ ಅರಬಟ್ಟಿ | 101 |
| 23. | ಶ್ರೀ ಡಾ. ಜಹಾಗೀರದಾರ | 101 |
| 24. | ಶ್ರೀ V. G. ಅಧ್ಯಾಪಕ | 100 |
| 25. | ಶ್ರೀ M .P. ಮೋಖಾಶೀ | 101 |
| 26. | ಶ್ರೀ G. V. ಜೋಷಿ | 101 |
| 27. | ಶ್ರೀ R. R. ಲೋಕಾಪುರ | 101 |
| 28. | ಶ್ರೀ S. S. ಸರಾಫು | 101 |
| 29. | ಶ್ರೀ V. V. ಅಧ್ಯಾಪಕ | 101 |

3. ಅಶ್ವತ್ಥರೂಪೀ ವಿಷ್ಣುವಿನ ಮೂಲಸ್ಥಾನದಿಂದ 3
ಕೃಷ್ಣಾದೇವಿಯು ಜಲರೂಪಳಾಗಿ ಪ್ರವಹಿಸಿದಳು 19
4. ಆಮಲಕೀವೃಕ್ಷದಿಂದ ವೇಣಾನದಿ ಪ್ರವಾಹ ಉತ್ಪತ್ತಿ–ಗೋಕರ್ಣತೀರ್ಥ 29
5. ಗಣಿಕಾತೀರ್ಥ ವರ್ಣನ 36
6. ಕೃಷ್ಣವೇಣೀ ಕಮಂಡಲೀ ಸಂಗಮ 50
7. ಸತ್ಯತೀರ್ಥ 55
8. ವಿಷ್ಣುತೀರ್ಥ 64
9. ಅಗ್ನಿತೀರ್ಥ ವರ್ಣನಂ 70
10. ವೈರಾಜಕ್ಷೇತ್ರ ವರ್ಣನಂ 85
11. ರಾಮತೀರ್ಥ 96
12. ಜಾಹ್ನವೀತೀರ್ಥ 100
13. ಕನ್ಯಾಗತೇ ಕೃಷ್ಣಾಯಾಂ ಭಾಗೀರಥೀ ಸನ್ನಿಧಾನ 109
14. ಕೃಷ್ಣಾ ಗಂಗಾ ಸಂಗಮ, ಗೋಷ್ಪದತೀರ್ಥ ಮೃತಸಂಜೀವಿನೀತೀರ್ಥ 122
15. ಚಂದ್ರಿಕಾಸಂಗಮತೀರ್ಥ 130
16. ಖದಿರೀ ಸಂಗಮ, ಗಣೇಶತೀರ್ಥ, ಕೋಟೀಶ್ವರತೀರ್ಥ, ನಾಗತೀರ್ಥ 135
17. ಶಕುಂತ ತೀರ್ಥ 145
18. ಕೃಷ್ಣಾವೇಣಾ ಸಂಗಮತೀರ್ಥ 150
19. (ಕರಹಾಟಕ್ಷೇತ್ರಸಂಗಮ) ಕೃಷ್ಣವೇಣೀ, ಕಕುದ್ಮಿನೀಸಂಗಮ 156
20. ಪಕ್ಷಿತೀರ್ಥ, ಜಂಬೂಕತೀರ್ಥ, ಬಾಹುತೀರ್ಥ 162
21. ವಲ್ಮೀಕತೀರ್ಥ 169
22. ಪಾಪನಾಶನತೀರ್ಥ, ಭುವನೇಶ್ವರೀ ಮನೋಭೀಷ್ಟಸ್ತೋತ್ರವರ್ಣನಂ 174
23. ಮಾರ್ಕಾಂಡೇಯತೀರ್ಥ 176
24. ಅಮರತೀರ್ಥ ವರ್ಣನಂ 185
25. ಸರ್ವತೀರ್ಥ ವರ್ಣನಂ 190
26. ಕೋಪೇಶ ವರ್ಣನಂ 192
27. ಶುಕ್ಲತೀರ್ಥ 202
28. ವೈರಾಗ್ಯ ವರ್ಣನಂ 207

37. ನೃಸಿಂಹ ಕಥಾನಿರೂಪಣಂ 252

38. ಮಂಜುಲತೀರ್ಥ ವರ್ಣನಂ 259

39. ಮಂಜರೀತೀರ್ಥ 262

40. ವ್ಯಾಸೋತ್ಪತ್ತಿ ಪೂರ್ವಕ, ವ್ಯಾಸತೀರ್ಥ 267

41. ತ್ರೈಲೋಕ್ಯ ಪಾವನತೀರ್ಥ 272

42. ಬ್ರಾಹ್ಮತೀರ್ಥ, ವಾಲಖಿಲ್ಯತೀರ್ಥ, ಶುಕತೀರ್ಥ, ನೃಸಿಂಹತೀರ್ಥ 274

43. ತ್ರಿಮೂರ್ತ್ಯಾತ್ಮಕ ನೃಸಿಂಹತೀರ್ಥ 279

44. ಕನ್ಯಾಗತ ಮಾಹಾತ್ಮ್ಯ 284

45. ಜ್ವಾಲಾನೃಸಿಂಹ ಮಾಹಾತ್ಮ್ಯ ವರ್ಣನಂ 290

46. ಸಪ್ತಕಲಿಲೋದ್ಧಾರತೀರ್ಥ, ಭಾರತತೀರ್ಥ, ಅಮೃತವಾಹೀನೀತೀರ್ಥ,
ಸರ್ವಸಂಜೀವನೀತೀರ್ಥ, ಮಧುರತೀರ್ಥ, ತ್ರೈಲೋಕ್ಯಪಾವನತೀರ್ಥ 299

47. ಭಕ್ತಾನುಕಂಪಿನೀ ಮಹಾಮಾಯಾವತೀತೀರ್ಥ 310

48. ವಿಶ್ವತಾರಕತೀರ್ಥ, ಭೃಗುತೀರ್ಥ 317

49. ಜಂಬುತೀರ್ಥ, ವಿರಜಾತೀರ್ಥ 320

50. ಕೃಷ್ಣಾತೀರ್ಥ, ಉತ್ತರವಾಹಿನೀತೀರ್ಥ 323

51. ಸೀತಾತೀರ್ಥ, ಕೃಷ್ಣತೀರ್ಥ 333

52. ಸಂಗಮತೀರ್ಥ, ಬ್ರಹ್ಮತೀರ್ಥ, ಪಿತೃತೀರ್ಥ,
ಶ್ರೀತೀರ್ಥ, ಗೌರೀತೀರ್ಥ, ಗೋತೀರ್ಥ 349

53. ಅನಂತತೀರ್ಥ, (ಸರ್ವರೋಗ ಭಯನಿವಾರಣ) 361

54. ಕೋಟಿತೀರ್ಥ, ಶೂರ್ಪಾಲಯಕ್ಷೇತ್ರ, ಚಕ್ರತೀರ್ಥ 366
ಶೂರಪಾಲಯಕ್ಷೇತ್ರ ವರ್ಣನೆ, ವಿಷ್ಣುತೀರ್ಥ ಮಲಾಪಹಾಸಂಗಮತೀರ್ಥ 375

55. ಜ್ವಾಲಾಮಯತೀರ್ಥ, ಕಪಿಲಾತೀರ್ಥ,
ಸಂಗಮೇಶ್ವರ ತೀರ್ಥ, ಮಲಾಪಹಾರಿಸಂಗಮ ವರ್ಣನೆ 387

56. ಐರಾವತತೀರ್ಥ, ಛಾಯಾಭಗವತೀತೀರ್ಥ 397

57. ಸಪ್ತರ್ಷಿಗಳ ಸಂಜ್ಞಕತೀರ್ಥ, ಭೀಮೇಶ್ವರ, ನಿವೃತ್ತಿ ಸಂಗಮತೀರ್ಥ 403
ಛಾಯಾಭಗವತೀತೀರ್ಥ ವರ್ಣನಂ 408

58. ಕೃಷ್ಣತೀರ್ಥ, ಮಲ್ಲಿಕಾರ್ಜುನತೀರ್ಥ 419

# अथ कृष्णामाहात्म्यम्

## ॥ अथ प्रथमोऽध्यायः ॥

ऋषय ऊचुः–

त्यक्षामो भगवन् प्राणान् धर्मस्यार्थे सुदुस्त्यजान् ।
सङ्गदोषान् अन्नदोषान् निर्वीर्यान् भ्रष्टबीजकान् ॥ १ ॥

तदेवं कलिदोषेभ्यो भीताः स्वामिन् समुद्यताः ।
वयं महापथं गन्तुं कं यामः शरणं वद ॥ २ ॥

**ಋಷಿಗಳು ಹೇಳುತ್ತಾರೆ–**

ಪರಮಪೂಜ್ಯರಾದ ನಾರದರೇ! ಧರ್ಮದ ಸಲುವಾಗಿ ನಾವು ಪರಮ ದುರ್ಲಭವಾದ ಪ್ರಾಣಗಳನ್ನಾದರೂ ಬಿಡುತ್ತೇವೆ, ಆದರೆ ಈ ದುರ್ಜನರ ಸಹವಾಸ, ದುಷ್ಟವಾದ ಅನ್ನದೋಷ, ದುರ್ಬಲಿಗಳಾದ ಬೀಜಭ್ರಷ್ಟರಾದವರು ಇವೇ ಮುಂತಾದ ಕಲಿಯ ಸಂಬಂಧಿಯಾದ ದೋಷಗಳಿಂದ ಭಯಗ್ರಸ್ತರಾಗಿರುವೆವು. ಪರಮಪೂಜ್ಯರೇ! ನಾವು ಸದ್ಗತಿಯನ್ನು, ಮೋಕ್ಷಮಾರ್ಗವನ್ನು ಪಡೆಯಬೇಕೆಂಬ ಪ್ರಯತ್ನದಲ್ಲಿ ಇದ್ದೇವೆ. ನಾವು ಯಾರಿಗೆ ಶರಣ ಹೋಗಬೇಕು ಹೇಳಿರಿ ೧-೨

नारद उवाच–

सत्यं सन्ति महाभागाः दुर्निवाराश्च ते कलौ ।
एतदेव समुद्दिश्य गताः पार्थाः महापथम् ॥ ३ ॥

**ನಾರದರು ಹೇಳುತ್ತಾರೆ–**

ಪರಮ ಭಾಗ್ಯವಂತರೆ! ಈ ಕಲಿಯುಗದಲ್ಲಿ ಕಲಿಯ ಸಂಬಂಧಿಯಾದ ದೋಷಗಳು ಅಪರಿಹಾರ್ಯವಾಗಿವೆ, ನಿಜ. ಆದರೆ ಜ್ಞಾನಿಗಳು ಇದೇ ಉದ್ದೇಶವಾಗಿ ಮಹಾಮಾರ್ಗವನ್ನು ಅನುಸರಿಸಿದರು ೩

तथापि विप्रदेहानां धृत्या यदिह लभ्यते ।

कलौ युगं तु यत्पुण्यं न तत्तुल्यं कृतं युगं ॥ ५ ॥

ಕಲಿಯುಗದಲ್ಲಿ ಆತ್ಮಜ್ಞಾನವಿಲ್ಲದವರು, ದ್ವೇಷಿಗಳು ಇರುವರು. ಆದರೇ ತಮ್ಮಂಥ ಮಹಾಜ್ಞಾನಿಗಳಿಗೆ ಕಲಿಯುಗದಲ್ಲಿಯೂ ಕೂಡ ಕಲಿಯು ಏನೂ ಮಾಡಲಾಗುವುದಿಲ್ಲ. ಯಾಕೆಂದರೆ- ಕಲಿಯುಗದಲ್ಲಿ ಏನು ಪುಣ್ಯ ಸಾಧಿಸುವುದೋ, ಅದು ಕೃತಯುಗದಲ್ಲಿಯೂ ಸಾಧಿಸಲಾಗುವುದಿಲ್ಲ ೫

**अनात्मनो ह्यभक्तस्य भवेत्कलियुगः सदा।**
**सुधी यः श्रीशभक्तस्य सदाह्लादि कृतं युगम् ॥ ६ ॥**

ಪರಮಾತ್ಮನ ಜ್ಞಾನವಿಲ್ಲದ ಅಭಕ್ತನಾದವನಿಗೆ ಯಾವಾಗಲೂ ಕಲಿಯುಗವೇ. ಮತ್ತು ಭಗವದ್ಭಕ್ತರಾದ ಜ್ಞಾನಿಗಳಿಗೆ ಯಾವಾಗಲೂ ಆನಂದಕರವಾದ ಕೃತಯುಗವೇ ಆಗಿರುತ್ತದೆ ೬

**यत्तु कलिस्वभावेन निहितः केशवः कलौ।**
**तत्रापि श्रूयतां त्राणं देवैरेव हि निर्मितम् ॥ ७ ॥**

ಸ್ವಾಭಾವಿಕ ಕಲಿಯ ಪ್ರಾಬಲ್ಯದಿಂದ ಶ್ರೀಪರಮಾತ್ಮನು ಕಲಿಯುಗದಲ್ಲಿ ಮರೆಯಾಗಿರುವನು. ಆದರೂ ಸಜ್ಜನರನ್ನು ರಕ್ಷಣೆ ಮಾಡುವುದಕ್ಕಾಗಿ ದೇವತೆಗಳಿಂದಲೇ ಸಿದ್ಧ ಮಾಡಿರುವ ಉಪಾಯ ಕೇಳಿರಿ ೭

**सृष्ट्यर्थे नोदितो ब्रह्मा कल्पादौ किल विष्णुना।**
**प्रांजलिस्तु प्रणम्येषमिममर्थं व्यजिज्ञपत् ॥ ८ ॥**

ಕಲ್ಪದ ಆರಂಭದಲ್ಲಿ ಶ್ರೀಪರಮಾತ್ಮನು ಸೃಷ್ಟಿಗೋಸ್ಕರವಾಗಿ ಬ್ರಹ್ಮದೇವರನ್ನು ಹುಟ್ಟಿಸಿದನು. ಆಗ ಬ್ರಹ್ಮದೇವರು ಪ್ರಾಂಜಲಿಬದ್ಧರಾಗಿ ಶ್ರೀಪರಮಾತ್ಮನಿಗೆ ಈ ರೀತಿಯಾಗಿ ಈ ವಿಷಯವನ್ನು ವಿಜ್ಞಾಪನೆ ಮಾಡಿಕೊಂಡರು– ೮

**ब्रह्मोवाच–**

**कार्या चतुर्युगावस्था सर्वस्यैव त्वदाज्ञया।**

श्रीविष्णुरुवाच–

सत्यं ब्रह्मन् त्वया त्राणं कार्यं नैवान्यतः स्थितिः ।
तत् त्वं तदर्थं तीर्थानि कल्पयित्वा पुनः पुनः ॥ १० ॥

ವಿಷ್ಣು ಹೇಳುವನು –

ಹೇ ಬ್ರಹ್ಮನೇ! ನಿನ್ನಿಂದ ನಿಜವಾಗಿಯೂ ರಕ್ಷಣ ಕಾರ್ಯವಾಗುವುದಿಲ್ಲ. ಇನ್ನೊಬ್ಬರಿಂದಲೂ ಆಗುವುದಿಲ್ಲ. ಆದಕಾರಣ ರಹಸ್ಯವಾಗಿ ಹೇಳುವೆನು. ಮೇಲಿಂದ ಮೇಲೆ ತೀರ್ಥಗಳನ್ನು ಸೃಷ್ಟಿ ಮಾಡುವೆನು ೧೦

पर्वतांश्च महानद्यो नदप्रस्त्रवणानि च ।
विविधानि च तीर्थानि सृज त्वं पूर्ववद्भुवि ॥ ११ ॥

ಪರ್ವತಗಳನ್ನು, ಮಹಾನದಿಗಳನ್ನು, ಉಪನದಿಗಳನ್ನು, ನಾನಾಪ್ರಕಾರಗಳಾದ ತೀರ್ಥಗಳನ್ನು ಮೋದಲಿನಂತೆಯೇ ಭೂಮಂಡಲದಲ್ಲಿ ಸೃಷ್ಟಿ ಮಾಡು ೧೧

मातरं सर्वतीर्थानां नदीनां अग्रजां त्वहम् ।
स्त्रक्ष्यामि पूर्ववत्कृष्णां मन्मयीं जगतः स्थितेः ॥ १२ ॥

ಜಗತ್ತಿನ ರಕ್ಷಣಕ್ಕೋಸ್ಕರವಾಗಿ ನನ್ನ ಸ್ವರೂಪದಂತೆಯೇ ಇರುವ, ಎಲ್ಲ ನದಿಗಳಿಗೆ ಅಣ್ಣನಂತೆ (ಅಗ್ರಜನಂತೆ), ಎಲ್ಲ ತೀರ್ಥಗಳಿಗೆ ತಾಯಿಯಂತೆ ಕೃಷ್ಣಾ(ನದಿ)ದೇವಿಯನ್ನು ಮೊದಲಿನಂತೆಯೇ ಸೃಷ್ಟಿಮಾಡುವೆನು ೧೨

तीर्थानां हि प्रभावेन कलिकल्मषशत्रुणा ।
कृष्णायाश्चापि सान्निध्यात् पापं नैव भविष्यति ॥ १३ ॥

ತೀರ್ಥಗಳ ಪ್ರಭಾವದಿಂದಲೂ, ಕೃಷ್ಣಾದೇವಿಯ (ನದಿಯ) ಸಾನ್ನಿಧ್ಯದಿಂದಲೂ ಕಲಿಯ ಕಲ್ಮಷವೆಂಬ ಶತ್ರುವಿನಿಂದ ಸಂಭವಿಸುವ ಯಾವ ಪಾಪವೂ ಲೇಪವಾಗುವುದಿಲ್ಲ ೧೩

एवमुक्त्वा स्वयं विष्णुः गर्गादिमुनयस्तदा ।
ससर्ज कृष्णां ब्रह्मापि तीर्थान्यन्यानि चाज्ञया ॥ १५ ॥

**ನಾರದರು ಹೇಳುವರು–**

ಗರ್ಗಾದಿ ಮುನಿಗಳೇ ! ಹೀಗೆ ಹೇಳಿ ಸ್ವತಃ ಶ್ರೀನಾರಾಯಣನು ಕೃಷ್ಣಾದೇವಿಯನ್ನು ಸೃಷ್ಟಿಸಿದನು. ಬ್ರಹ್ಮದೇವರೂ ಕೂಡ ಭಗವದಾಜ್ಞೆಯಿಂದ ಬೇರೆ-ಬೇರೆ ತೀರ್ಥಗಳನ್ನು ಸೃಷ್ಟಿಸಿದರು ೧೫

इत्थं दुर्वारदोषौघत्राणार्थं निर्मितानि हि ।
कलौ तीर्थानि तद्भक्तं न दोषः कस्यचित् स्पृशेत् ॥ १६ ॥

ನಿವಾರಣೆ ಮಾಡಲು ದುಃಸಾಧ್ಯಗಳಾದ ದೋಷಗಳ ಸಮೂಹಗಳಿಂದ ರಕ್ಷಿಸುವುದರ ಸಲುವಾಗಿ ಕಲಿಯುಗದಲ್ಲಿ ತೀರ್ಥಗಳು ನಿರ್ಮಿಸಲ್ಪಟ್ಟಿರುವವು. ಭಗವದ್ಭಕ್ತರಿಗೆ ಕಲಿಯುಗದ ಯಾವುದೇ ದೋಷಗಳು ಲೇಪವಾಗುವುದಿಲ್ಲ ೧೬

यथा मन्त्रौषधाभिज्ञो ज्वालामध्ये न दह्यते ।
एवं सदैव तीर्थार्थी अधृष्यः कलिजैरघैः ॥ १७ ॥

ಹೇಗೆ ಮಂತ್ರ ಔಷಧಗಳ ರಹಸ್ಯವನ್ನು ಬಲ್ಲವನು ಅಗ್ನಿ ಜ್ವಾಲೆಗಳ ಮಧ್ಯೆ ನಿಂತರೂ ಸುಡುವದಿಲ್ಲವೋ, ಅದರಂತೇ ಎಲ್ಲ ತೀರ್ಥಕ್ಷೇತ್ರ ಮಹಿಮೆಯನ್ನು ತಿಳಿದವನು ಕಲಿಯ ಪಾಪಗಳಿಂದ ಬದ್ಧನಾಗುವದಿಲ್ಲ ೧೭

तस्मात् भजत तीर्थानि स्मरन्तोऽघहरं हरिम् ॥
एवं कृतयुगं च स्यात् मा प्रयात महापथम् ॥ १८ ॥

ಅದ ಕಾರಣ ಪಾಪ ಪರಿಹಾರಕನಾದ ಹರಿಯನ್ನು, ತೀರ್ಥಕ್ಷೇತ್ರಗಳನ್ನು ಉಪಾಸನೆ ಮಾಡತಕ್ಕದ್ದು. ಇದು ಕೃತಯುಗದ ಸಮಾನವಾಗಿದೆ. ಇದಕ್ಕೆ ಏನೂ ಶ್ರಮ ಪಡಬೇಕಾಗಿಲ್ಲ. ೧೮

**ऋषय ऊचुः**

अहो भगवता नूनं रक्षार्थं ब्रूहि नोऽनघ ।

भूयः कथय कारुण्यात् तां कृष्णां तीर्थमातरम् ।
यथा ससर्ज लक्ष्मीशः स्वयं प्राह च यादृशीम् ॥ २० ॥

ಲಕ್ಷ್ಮೀಪತಿಯಾದ ಪರಮಾತ್ಮನು ಸ್ವತಃ ಯಾವ ತಾಯಿಯಾದ ಕೃಷ್ಣಾದೇವಿಯನ್ನು, ತೀರ್ಥವನ್ನು ಸೃಷ್ಟಿ ಮಾಡಿರುವನು ಅದನ್ನು ಮತ್ತೆ ಮತ್ತೆ ಅಂತಃಕರಣಪೂರ್ವಕವಾಗಿ ಹೇಳಿರಿ. ೨೦

**नारद उवाच–**

तदेवं ब्रह्मणाऽप्येवं पृष्टो विस्मयशालिना ।
तस्या माहात्म्यमतुलं भूयः प्राहेति केशवः ॥ २१ ॥

**ನಾರದರು ಹೇಳುತ್ತಾರೆ–**

ಹೀಗೆ ಬ್ರಹ್ಮದೇವರು ಪ್ರಶ್ನೆಮಾಡಿದಾಗ ಆಶ್ಚರ್ಯಚಕಿತನಾಗಿ ಕೇಶವನು ಅಸದೃಶವಾದ ಕೃಷ್ಣಾಮಾಹಾತ್ಮ್ಯೆಯನ್ನು ವಿಸ್ತಾರವಾಗಿ ಹೇಳಿದನು. ೨೧

**श्रीभगवानुवाच–**

जगत्स्थित्यै मया ब्रह्मन् कल्पे कल्पे विसृज्यते ।
कृष्णा नाम महापुण्या मत्कलाघौघनाशिनी ॥ २२ ॥

**ಶ್ರೀಭಗವಂತನು ಹೇಳುತ್ತಾನೆ–**

ಬ್ರಹ್ಮನೇ ! ಸಕಲ ಪಾಪಸಮೂಹವನ್ನೂ ನಾಶಮಾಡುವ ನನ್ನ ಕಲಾತ್ಮಕಳಾದ ಮಹಾಪುಣ್ಯಕರಳಾದ ಕೃಷ್ಣಾ ದೇವಿಯು ಜಗತ್ತಿನ ರಕ್ಷಣಕ್ಕೋಸ್ಕರ ಪ್ರತಿಒಂದು ಕಲ್ಪದಲ್ಲಿ ಸೃಷ್ಟಿಸಲ್ಪಡುತ್ತಾಳೆ ೨೨

तया कलिः क्षयं सर्वो नीतोऽसौ जगदार्तिकृत् ।
अतिभीतश्च सन्त्रासात् निःशङ्को न प्रवर्तते ॥ २३ ॥

೨೪

**बहुना किं सकृत्स्पृष्ट्वा साक्षाद्धर्मनदीमिमाम् ।**
**स्पृशन् सर्वगतो वायुः पावयत्यखिलं जगत्** ॥ २५ ॥

ಬಹಳ ಹೇಳುವದೇನು ? ಸಾಕ್ಷಾತ್ ವಾಯುದೇವರು ಈ ಧರ್ಮನದಿಯನ್ನು ಒಂದೇ ಒಂದು ಸಲ ಸ್ಪರ್ಶಮಾಡಿ ಸರ್ವತ್ರ ಸಂಚರಿಸುವವರಾಗಿ ಅಖಂಡ ಜಗತ್ತನ್ನೇ ಪವಿತ್ರ ಮಾಡುವರು ೨೫

**कायद्वयं समुद्दिश्य कृष्णावेणी भवाम्यहम् ।**
**जगतां धारणार्थाय सद्भक्तानां च मुक्तये** ॥ २६ ॥

ಎರಡು ಶರೀರವನ್ನು ಉದ್ದೇಶಮಾಡಿಕೊಂಡು ನಾನು ಕೃಷ್ಣಾವೇಣೀ ಎಂದು ಜಗತ್ತಿನ ಸಂರಕ್ಷಣಕ್ಕೋಸ್ಕರವಾಗಿಯೂ ಕೃಷ್ಣಾವೇಣೀ ಎಂದು ಕರೆಯಲ್ಪಡುತ್ತೇನೆ ೨೬

**अस्ति मुक्तौ यो योगः स योगोऽप्यतिदुष्करः ।**
**सुकरस्त्वेष सर्वेषां कृष्णावेण्यां समाश्रयः** ॥ २७ ॥

ಮುಕ್ತಿಗಾಗಿ ಯಾವ ಉಪಾಯವು ಇರುವುದೋ, ಆ ಉಪಾಯವು ಬಹಳ ದುಷ್ಕರವಾದದ್ದು, ಆದರೆ ಕೃಷ್ಣವೇಣೀಯನ್ನು ಆಶ್ರಯ ಪಡೆದವಗೆ ಆ ಉಪಾಯವು ಬಹಳ ಸುಲಭವಾದದ್ದಾಗುವದು ೨೭

**कलिदुष्टास्त्विमां मर्त्या भजमाना मदात्मिकाम् ।**
**कीर्तयन्तः स्मरन्तो वा भक्तानां च परस्परम्** ॥ २८ ॥

**यथा यथा भजेन्मर्त्यः सिद्धिर्भूयात् तथा तथा ।**
**प्रणयात् प्रयता नित्यं भक्ता ये तामुपासते** ॥ २९ ॥

ಕಲಿಯಿಂದ ದುಷ್ಟರಾದ ಮನುಷ್ಯರು ನನ್ನ ಸ್ವರೂಪಭೂತಳಾದ ಕೃಷ್ಣವೇಣೀಯನ್ನು ಸೇವಿಸುವವರು, ಕೀರ್ತನ ಮಾಡುವವರು, ಸ್ಮರಣ ಮಾಡುವ ನನ್ನ ಭಕ್ತರಿಗೆ, ಅವರ ಸಾಧನೆಯಂತೆ ಸಿದ್ಧಿಯನ್ನು ಕೊಡುವಳು. ಆದಕಾರಣ ಭಕ್ತರು ಬಹಳ ಅಂತಃಕರಣ

ಮಾಡುವಂಥ ಜ್ಞಾನವನ್ನು ವೃದ್ಧಿಸುವಳು ೩೦

अद्योवतां सर्वजगत्तमोघ्नीं स्त्रक्ष्यामि माते कलिनिःसृजत्त्वम् ।
लोकांश्चतुर्वक्त्र न हि स्थितायामेकप्रभायां तमसोऽभिभूतिः ॥ ३१ ॥

ಹೇ ಚತುರ್ಮುಖನಾದ ಬ್ರಹ್ಮನೇ !ಹೇಗೆ ಒಬ್ಬ ಸೂರ್ಯನ ಬೆಳಕಿನಿಂದ ಜಗತ್ತಿನ ಕತ್ತಲೆಯು ನಾಶವಾಗುವುದೋ ಹಾಗೆಯೇ ಒಬ್ಬ ಕೃಷ್ಣವೇಣೀ ದೇವಿಯಿಂದ ಕಲಿಯ ದೋಷವನ್ನು ಹೊರದೂಡಿಸಿ ಜಗತ್ತಿನ ಪಾಪವನ್ನೂ ಪರಿಹಾರಮಾಡುವ ಕೃಷ್ಣವೇಣೀ ಯನ್ನು ಸೃಷ್ಟಿಸುವೆನು ೩೧

नारद उवाच –

इत्युक्त्वा भगवान् विष्णुः महामाहेश्वरस्ततः ।
कृष्णां ससर्ज स्वतनोः दिव्यमूर्तिं सुलोचनाम् ॥ ३२ ॥

श्यामलां शङ्खचक्राङ्कां चतुर्बाहुसुभूषिताम् ।
पीताम्बरां सुप्रसन्नां साक्षात्कल्पलतामिव ॥ ३३ ..

ಮಹಾಮಹೇಶ್ವರನಾದ ಭಗವಾನ್ ಸರ್ವೋತ್ತಮನಾದ ವಿಷ್ಣುವು ತನ್ನ ಶರೀರದಿಂದಲೇ ಬಹಳ ಸುಂದರಳಾದ ದಿವ್ಯ ಮೂರ್ತಿಮಂತಳಾದ ನಾಲ್ಕು ಕೈಗಳಲ್ಲಿ ಶಂಖ ಚಕ್ರ ಗದಾ ಪದ್ಮ ಮೊದಲಾದ ಆಭರಣಗಳಿಂದ ಸುಭೂಷಿತಳಾದ ನೀಲವರ್ಣ ವಿಶಿಷ್ಟಳಾದ ಪ್ರಸನ್ನವದನಳಾದ ಪೀತಾಂಬರ ಧಾರಣ ಮಾಡಿದ ಸಾಕ್ಷಾತ್ ಕಲ್ಪವೃಕ್ಷದಂತಿರುವ ಕೃಷ್ಣಾದೇವಿಯನ್ನು ಸೃಷ್ಟಿಸಿದನು ೩೨-೩೩

चन्द्रादिकान्तिमुत्सृज्य वसुकान्तिप्रदायिनीम् ।
रेजे साक्षाद्दिवोत्पन्ना सा लावण्याऽधिदेवता ॥ ३४ ॥

ಚಂದ್ರನೇ ಮುಂತಾದ ಗ್ರಹಗಳ ತೇಜಸ್ಸನ್ನು ದೂರಮಾಡಿ ಭೂಮಿಗೆ ಕಾಂತಿಯನ್ನು ಕೊಡುವವಳಾಗಿ ಸಾಕ್ಷಾತ್ ದೇವಲೋಕದಿಂದ ಉತ್ಪನ್ನಳಾಗಿ ಸೌಂದರ್ಯದ ಅಧಿದೇವತೆಯಾಗಿ ಶೋಭಿಸಿದಳು ೩೪

प्रसन्ना दर्शनीया तन्मखप्रभया दिशः

पुत्रित्वं जगृहे ब्रह्मा प्रसन्नस्य हरेर्वरात् ॥ ३६ ॥

ಕಲಿಗೆ ಭೀತಿಯನ್ನುಂಟುಮಾಡಿಕೊಡತಕ್ಕವಳಾದ ಶುಭಕರಳಾದ ಜಗತ್ತನ್ನೇ ಪವಿತ್ರಮಾಡಿಕೊಡತಕ್ಕ ಆ ಕೃಷ್ಣವೇಣಿಯನ್ನು ನೋಡಿ ಬ್ರಹ್ಮದೇವರು ಪ್ರಸನ್ನನಾದ ಪರಮಾತ್ಮನ ವರಬಲದಿಂದ ಮಗಳನ್ನಾಗಿ ಸ್ವೀಕರಿಸಿದರು ೩೬

ततः सृष्ट्वा जगत्सर्वं तत्र तीर्थान्यकल्पयत् ।
ब्रह्मा जगदघघ्नानि यथा प्राह जगद्गुरुः ॥ ३७ ॥

ಜಗದ್ಗುರುವಾದ ಭಗವಂತನ ಆಜ್ಞಾನುಸಾರವಾಗಿ ಬ್ರಹ್ಮದೇವರು ಜಗತ್ತನ್ನು ಸೃಷ್ಟಿಸಿ, ಆ ಜಗತ್ತಿನಲ್ಲಿ ಜಗತ್ತಿನ ಪಾಪವನ್ನು ತೊಳೆದುಹಾಕುವ ಅನಂತ ಮಹಾ ಮಹಿಮೋಪೇತವಾದ ತೀರ್ಥಗಳನ್ನೂ ಸೃಷ್ಟಿಸಿದರು ೩೭

कृष्णा तु ब्रह्मलोकाच्च पश्चाद्देवी भुवंगता ।
पावयत्यखिलं लोकं अनेकमहिमास्पदा ॥ ३८ ॥

ಆಮೇಲೆ ಆ ಕೃಷ್ಣವೇಣಿದೇವಿಯು ಬ್ರಹ್ಮಲೋಕದಿಂದ ಭೂಲೋಕಕ್ಕೆ ಬಂದು ಎಲ್ಲ ಲೋಕಗಳನ್ನೂ ತನ್ನ ಅನೇಕ ಮಹಿಮೆಗಳಿಂದ ಪವಿತ್ರ ಮಾಡಿದಳು ೩೮

एवमेषा जगन्माता कृष्णा विष्णुतनुः स्वयम् ।
माहात्म्यमस्यास्त्वखिलं अनेकं को वदिष्यति ॥ ३८ ॥

ಆಮೇಲೆ ಕೃಷ್ಣವೇಣೀ ದೇವಿಯು ಬ್ರಹ್ಮಲೋಕದಿಂದ ಭೂಲೋಕಕ್ಕೆ ಬಂದು ಎಲ್ಲ ಲೋಕಗಳನ್ನು ತನ್ನ ಅನೇಕ ಮಹಿಮೆಗಳಿಂದ ಪವಿತ್ರ ಮಾಡಿದಳು ೩೯

सुरभिः सुरकामधुक् स्मृता भुवि कृष्णेष्टफलप्रपूरिणी ।
सुरभेरियमेव चाधिका सुजनेभ्योऽधिककर्ममोक्षदा ॥ ४० ॥

ದೇವಲೋಕದಲ್ಲಿ ಸಕಲ ಇಷ್ಟಾರ್ಥವನ್ನೂ ಪೂರ್ಣಮಾಡುವ ಕಾಮಧೇನುವಿನಂತೆ ಭೂಮಂಡಲದಲ್ಲಿ ಎಲ್ಲರ ಇಷ್ಟಾರ್ಥವನ್ನು ಪೂರ್ಣಮಾಡಿಕೊಡುವವಳಾಗಿ ಸುರಭಿಯಕಿಂಲೂ ಹೆಚ್ಚಾಗಿ ಮೋಕ್ಷಕೊಡತಕ್ಕವಳು ಇರುವಳು ೪೦

॥ इति श्रीस्कन्दपुराणे कृष्णामाहात्म्ये प्रथमोऽध्यायः ॥

ऋषय: ऊचु:

स्वामिन् कथय कारुण्याद्भूयो माहात्म्यमुत्तमम् ।
कृष्णाया न हि नस्तृप्तिः श्रुण्वन्ता तु वचो मुने ॥ १ ॥

**ಋಷಿಗಳು ಹೇಳುತ್ತಾರೆ –**

ಪರಮಪೂಜ್ಯರಾದ ನಾರದರೇ ! ನಮಗೆ ಕೃಷ್ಣಾಮಹಾತ್ಮ್ಯೆ ಕೇಳಿ ತೃಪ್ತಿ ಆಗಿಲ್ಲ. ಉತ್ತಮೋತ್ತಮವಾದ ಕೃಷ್ಣಾಮಾಹಾತ್ಮ್ಯೆಯನ್ನು ಅಂತಃಕರಣಪೂರ್ವಕವಾಗಿ ಮತ್ತೆ ಹೇಳಿರಿ. ೧

कथं देवी भुवं नीता कानि तीर्थानि तत्र च ।
आश्चर्यमेतद् गुह्यं च त्वदन्यः को वदिष्यति ॥ २ ॥

ಕೃಷ್ಣಾದೇವಿಯು ಭೂಲೋಕಕ್ಕೆ ಹೇಗೆ ಬಂದಳು ? ಕೃಷ್ಣಾತೀರದಲ್ಲಿ ಯಾವ ಯಾವ ತೀರ್ಥಗಳು ಇರುವವು ? ಈ ಗುಹ್ಯವಾದ ಆಶ್ಚರ್ಯಕರವಾದ ಈ ಮಾಹಾತ್ಮ್ಯೆಯನ್ನು ನಿಮ್ಮ ಹೊರತಾಗಿ ಹೇಳತಕ್ಕವರು ಯಾರೂ ಇರುವದಿಲ್ಲ. ೨

इत्युक्तो विप्रमुख्यैस्तैः मुनिर्भागवतोत्तमैः ।
कृष्णाप्रियकथां पुण्यामब्रवीच्च प्रशस्यताम् ॥ ३ ॥

ಹೀಗೆ ಬ್ರಾಹ್ಮಣಶ್ರೇಷ್ಠರಾದ ಭಾಗವತೋತ್ತಮರಾದ ಋಷಿಗಳಿಂದ ಪ್ರಾರ್ಥನೆ ಮಾಡಿಸಿಕೊಂಡವರಾಗಿ ಅತ್ಯಂತ ಪುಣ್ಯಕರವಾದ ಬಹಳ ಪ್ರಿಯಕರವಾದ ಕೃಷ್ಣಾ ಮಾಹಾತ್ಮ್ಯೆಯನ್ನು ಹೇಳುವವರಾದರು. ೩

**नारद उवाच –**

अहो मुक्तिः करस्था वो मनः कृष्णाकथासु यत् ।
अहं च धन्यः सङ्गाद्वा यावत् ज्ञानं वदामि तत् ॥ ४ ॥

ಯಾರ ಮನಃಸು ಕೃಷ್ಣಾಮಾಹಾತ್ಮ್ಯೆ (ಶ್ರವಣಮಾಡುವದರಲ್ಲಿ) ನಿರತವಾಗಿರುವದೋ ಅವರಿಗೆ ಮೋಕ್ಷವು ಅಂಗೈಯೊಳಗೆ ಇರುವದು, ಇದರಲ್ಲಿ ಏನೂ ಆಶ್ಚರ್ಯವಿಲ್ಲ. ನಿಮ್ಮ ಸಹವಾಸದಿಂದ ನಾನೂ ಧನ್ಯನೇ. ಆದಕಾರಣ ನಾನೂ ನಿಮಗೆ ಕೃಷ್ಣಾ

श्रीकृष्णवेणामाहात्म्यं श्रुण्वन्तु मुनिसत्तमाः ।
कलेर्दलनमित्याहुः यत्तदाख्यानमुत्तमम् ॥ ६ ॥

ಹೇ ಋಷಿಶ್ರೇಷ್ಠರೇ! ಉತ್ತಮೋತ್ತಮವಾದ ಈ ಆಖ್ಯಾನವು ಕಲಿಯನ್ನು ನಿರ್ಮೂಲನಮಾಡುವದು. ಆದ ಕಾರಣ ಈ ಕೃಷ್ಣಾವೇಣಿ ಮಾಹಾತ್ಮ್ಯೆಯನ್ನು ಹೇಳುವೆನು ಕೇಳಿರಿ. ೬

यत्रैतत्पठ्यते देशे कलिदोषाः समन्ततः ।
पलायन्ते च गरुडं दृष्ट्वा भीता इवोरगाः ॥ ७ ॥

ಯಾವ ದೇಶದಲ್ಲಿ ಈ ಕೃಷ್ಣವೇಣೀ ಮಾಹಾತ್ಮ್ಯವನ್ನು ಪಠನಮಾಡಲ್ಪಡುತ್ತದೆಯೋ ಅಲ್ಲಿ ಸುತ್ತಮುತ್ತಲೂ ಪಂಚಕ್ರೋಶಗಳವರೆಗೆ ಕಲಿಯುಗದೋಷಗಳು ಇರುವದಿಲ್ಲ. ಗರುಡನನ್ನು ನೋಡಿದ ಕೂಡಲೇ ಸರ್ಪಗಳು ಹೇಗೆ ಅಂಜಿ ಓಡುವವೋ ಹಾಗೆ ಕಲಿಯಸಂಬಂಧಿ ಪಾಪಗಳು ಓಡಿಹೋಗುವವು. ೭

विपदोत्पावनं सर्वं सम्पदाकर्षणं त्विदम् ।
आख्यानं पठ्यते यत्र देशः स्याच्च शुभोदयः ॥ ८ ॥

ಆಪತ್ತು ವಿಪತ್ತುಗಳನ್ನು ದೂರಸರಿಸಿ ಜ್ಞಾನ ಭಕ್ತಿ ಮುಂತಾದ ದೈವೀ ಸಂಪತ್ತುಗಳನ್ನು ತಂದು ಕೊಡುವ ಈ ಕೃಷ್ಣವೇಣೀ ಮಹಾತ್ಮ್ಯದ ಆಖ್ಯಾನವು ಯಾವ ದೇಶದಲ್ಲಿ ನಡೆಯುವದೋ ಆ ದೇಶವು ಶುಭಕರವಾದದ್ದು ೮

अतिगूढमिदं पूर्वं सर्वज्ञेनैव शंभुना ।
स्कन्दायोक्तं प्रसन्नेन ततोऽस्माभिश्च विश्रुतम् ॥ ९ ॥

ಪ್ರಾಚೀನ ಕಾಲದಿಂದಲೂ ಬಹಳ ರಹಸ್ಯವಾದ ಈ ಕೃಷ್ಣವೇಣೀ ಮಹಾತ್ಮ್ಯವು ಸರ್ವಜ್ಞರಾದ ರುದ್ರದೇವರು ಷಣ್ಮುಖನಿಗೆ ಹೇಳಿದರು. ಪ್ರಶಸ್ತವಾಗಿ ಕೇಳಿರುವೆವು. ೯

वक्ष्याम्यहं वो यूयं च श्रृणुध्वं भो मुनीश्वराः ।

ರುದ್ರದೇವರ ಭಕ್ತರು, ವಿಷ್ಣುಭಕ್ತರು, ಜ್ಞಾನಿಗಳು, ಸಾತ್ವಿಕರು, ಬುದ್ಧಿವಂತರು ಇವರಿಗೆ ಮಾತ್ರ ಪರಮರಹಸ್ಯವಾದ ಈ ರತ್ನವನ್ನು ಕೋಡಿರಿ, ಕೋವಿದರಿಗೆ ಮಾತ್ರ ಕೋಡಿರಿ. ೧೧

**महिम्नस्त्वद्भुतस्यास्य छादितस्य स्वमायया ।**
**भक्तेष्वेवात्मभूतेषु ख्यापनं सह्यते हरिः ॥ १२ ॥**

ಶ್ರೀ ಹರಿಯು ಈ ಅದ್ಭುತವಾದ ಕೃಷ್ಣವೇಣಿಯ ಮಹಾತ್ಮ್ಯವನ್ನು ತನ್ನ ಮಾಯಾ ಶಕ್ತಿಯಿಂದ ಮುಚ್ಚಿ ಇಟ್ಟಿರುವನು. ತನ್ನ ಏಕಾಂತ ಭಕ್ತರಾದವರಿಗೆ ಮಾತ್ರ ಉಪದೇಶಮಾಡಿ ಪ್ರಸಿದ್ಧಮಾಡುವನು. ೧೨

**नास्तिका डाम्भिकाश्चापि हेतुका विषयात्मका: ।**
**कृष्णाकथामृते दिव्ये नैव योग्यास्त्विमे द्विजाः ॥ १३ ॥**

ಹೇ ಬ್ರಾಹ್ಮಣೋತ್ತಮರೇ ! ಕೃಷ್ಣವೇಣಿಯ ಮಹಾತ್ಮ್ಯವನ್ನು ಶ್ರವಣಮಾಡಲಿಕ್ಕೆ ನಾಸ್ತಿಕರು, ಡಾಂಭಿಕರು, ಕಾಮುಕರು, ವಿಷಯ ಭೋಗಿಗಳು ಯೋಗ್ಯರಲ್ಲ. ೧೩

**क्लिश्यमाना भवाम्बोधौ विरोधात् शममिच्छताम् ।**
**कृष्णामाहात्म्यं मर्त्यानां देयं दिव्यमिवौषधम् ॥ १४ ॥**

ಸಂಸಾರಸಮುದ್ರದಲ್ಲಿ ಸಂಕಟಪಡತಕ್ಕವರಿಗೆ ಶಾಂತಿ ಸಮಾಧಾನವಿಲ್ಲದಂಥ ಮನುಷ್ಯರಿಗೆ ಈ ಕೃಷ್ಣಾಮಹಾತ್ಮ್ಯವೆಂಬ ದಿವ್ಯವಾದ ಔಷಧವನ್ನು ಕೊಡತಕ್ಕದ್ದು. ೧೪

**स्वस्थाः श्रृण्वन्तु मे सर्वे कथां कृष्णाश्रयामिमाम् ।**
**तदेका दयिता भक्तिराविर्भवति कामधुक् ॥ १५ ॥**

ಎಲ್ಲ ಋಷಿಗಳೇ ! ಸಮಾಧಾನದಿಂದ ಈ ಕೃಷ್ಣವೇಣೀ ಕಥೆಯನ್ನು ಏಕಾಂತ ಭಕ್ತರಾಗಿ ಕೇಳಿರಿ. ಕಾಮಧೇನು, ಕಲ್ಪವೃಕ್ಷದಂತೆ ಇಷ್ಟಾರ್ಥವು ಪೂರ್ಣವಾಗಿ ಪರಮಾತ್ಮನಲ್ಲಿ ಭಕ್ತಿಯು ವೃದ್ಧಿಯಾಗುವದು. ೧೫

**सद्भक्त्या श्रृण्वतां यान्ति पापानि दारुणान्यपि ।**

सलोके लोकशमने अशोके परमश्रुते ॥ १७ ॥

ತಿಳಿದುಕೊಳ್ಳಲಿಕ್ಕೆ ಬಹಳ ಕಠಿಣವಾದ ಪ್ರಭಾವಶಾಲಿಯಾದ ಈ ಕೃಷ್ಣಾಮಾಹಾತ್ಮ್ಯವನ್ನು ಸುಲಭವಾಗಿ ತಿಳಿಯುವಂತೆ ಉಪದೇಶಮಾಡುವರೋ ಅವರು ವೈಕುಂಠ ಲೋಕದಂತೆ, ಲೋಕವನ್ನು ಶಾಂತಮಾಡಿ ಅಶೋಕವನ್ನು ಪಡೆಯುವರು. ೧೭

तत्स्पर्शस्नानपानादि दूरे तिष्ठत्यहो द्विजाः ।
कृतकृत्यो भवेन्मर्त्यः कृष्णास्मरणकीर्तनैः ॥ १८ ॥

ಅಹೋ ಬ್ರಾಹ್ಮಣ ಶ್ರೇಷ್ಠರೇ ಆ ಕೃಷ್ಣವೇಣೀತೀರ್ಥದ ಸ್ಪರ್ಶ, ಸ್ನಾನ, ಪಾನ, ಮುಂತಾದವುಗಳಿಂದ ಎಷ್ಟೋ ದೂರವಿದ್ದರೂ, ಕೃಷ್ಣವೇಣೀ ದೇವಿಯ ಸ್ಮರಣೆ, ಕೀರ್ತನೆಗಳಿಂದಲೂ ಮನುಷ್ಯರು, ಕೃತಕೃತ್ಯರಾಗುವರು. ೧೮

मायामयोद्भवाः पाशाः कृष्णामाहात्म्यवेदिनाम् ।
नैव स्युः सुप्रबुद्धानां स्वाप्निकोपद्रवा इव ॥ १९ ॥

ಮಾಯಾಪಾಪಗಳಿಂದ ಹುಟ್ಟಿದ ದೋಷಯುಕ್ತವಾದ ಪಾಪಗಳು ಕೃಷ್ಣವೇಣೀ ಬಲ್ಲವರಿಗೆ ಏನೂ ಉಪದ್ರವ ಕೊಡಲಾರವು. ಇಷ್ಟೇ ಅಲ್ಲ, ಜಾಗ್ರತರಾದವರಿಗೆ ಸ್ವಾಪ್ನಿಕ ಉಪದ್ರವ ಹೇಗೆ ಇರುವದಿಲ್ಲವೋ ಹಾಗೆ. ೧೯

सर्वं तत्सुदिनं चैव सर्वं च जगती शुभा ।
स्मरणं कृष्णवेणायाः क्रियते यत्र वै जनैः ॥ २० ॥

ಯಾವ ಯಾವ ಸ್ಥಳದಲ್ಲಿ ಜನರು ಕೃಷ್ಣವೇಣೀ ಸ್ಮರಣ ಮಾಡುವರೋ ಆ ಎಲ್ಲ ಸ್ಥಳಗಳಲ್ಲಿ ಜಗತ್ತಿನಲ್ಲಿ ಇರುವ ಎಲ್ಲವೂ ಸುದಿನವಾಗಿ ಶುಭದಾಯಕವಾಗುವವು. ೨೦

न किञ्चित्पापजातं च जायते मुनिपुङ्गवाः ।
सर्वथा परमाश्चर्यं सर्वं चैतत्प्रभाषितम् ॥ २१ ॥

ಹೇ ಋಷಿಶ್ರೇಷ್ಠರೆ !ಕೃಷ್ಣವೇಣಿಯ ಸ್ಮರಣ ಮಾಡುವವರಿಗೆ ಸ್ವಲ್ಪವಾದರೂ ಪಾಪ ಘಟಿಸುವದಿಲ್ಲ. ಇದು ಬಹಳ ಆಶ್ಚರ್ಯಜನಕವಾಗಿರುವದು. ೨೧

पूर्वं वै सकला देवाः कृष्णामाहात्म्यमुत्तमम् ॥ २३ ॥

सम्यक् तु ज्ञातुमिच्छन्तः तस्योपायमचिन्तयन् ।
ते च सर्वेश्वरं देवं महादेवमनुत्तमम् ॥ २४ ॥

जग्मुः सर्वे तदा तत्र यत्र तिष्ठति वै शिवः ।
ततस्ते ददृशुर्देवाः सर्वालङ्कारभूषिताः ॥ २५ ॥

ಹೇ ಬ್ರಾಹ್ಮಣರೇ ! ಪ್ರಾಚೀನ ಕಾಲದ ಈ ವ್ಯಾಖ್ಯಾನವನ್ನು ಕೇಳಿರಿ. ಪೂರ್ವದಲ್ಲಿ ಎಲ್ಲ ದೇವತೆಗಳು ಉತ್ತಮೋತ್ತಮವಾದ ಕೃಷ್ಣಾ ಮಹಾತ್ಮ್ಯವನ್ನು ಸರಿಯಾಗಿ ತಿಳಿದುಕೊಳ್ಳಬೇಕೆಂಬ ಇಚ್ಛೆಉಳ್ಳವರಾಗಿ ಅದಕ್ಕೆ ಒಂದು ಸರಿಯಾದ ಉಪಾಯವನ್ನು ಕಂಡುಹಿಡಿಯುವದಕ್ಕೆ ವಿಚಾರಮಾಡಹತ್ತಿದರು. ಆ ಎಲ್ಲದೇವತೆಗಳು ಸರ್ವೇಶ್ವರನಾದ ದೇವದೇವನಾದ ಅತ್ಯುತ್ತಮನಾದ ಮಹಾದೇವನನ್ನುಕುರಿತು ಹೋದರು. ಆಗ ಎಲ್ಲ ದೇವತೆಗಳು ರುದ್ರದೇವರು ಎಲ್ಲಿ ಇರುವರೋ ಅಲ್ಲಿ ದೇವತೆಗಳು ಸರ್ವಾಲಂಕಾರ ಭೂಷಿತನಾದ ಈಶ್ವರನನ್ನು ನೋಡಿದರು. ೨೩-೨೪-೨೫

सर्वपापहरं पुण्यं शंभुं चानुपमं सुराः ।
तां भवानीं च कान्तानां सर्वासामधिकां पुरा ॥ २६ ॥

ಸಕಲ ಪಾಪಗಳನನ್ನೂ ಪರಿಹರಿಸುವ ಅಸದೃಶನಾದ ರುದ್ರದೇವರನ್ನೂ ಹಾಗೂ ಎಲ್ಲ ಸುರಸುಂದರಿಯರಾದ ಪತಿವ್ರತೆಯರಿಗಿಂತಲೂ ಅಧಿಕಳಾದ ಭವಾನಿ ಪಾರ್ವತಿಯನ್ನೂ ಕೂಡಾ ದೇವತೆಗಳು ನೋಡಿದರು. ೨೬

कदाचित्तं तु सर्वेशं आसीनं रुचिरासने ।
चतुर्मुखमुखाः सर्वे उपासांचक्रिरे सुराः ॥ २७ ॥

ಒಂದು ದಿವಸ ಮನೋಹರವಾದ ಆಸನದಲ್ಲಿ ಕುಳಿತಂಥ ಸರ್ವೇಶ್ವರನಾದ ಮಹಾದೇವನನ್ನು ಬ್ರಹ್ಮದೇವರೇ ಮುಂತಾದ ಎಲ್ಲ ದೇವತೆಗಳು ಉಪಾಸನೆ ಮಾಡಿದರು. ೨೭

ಜಗತ್ತಿನಲ್ಲಿಯೇ ಜ್ಯೋತಿಷ್ಮತಿ ಲತೆಯ ಬೀಜದಂತೆ ಇರುವ ಸಮುದ್ರದಂತೆಯೇ ತಂಪಾದ ಜಗತ್ತೆಂಬ ವನವನ್ನು ಸುಡತಕ್ಕ ಮಹಾಅಗ್ನಿಯಂತೆ ಇರುವ ಅದ್ವಿತೀಯನಾದ ಮಹೇಶ್ವರನನ್ನು ಹದಿನಾಲ್ಕು ಲೋಕಾತ್ಮಕ ಜಗತ್ತನ್ನೇ ಕ್ರೀಡಾಂಗಣಮಾಡಿ ನಾನಾವಿಧವಾದ ತಂತ್ರಗಳಿಂದ ಕ್ರೀಡಿಸುವ ನಾಶರಹಿತನಾದ ಸಮುದ್ರಸದೃನಾದ ಅಗಾಧಮಹಿಮೆಯುಳ್ಳ ಅಷ್ಟಾಂಗ ಯೋಗಿ (ಅಣಿಮಾದಿ) ಗಳಿಂದ ಕೂಡಿದ ಯಾವ ಕಾಲದಲ್ಲಿಯೂ ವಿಕಾರ ಹೊಂದದೇ ಇರುವ ನಿಶ್ಚಲನಾದ ಅನಂತಮುಖಉಳ್ಳ ಸಾಕ್ಷಿಭೂತನಾದ ರುದ್ರದೇವರನ್ನು ಕುರಿತು ಬ್ರಹ್ಮಇಂದ್ರಾದಿದೇವತೆಗಳಿಂದ ಕೂಡಿಕೊಂಡು ಷಣ್ಮುಖನು ಬಂದನು. ೨೮-೨೯-೩೦

**मुनिभिर्लोकगुरुभिः अनुयातश्च षण्मुखः ।**
**रेजे षडङ्गवान् वेदः पुराणैरिव सर्वदा ॥ ३१ ॥**

ಜಗದ್ಗುರುಗಳಾದ ಋಷಿಗಳಿಂದ ಕೂಡಿಕೊಂಡು ಷಣ್ಮುಖನು ಷಡಂಗ (ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ್ಯ) ಸಹಿತವಾದ ವೇದಗಳು ಅಷ್ಟಾದಶ ಪುರಾಣಗಳಿಂದ ಕೂಡಿಕೋಂಡು ಹೇಗೆ ಶೋಭಿಸಬೇಕೋ ಹಾಗೆ ಸುಶೋಭಿತನಾದನು. ೩೧

**प्रणतः संपरिष्वक्तः शिवाभ्यां उपवेशितः ।**
**क्षणमङ्के प्रशस्ते च सुखस्पर्शे सुखासने ॥ ३२ ॥**

ರುದ್ರದೇವರಿಂದ ಆಲಿಂಗನಮಾಡಿಕೊಂಡು ನಮಸ್ಕಾರಮಾಡಿ ಸುಖಸ್ಪರ್ಶವಾದ ಪ್ರಶಸ್ತವಾದ ಸುಖಾಸನವಾದ ತೋಡೆಯಮೇಲೆ ಒಂದು ಕ್ಷಣ ಕೂತನು. ೩೨

**दर्शनानुगृहीताश्च प्रणेमुर्मुनयो मुदा ।**
**सभायां सिद्धजुष्टायां अदूरात्समुपाविशत् ॥ ३३ ॥**

ಎಲ್ಲ ಋಷಿಗಳೂ ಆ ರುದ್ರದೇವರ ದರ್ಶನದಿಂದಲೂ ಅನುಗ್ರಹೀತರಾಗಿ ಸಂತೋಷಭರಿತರಾಗಿ ನಮಸ್ಕಾರ ಮಾಡಿದರು. ಸೇವಕರಿಂದ ಸಿದ್ಧವಾದ ಸಭೆಯಲ್ಲಿ ಬಹಳ ಸಮೀಪದಲ್ಲಿಯೇ ಕುಳಿತುಕೊಂಡನು. ೩೩

**ततो व्यजिज्ञपत्स्कन्दः चन्द्रमौलिं कृताञ्जलिः ।**

देवप्रसाज्जगतामनुग्राहकविग्रह ।
अजेयज्ञप्तिसाराय नमस्ते प्रत्यगात्मने ॥ ३५ ॥

ಸರ್ವೋತ್ತಮನಾದ ಭಗವಂತನ ಅನುಗ್ರಹದಿಂದ ಜಗತ್ತಿನ ಅನುಗ್ರಹ ಮಾಡತಕ್ಕ ವಿಗ್ರಹ ಉಳ್ಳ ಪ್ರತ್ಯಗಾತ್ಮನೇ ! ಸರ್ವಜ್ಞನಾದ ನಿಮಗೆ ಅನಂತ ನಮಸ್ಕಾರಗಳು. ೩೫

यत्तिष्ठस्यक्षिविषये भक्तवत्सलता त्वियम् ।
वपुश्च तव वेदेश जगतां हितदायकम् ॥३६ ॥

ಭಕ್ತವಾತ್ಸಲ್ಯದಿಂದಲೇ ನಿನ್ನ ಭಕ್ತರ ದೃಷ್ಟಿಗೆ ಗೋಚರನಾಗುವ ದೇವದೇವೇಶನಾದ ಈಶ್ವರನೇ ! ನಿನ್ನ ಶರೀರವೂ ಕೂಡಾ ಜಗತ್ತಿಗೆ ಹಿತದಾಯಕವಾಗಿರುವದು. ೩೬

तथाहि जटिलत्वेन तपोलोके प्रशंससि ।
धृत्वा चैव विचित्रां च कपालीं प्रदर्शयन् ॥ ३७ ॥

ಪರಸ್ಪರವಾಗಿ ಭಕ್ತರ ಮೇಲೆ ಭಕ್ತವಾತ್ಸಲ್ಯವನ್ನು ಪ್ರಕಟಮಾಡುವವನಾದ ಕಾರಣ ತಪೋಲೋಕದಲ್ಲಿ ಕೂಡಾ ಪ್ರಶಂಸೆಯುಳ್ಳವನಾಗಿರುವಿ. ವಿಚಿತ್ರವಾದ ಕಪಾಲಿ (ತಲೆ ಬುರಡೆ) ಯನ್ನು ಹಿಡಿದಿರುವಿ. ೩೭

प्रदर्शयस्यनित्यत्वं विरक्तौ सर्वदेहिनाम् ।
तथैव ब्रह्मचर्यं च समाचरसि सर्वदा ॥ ३८ ॥

ಯಾವಾಗಲೂ ಎಲ್ಲ ಪ್ರಾಣಿಗಳಿಗೆ ನಿತ್ಯದಲ್ಲಿಯೂ ವೈರಾಗ್ಯವನ್ನು ಪ್ರದರ್ಶಿಸುವನಾಗಿ ಆದರಂತೆ ಅಖಂಡ ಬ್ರಹ್ಮಚರ್ಯವನ್ನೂ ಆಚರಿಸುವಿ. ೩೮

वनाश्रयो गिरिचरः सुरंस्यस्यखिलेश्वर ।
भुजङ्गहारयुक्तश्च सामर्थ्यं सुत पश्यतः ॥ ३९ ॥

ಸರ್ವೇಶ್ವರನೇ ! ವನವನ್ನೇ ಆಶ್ರಯಮಾಡಿಕೊಂಡು ಪರ್ವತಗಳಲ್ಲಿ ಸಂಚರಿಸುತ್ತ ಸರ್ಪಗಳ ಅಲಂಕಾರಮಾಡಿಕೊಂಡು ತಪಸ್ಸಿನಿಂದ ಮಹಾಸಾಮರ್ಥ್ಯವನ್ನು ಪ್ರಕಟಗೊಳಿಸುತಾ ಉತ್ತಮ ರೀತಿಯಿಂದ ವಿಹಾರಮಾಡುತ್ತಿರುವಿ. ೩೯

**विडम्बयसि दुर्लक्ष्यान् मन्दधीनिव शिक्षयन्** ॥ ४१ ॥

**नरो नारायणश्चैव इति कृष्ण इति प्रभुः ।**
**ते दृष्ट्वा तादृशं नाशं प्रजानामघवृद्धिजम्** ॥ ४२ ॥

**उत्पादिताभिश्चेच्छाभिः जगतां हितबोधकम् ।**
**जगद्गुरुमथोनाथं पृच्छामि त्वां मनोगतम्** ॥ ४३ ॥

ತಲೆಬುರುಡೆಯನ್ನು ಕೋರಳಲ್ಲಿ ಮಾಲೆ ಮಾಡಿಕೊಂಡು ಆ ತಲೆಬುರುಡೆಯನ್ನೇ ಭಿಕ್ಷಾಪಾತ್ರೆಯನ್ನಾಗಿ ಮಾಡಿಕೊಂಡು ದುಷ್ಟರನ್ನು ಶಿಕ್ಷಿಸುವಂತಹ ವಿಡಂಬನೆ ಮಾಡುವವನು, ಸರ್ವೋತ್ತಮನಾದ ಶ್ರೀಕೃಷ್ಣಪರಮಾತ್ಮನು ನರನಾರಾಯಣನಾಗಿ ಪ್ರಜೆಯ ಪಾಪದಿಂದ ಬೆಳೆಯತಕ್ಕ ನಾಶವನ್ನು ನೋಡಿ ಜಗತ್ತಿನ ಹಿತವನ್ನು ಬೋಧನ ಮಾಡುವ ಇಚ್ಛೆಯುಳ್ಳವರಾಗಿ, ಮತ್ತು ಹಿತವನ್ನು ಬೆಳೆಸುವ ಮನೋನಿಯಾಮಕನಾದ ಜಗದ್ಗುರುವಾದ ಸ್ವಾಮಿಯಾದ ನಿನ್ನನ್ನು ಪ್ರಶ್ನೆ ಮಾಡುತ್ತೇನೆ ೪೧-೪೨-೪೩

**अगस्त्यो मुनिमुख्यैश्च पुरा पृष्ठोऽभ्यदात्कथाम् ।**
**त्वदीयैरेव तैरंशैः त्वत्प्रसादात्पृथग्विधैः** ॥ ४४ ॥

ಅಗಸ್ತ್ಯ ಋಷಿಗಳೇ ಮೊದಲಾದ ಮುನಿಶ್ರೇಷ್ಠರಿಂದ ಪ್ರಾರ್ಥಿತರಾಗಿ, ನಿಮ್ಮ ಒಂದು ಅಂಶದಿಂದಲೇ ಸನ್ನಿಹಿತರಾದ ನಿಮ್ಮ ಅನುಗ್ರಹದಿಂದಲೇ ಎಷ್ಟೋ ಪ್ರಕಾರಗಳಾದ ಕಥೆಯನ್ನು ಹೇಳಿರುವಿರಿ ೪೪

**अथ तैः कृष्णवेणायाः पृष्टो माहात्म्यमुत्तमम् ।**
**कारुण्याद्वद विज्ञानं सर्वज्ञं त्वामुपागतः** ॥ ४५ ॥

ಆಮೇಲೆ ಅವರಿಂದಲೇ ಪ್ರಾರ್ಥಿತರಾಗಿ ಕೃಷ್ಣವೇಣೀ ಮಾಹಾತ್ಮ್ಯವನ್ನು ಅಂತಃಕರಣ ಪೂರ್ವಕವಾಗಿ ಅವರಿಗೆ ಹೇಳಿದ್ದನ್ನು ನನಗೂ ಹೇಳಿರಿ. ಸರ್ವಜ್ಞರಾದ ನಿಮ್ಮಹತ್ತಿರ ಬಂದಿರುವೆನು ೪೫

[illegible]

स्तुवन्तः षण्मुखं चाथ कृष्णामाहात्म्यकाङ्क्षिणः ॥ ४७ ॥

ಷಣ್ಮುಖನ ಈ ಸಂಭಾಷಣೆಯನ್ನು ಕೇಳಿ ಸಭಿಕರಾದ ಎಲ್ಲ ಋಷಿಗಳೂ ಕೃಷ್ಣಾಮಾಹಾತ್ಮ್ಯವನ್ನು ತಿಳಿದುಕೊಳ್ಳುವ ಆಕಾಂಕ್ಷೆಯುಳ್ಳವರಾಗಿ ಷಣ್ಮುಖನನ್ನು ಸ್ತೋತ್ರ ಮಾಡಿದರು. ೪೭

अथो दर्शितगंभीरध्वनिरीशोऽभ्यभाषत ।
द्विजावलीप्रभोत्कृष्टदीप्तीशुभ्रांशुभूषणः ॥ ४८ ॥

ಆಮೇಲೆ ಗಂಭೀರವಾದ ಧ್ವನಿಯಿಂದ ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರ ಸಮೂಹಕ್ಕೆ ಉತ್ಕೃಷ್ಟವಾದ ಪ್ರಕಾಶಮಾನರಾದ ತೇಜಸ್ವಿಗಳಾದ ಅಲಂಕೃತರಾದ ರುದ್ರದೇವರು ಹೇಳಿದರು. ೪೮

ईश्वर उवाच –

साधुवत् सकृतप्रश्नः कृष्णामाहात्म्यसंश्रयः ।
ज्ञातव्यो ह्येष यत्नेन सर्वैः सर्वतमोपहः ॥ ४९ ॥

ಈಶ್ವರನು ಹೇಳಿದನು –

ಕೃಷ್ಣಾಮಾಹಾತ್ಮ್ಯವನ್ನು ಕೇಳುವದರಲ್ಲಿ ಆಸಕ್ತರಾದ ನಿಮ್ಮ ಪ್ರಶ್ನೆರೂಪವಾದ ಪ್ರಾರ್ಥನೆಯು ಬಹಳ ಯೋಗ್ಯವಾದದ್ದು. ಆದಕಾರಣ ಅಜ್ಞಾನವನ್ನು ದೂರಮಾಡುವಂಥ ಈ ಕೃಷ್ಣಾಮಾಹಾತ್ಮ್ಯವನ್ನು ನೀವೆಲ್ಲರೂ ಪ್ರಯತ್ನಪೂರ್ವಕವಾಗಿ ತಿಳಿದುಕೊಳ್ಳಿರಿ. ೪೯

कृष्णेयं कृष्णरूपस्य तनुर्मम जलात्मिका ।
मत्तः कृष्णासमुत्पन्ना तत्प्रभावं परं विदुः ॥ ५० ॥

ಈ ಕೃಷ್ಣಾದೇವಿಯು ಶ್ರೀಕೃಷ್ಣಪರಮಾತ್ಮನ ಶರೀರದ ಅಂತರಂಗದವಳು, ಜಲರೂಪಳಾಗಿ ನನ್ನಿಂದ ಅವತಾರಮಾಡಿರುವಳು, ಆ ಕೃಷ್ಣವೇಣಿಯ ಪ್ರಭಾವವನ್ನು ಅವಶ್ಯ ಹೇಳುವೆನು. ತಿಳಿದುಕೊಳ್ಳಿರಿ. ೫೦

कल्पादौ सर्वजगतां अघौघशमनाय च ॥ ५२ ॥

ಈ ಕೃಷ್ಣವೇಣೀ ದೇವಿಯು ಪರಮಾತ್ಮನಿಂದ ಹುಟ್ಟಿಬಂದು ಮಗಳಂತೆ ಪ್ರಸಿದ್ಧಳಾಗಿ ಸೃಷ್ಟಿಯ ಆರಂಭದಿಂದಲೂ ಎಲ್ಲ ಜಗತ್ತಿನ ಪಾಪಗಳ ಸಮೂಹವನ್ನೇ ಪರಿಹಾರ ಮಾಡತಕ್ಕವಳು. ೫೨

नदीनामप्सुजननान्माहात्म्याच्च महत्वतः ।
महाघशमनाच्चापि ख्याता लोके महानदी ॥ ५३ ॥

ಎಲ್ಲ ನದಿಗಳಿಗೂ ತಾಯಿಯಾಗಿ (ಜನನಿಯಾಗಿ) ತನ್ನ ಮಾಹಾತ್ಮ್ಯದಿಂದಲೇ ಮಹತ್ವಉಳ್ಳವಳಾಗಿ ಸಕಲ ಪಾಪವನ್ನೂ ಪರಿಹಾರ ಮಾಡುವವಳಾಗಿ ಜಗತ್ತಿನಲ್ಲಿ ಮಹಾನದಿ ಎಂಬ ಹೆಸರಿನಿಂದ ಪ್ರಸಿದ್ಧಳಾಗಿರುವಳು. ೫೩

तीर्थैश्च ब्रह्मणा विष्णुः अर्थितोऽस्यां समावृणोत् ।
माहात्म्यमाययौ तेन तादृशं ज्ञायते जनैः ॥ ५४ ॥

ತೀರ್ಥಗಳಿಂದಲೂ (ತೀರ್ಥಾಭಿಮಾನಿ ದೇವತೆಗಳಿಂದಲೂ) ಬ್ರಹ್ಮದೇವರಿಂದಲೂ ಪ್ರಾರ್ಥಿತನಾದ ಪರಮಾತ್ಮನು ಈ ಕೃಷ್ಣವೇಣಿಯಲ್ಲಿ ಸನ್ನಿಹಿತನಾಗಿರುವನು. ಅವನ ಮಾಹಾತ್ಮ್ಯದಿಂದ ಇವಳು ಮಹಾಮಹಿಮೆಯುಳ್ಳವಳು ಎಂದು ಜನರು ತಿಳಿದಿರುವರು. ೫೪

कृष्णा च हृष्टा कृष्णेन भुवं नीता च या दिवः ।
सर्वं कर्षति चाघौघं तेन कृष्णा प्रकीर्तिता ॥ ५५ ॥

ಶ್ರೀಕೃಷ್ಣಪರಮಾತ್ಮನಿಂದ ಸಂತುಷ್ಟಳಾದ ಕೃಷ್ಣಾದೇವಿಯು ಶ್ರೀಕೃಷ್ಣಪರಮಾತ್ಮನಿಂದಲೇ ಭೂಲೋಕಕ್ಕೆ ತರಲ್ಪಟ್ಟವಳು ಮತ್ತು ಎಲ್ಲರ ಪಾಪಗಳ ಸಮೂಹವನ್ನೇ ಪರಿಹಾರಮಾಡತಕ್ಕವಳು. ಆದಕಾರಣ ಕೃಷ್ಣಾ ಎಂದು ಪ್ರಸಿದ್ಧಳಾಗಿರುವಳು. ೫೫

संक्षिप्य वक्ष्यामि निबोध कृष्णामाहात्म्यमस्मिन्यदि विस्तरः स्यात् ।

ಹೇಳುವೆನು. ಸ್ವಲ್ಪವಾದರೂ ಕಲ್ಪಪರ್ಯಂತ ಅಭಿವೃದ್ಧಿಯಾಗಿ ಭೂಮಂಡಲದಲ್ಲಿ ಅಪಾರವಾದ ಮಹಾಮಹಿಮೆಯುಳ್ಳದ್ದಾಗಿರುವದು. ೫೬

॥ इति श्रीस्कन्दपुराणे ऋषिनारदसंवादे कृष्णामाहात्म्ये द्वितीयोऽध्यायः ॥

❀ ❀ ❀

## ॥ अथ तृतीयोऽध्यायः ॥

**ईश्वर उवाच –**

**कल्पादौ कृष्णवेणाख्या इयं दिव्यवसत्पुरा ।**
**वैष्णवी ब्रह्मणः पुत्री पूज्यमाना सुरर्षिभिः ॥ १ ॥**

ಕಲ್ಪದ ಆರಂಭದಲ್ಲಿ ಕೃಷ್ಣವೇಣಿ ಎಂಬ ಈ ದೇವತೆಯು ಪೂರ್ವದಲ್ಲಿ ದೇವಲೋಕದಲ್ಲಿ ಇರುತ್ತಿದ್ದಳು. ವಿಷ್ಣುಭಕ್ತಳು ಬ್ರಹ್ಮದೇವರ ಮಗಳು ದೇವರ್ಷಿಗಳಿಂದ ಪರಮಪೂಜ್ಯಳಾದವಳು. ೧

**तथा पुण्यमयी सृष्टिः सर्वत्र सुधि योजनाः ।**
**समायुषः समाधाना नोत्तमाधममध्यमाः ॥ २ ॥**

ಪುಣ್ಯಮಯವಾದ ಸೃಷ್ಟಿಕಾಲ. ಸರ್ವತ್ರದಲ್ಲಿ ಬುದ್ಧಿವಂತರಾದ ಜನರು ಆಯುಷ್ಯವಂತರು. ಎಲ್ಲರೂ ಸಮಾಧಾನ ಮನಸ್ಸುಳ್ಳವರು. ಉತ್ತಮರು, ಮಧ್ಯಮರು, ಅಧಮರು ಹೀಗೆ ಇರಲಿಲ್ಲ. ೨

**तेषां स्वभावात् संसिद्धिः ह्लादिनीव रसोल्लसा ।**
**अथ कालस्वभावेन पापबिन्दुः समागमत् ॥ ३ ॥**

ಅವರೆಲ್ಲರ ಸ್ವಭಾವದಿಂದ, ಸಂಸಿದ್ಧಿ, ಹ್ಲಾದಿನಿ, ರಸಾ, ಉಲ್ಲಸಾ, ಎಂಬ ಹೆಸರಿನಿಂದ

ವಾದವು. ಮತ್ತೆ ಅವರಿಗೆ ವೃದ್ಧಿಗೋಸ್ಕರವಾಗಿ ಔಷಧಗಳು ಸ್ವತಃ ಹುಟ್ಟಿಬಂದವು. ೫

नानारसफलाढ्याश्च तद्दोषाद्भुवमाविशन् ।
पुनस्तैरर्थितो ब्रह्मा वृत्त्यर्थे समकल्पयत् ॥ ६ ॥

ಸ್ವತಃ ಹುಟ್ಟಿದ ಔಷಧಗಳು ಎಲ್ಲ ತರದ ರಸಗಳು ಫಲಗಳು ಅವುಗಳಿಂದ ಸಂಪನ್ನವಾದವು. ದೋಷಗಳೆಲ್ಲ ಭೂಮಿಯಲ್ಲಿ ಸೇರಿ ಹೋದವು. ಆಗ ಮತ್ತೆ ಅವರೆಲ್ಲರಿಂದ ಪ್ರಾರ್ಥಿತರಾದ ಬ್ರಹ್ಮದೇವರು ಅವರ ಉಪಜೀವನಕ್ಕೋಸ್ಕರ ಮತ್ತೆ ಆಣೆಮಾಡಿದರು. ೬

वृष्टिमौषधसिध्यर्थे हस्तात्सिद्धिं च कर्मजाम् ।
धर्माधर्मव्यवस्थाश्च मर्यादाश्च पृथग्विधाः ॥ ७ ॥

ಆ ಬ್ರಹ್ಮದೇವರು ವೃಷ್ಟಿ, ಔಷಧ, ಸಿದ್ಧಿಗೋಸ್ಕರ ಕರ್ಮಜಳಾದ ಸಿದ್ಧಿಯನ್ನು ಸೃಷ್ಟಿಮಾಡಿದರು. ಧರ್ಮ ಅಧರ್ಮಗಳ ವ್ಯವಸ್ಥೆಯನ್ನು ಭಿನ್ನಭಿನ್ನವಾದ ಮರ್ಯಾದೆಗಳನ್ನು ವ್ಯವಸ್ಥೆ ಮಾಡಿದರು. ೭

नृणां सर्वजगत्स्थित्यै मन्वादिभिरकारयत् ।
अत्रान्तरे च तत्स्थित्यै धर्माज्जातश्चतुर्वपुः ॥ ८ ॥

ಎಲ್ಲ ಜಗತ್ತಿನ ರಕ್ಷಣಕ್ಕೋಸ್ಕರ ಮನ್ವಂತರಾದಿಗಳನ್ನು ಮನ್ವಂತರಾದಿಗಳಿಂದ ರಕ್ಷಣಕ್ಕೋಸ್ಕರ ಚತುರ್ವಿಧಗಳಾದ ಧರ್ಮಗಳನ್ನು ಹುಟ್ಟಿಸಿದರು. ೮

नरो नारायणश्चैव इति कृष्ण इति प्रभुः ।
ते दृष्ट्वा तादृशं नाशं प्रजानामघवृद्धिजम् ॥ ९ ॥

सञ्चिन्त्य रक्षणोपायं स्वानुजं कृष्णमब्रवीत् ।
गच्छाशु ब्रह्मसदनं कृष्णामानयनस्तनुम् ॥ १० ॥

ನರ, ನಾರಾಯಣ, ಕೃಷ್ಣ, ಪ್ರಭುಗಳು ಪ್ರಜೆಗಳ ಪಾಪಗಳಿಂದ ವೃದ್ಧಿ ಆಗತಕ್ಕ

ಕೂಡಿಕೊಂಡು ಶಾಂತಿ ಸ್ಥಾಪಿಸುವಳು ಎಂದು ಬ್ರಹ್ಮದೇವರು ಹೇಳಿರುವರು. ೧೧

भूमौ प्रकल्पयेत्येवं भगवानथ वै स्थितः ।

ಇವಳು ಭೂಮಿಯ ಮೇಲೆ ಸ್ಥಾಪಿಸಲ್ಪಡಲಿ. ಹಾಗೇ ಆಗಲಿ ಎಂದು ಶ್ರೀಕೃಷ್ಣನು ಸಿದ್ಧನಾದನು

**ईश्वर उवाच –**

तथेति गत्वा कृष्णोऽथ निवेद्य ब्रह्मणोऽखिलम् ॥ १२ ॥

**ಈಶ್ವರನು ಹೇಳಿದನು :–**

ತಥಾಸ್ತು ಎಂದು ಹೋಗಿ ಶ್ರೀಕೃಷ್ಣಪರಮಾತ್ಮನು ಬ್ರಹ್ಮದೇವರಿಗೆ ಎಲ್ಲವನ್ನೂ ಹೇಳಿದನು. ೧೨

कार्यं लेभे ततः कृष्णां बहुमानसमर्पिताम् ।
ब्रह्मणा सर्वदेवेशः तत्रेत्य भगवन्मुखाः ॥ १३ ॥

ಬಹುಮಾನಪೂರ್ವಕ ಕೊಡಲ್ಪಟ್ಟ ಕೃಷ್ಣಾದೇವಿಯನ್ನು ತಂದು ಕಾರ್ಯ ಪ್ರವೃತ್ತರಾದರು. ಭಗವಂತನೇ ಮೊದಲಾದ ಎಲ್ಲ ದೇವತೆಗಳು ಬ್ರಹ್ಮದೇವರಿಂದ ಕೂಡಿಕೊಂಡು ಮುಂದಿನ ಕಾರ್ಯದಲ್ಲಿ ತೊಡಗಿದರು. ೧೩

तामादाय ययौ कृष्णः पूज्यमानः सुरोत्तमैः ।
ब्रह्मा विष्णुः तथा रुद्रः सर्वे देवाः सहर्षिभिः ॥ १४ ॥

ಎಲ್ಲ ದೇವಾನುದೇವತೆಗಳಿಂದ ಪೂಜಿತನಾದ ಶ್ರೀಕೃಷ್ಣಪರಮಾತ್ಮನು, ಬ್ರಹ್ಮದೇವರು, ವಿಷ್ಣು ಹಾಗೂ ರುದ್ರದೇವರು ಎಲ್ಲ ದೇವತೆಗಳು ಎಲ್ಲ ಋಷಿಗಳಿಂದ ಕೂಡಿಕೊಂಡು ಆ ಕೃಷ್ಣವೇಣಿಯನ್ನು ಕರೆದುಕೊಂಡು ಬಂದರು. ೧೪

सोत्साहं मानयन्तस्तामनुजग्मुस्तदा भुवम् ।
कस्मिन् देशे तु कृष्णेति मन्त्रयन्तः सुरास्तदा ॥ १५ ॥

ಮಹಾತ್ಮರಾದ ತಪಸ್ವಿಗಳನ್ನು ನೋಡಿದರು. ಅವರೆಲ್ಲರೂ ಆ ತಪಸ್ವಿಯನ್ನು ಹೇ ಮುನಿಗಳೇ ನೀವು ಯಾರು ? ನೀವು ಏನನ್ನು ಇಚ್ಛಿಸುವಿರಿ ? ಎಂದು ಕೇಳಿದರು. ೧೬

देव्यागमोत्सवे ह्यस्मिन् देयं यत्तदभीप्सितम् ।
तच्छ्रुत्वा सोऽथ हृष्टात्मा तान्प्रणम्य कृताञ्जलिः ॥ १७ ॥

ಕೃಷ್ಣಾದೇವಿಯ ಆಗಮನೋತ್ಸವದಲ್ಲಿ ನೀವು ಯಾವುದನ್ನು ಇಚ್ಛಿಸುವಿರೋ ಅದನ್ನು ಕೊಡುವೆವು. ಅದನ್ನು ಕೇಳಿ ಆ ಮುನಿಗಳು ಬಹಳ ಸಂತೋಷಭರಿತರಾಗಿ ಅವರೆಲ್ಲರಿಗೂ ಅಂಜಲಿಬದ್ಧರಾಗಿ ನಮಸ್ಕಾರ ಮಾಡಿದರು. ೧೭

कृष्णं कृष्णां च तान्प्राह सह्याद्रिं वेत्थ मां सुराः ।
देव्यागममिहं ज्ञात्वा समाराधयितुं स्थितः ॥ १८ ॥

ಕೃಷ್ಣನನ್ನು ಕೃಷ್ಣಾದೇವಿಯನ್ನು ದೇವತೆಗಳನ್ನು ಕುರಿತು, ಹೇ ದೇವತೆಗಳೇ ! ನನ್ನನ್ನು ಸಹ್ಯಾದ್ರಿ ಎಂದು ತಿಳಿಯಿರಿ. ಕೃಷ್ಣಾದೇವಿಯ ಆಗಮನವಾದುದೆಂದು ತಿಳಿದು ಅವಳನ್ನು ಸ್ವಾಗತಿಸಲಿಕ್ಕೆ ನಿಂತಿರುವೆನು. ೧೮

मत्तः प्रवर्ततामेषा साक्षाद्विष्णुमयी त्विह ।
अस्याः पुण्यजलस्पर्शात् अहं यास्यामि पुण्यताम् ॥ १९ ॥

ನನ್ನಿಂದ ಸ್ವಾಗತಿಸಲ್ಪಡುವ ಈ ಸಾಕ್ಷಾತ್ ಕ್ರಷ್ಣವೇಣಿಯು ವಿಷ್ಣುಮಯಳು. ನಿಜವಾಗಿಯೂ ಈ ಕ್ರಷ್ಣವೇಣಿಯ ಪುಣ್ಯಜಲಸ್ಪರ್ಶದಿಂದ ನಾನೂ ಕೂಡ ಪುಣ್ಯತ್ವವನ್ನು ಪಡೆಯುತ್ತೇನೆ. ೧೯

धन्यतां चापि लोकेऽस्मिन् तीर्थमातुर्हि गौरवात् ।
तच्छ्रुत्वा हर्षितैर्देवैः हर्षिताऽभून्महानदी ॥ २० ॥

ತೀರ್ಥಮಾತಾ ಆದ ಕ್ರಷ್ಣವೇಣಿಯ ಗೌರವದಿಂದ ಈ ಲೋಕಗಳೂ ಕೂಡ ಧನ್ಯವಾದವು. ಈ ಮಾತನ್ನು ಕೇಳಿ ದೇವತೆಗಳೂ ಬಹಳ ಸಂತೋಷಪಟ್ಟರು. ಕ್ರಷ್ಣವೇಣಿಯು ಮಹಾನದಿಯಾದಳು. ೨೦

नह्यस्त्यन्या मदनुजा भविष्यन्त्युत्तमोत्तमाः ॥ २२ ॥

ಇದು ನನಗೆ ಅತ್ಯಂತ ಪ್ರಿಯಕರವಾದುದು. "ಕೀರ್ತ್ಯಾ" ಎಂಬ ಹೆಸರು ಬಹಳ ಪ್ರಿಯತರವಾದುದು. ಇನ್ನು ಮೇಲೆ ನನ್ನ ತರುವಾಯ ಯಾವ ನನ್ನ ತಂಗಿಯರೂ ಉತ್ತಮೋತ್ತಮರಾಗುವುದಿಲ್ಲ. ೨೨

त्वत्त एव जनिष्यामि वरान्मे भूधरोत्तम ।

ईश्वर उवाच –

एवमस्मिन् वरे देशे सहसा विस्मयं ययुः ॥ २३ ॥

ಹೇ ಭೂಧರೋತ್ತಮ, ಎಲೈ ಸಹ್ಯಾದ್ರಿ ಪರ್ವತವೇ ! ನಿಮ್ಮ ದೆಶೆಯಿಂದಲೇ ನಾನು ಹುಟ್ಟುವುದು ನನಗೆ ಬಹಳ ಶ್ರೇಷ್ಠವಾದುದು. ಆಗ ಈಶ್ವರನು ಹೇಳುವನು– ಹೀಗೆ ಈ ದೇಶವು (ಸಹ್ಯಾದ್ರಿಯು) ಬಹಳ ಶ್ರೇಷ್ಠವಾದುದು. ಇದನ್ನು ಕೇಳಿ ಎಲ್ಲರೂ ಆಶ್ಚರ್ಯ ಪಟ್ಟರು. ೨೩

भक्तवत्सलतां देव्या दृष्ट्वा विष्णोरिवामराः ।
सोऽपि प्रसाद इत्युक्त्वा प्रणम्य मुदितो गिरिः ॥ २४ ॥

ಆ ಕೃಷ್ಣಾದೇವಿಯ, ವಿಷ್ಣುವಿನಂತೆ ಇರುವ, ಭಕ್ತವತ್ಸಲತೆಯನ್ನು ನೋಡಿ ಎಲ್ಲ ದೇವತೆಗಳು, ಇದು ಮಹಾಪ್ರಸಾದವೆಂದು ಹೇಳಿದರು. ಸಹ್ಯಾದ್ರಿಯು ನಮಸ್ಕಾರಮಾಡಿ ಬಹಳ ಸಂತೋಷ ಪಟ್ಟನು. ೨೪

कृष्णा तदाथ तैर्देवैः सहिता स्वपदं ययौ ।
नरो नारायणश्चैव गिरिश्चापि समागतः ॥ २५ ॥

ಆವಾಗ ಕೃಷ್ಣಾದೇವಿಯು ಎಲ್ಲ ದೇವತೆಗಳಿಂದ ಕೂಡಿಕೊಂಡು ತಮ್ಮ ತಮ್ಮ ಸ್ಥಾನಕ್ಕೆ ಹೋದರು. ನರನಾರಾಯಣರೂ ಸಹ್ಯಾದ್ರಿ ಗಿರಿಯೂ ಕೂಡ ಬಂದರು. ೨೫

अन्ये च तत्राप्सरसः सिद्धविद्याधरोरगाः ।
तदा सह्यगिरौ तत्र भुवनानि चतुर्दश ॥ २६ ॥

ಎಲ್ಲರೂ ಅವರು ಕೂಡಿಕೊಂಡು ಹರ್ಷಾತಿರೇಕದಿಂದ ಕೃಷ್ಣಾಮಹೋತ್ಸವವನ್ನು ನೋಡುವದಕ್ಕೋಸ್ಕರ ಕೃಷ್ಣನನ್ನು ಪ್ರಶಂಸೆ ಮಾಡುತ್ತ ಆನಂದಾತಿರೇಕದಿಂದ ಋಷಿಗಳು ಪಿತೃಗಳು, ದೇವತೆಗಳು ಹಾಗೂ ವಾಗಾಭಿಮಾನಿ ದೇವತೆಗಳೂ ಪರಸ್ಪರವಾಗಿ ಮಾತನಾಡಿಕೊಂಡು ಬಂದರು ಅಖಿಲ ಸಂಪೂರ್ಣ ಇಷ್ಟಾರ್ಥಗಳನ್ನು ಪೂರ್ಣಮಾಡುವಂಥವಳು ಈ ಕೃಷ್ಣಾದೇವಿಯು, ಇದರಲ್ಲಿ ಏನೂ ಆಶ್ಚರ್ಯವಿಲ್ಲ. ಎಂದು ಮಾತನಾಡಿಕೊಂಡರು. ಮನುಷ್ಯರೂ ಕೃತಾರ್ಥರಾದರು. ೨೬-೨೭-೨೮

कामधेनुः समायाता भूलोकाऽलंकृतिः शुभा ।
वयं च धन्या मनुजैः कृष्णायां च सुतर्पिताः ॥ २९ ॥

ಈ ಕೃಷ್ಣೆಯು ಭೂಲೋಕಕ್ಕೆ ಅಲಂಕಾರರೂಪಳಾಗಿ ಶುಭಕರಳಾಗಿ ಕಾಮಧೇನು ಆಗಿ ಬಂದಳು. ಕೃಷ್ಣಾದೇವಿಯಲ್ಲಿ ಮನುಷ್ಯರು ನಮಗೆ ತರ್ಪಣ ಕೊಡುವರು ಆದ್ದರಿಂದ ನಾವೂ ಧನ್ಯರು. ಎಂದು ದೇವತೆಗಳು ಅಂದರು.೨೯

हव्यैः कव्यैश्च पूजाभिः प्राप्स्यामो निर्वृतिं पराम् ।
लभ्यते सकृदप्यत्र यदि कृष्णाजलाञ्जलिः ॥ ३० ॥

ಒಂದು ವೇಳೆ, ಒಂದು ಸಲವಾದರೂ, ಕೃಷ್ಣಾತೀರದಲ್ಲಿ ನಮಗೆ ಜಲತರ್ಪಣಗಳು ಮನುಷ್ಯರಿಂದ ಲಭ್ಯವಾದರೆ, ಹವ್ಯಕವ್ಯಾದಿಗಳಿಂದಲೂ ಪೂಜಾದಿಗಳಿಂದಲೂ ನಾವು (ದೇವಪಿತೃಗಳು) ಪರಮ ಸೌಭಾಗ್ಯವನ್ನು ಪಡೆಯುವೆವು. ೩೦

तर्हि नो नित्यतृप्तानां स्वधया सुधयाऽपि किम् ।
अहो स्कन्दकृता पूर्वं सुपूता च भविष्यति ॥ ३१ ॥

ಕೃಷ್ಣೆಯಲ್ಲಿ ಮನುಷ್ಯರಿಂದ ಕೊಡಲ್ಪಟ್ಟ ತರ್ಪಣಾದಿಗಳಿಂದ ನಿತ್ಯತೃಪ್ತರಾದ ನಮಗೆ ಅಮೃತದಿಂದಲಾದರೂ ಏನು ಪ್ರಯೋಜನ ?ಷಣ್ಮುಖನಿಂದ ಪೂಜಿತಳಾದವಳು ಬಹಳ ಪವಿತ್ರಳಾದವಳು. ೩೧

प्रवाहेण च ते नास्याः सर्वामङ्गलहारिणा ।
सभाग्यास्ते नरा लोके ते च देशाः शुभोदयाः ॥ ३२ ॥

ಲೋಕಗಳು ವಿಸ್ತಾರವಾಗುವುವು (ಅರ್ಥಾತ್ ಎಲ್ಲರೂ ಸ್ವರ್ಗಲೋಕಕ್ಕೆ ಹೋಗುವರು). ನರಕವು ಸಂಕುಚಿತವಾಗುವುದು (ಅರ್ಥಾತ್ ನರಕಕ್ಕೆ ಯಾರೂ ಹೋಗುವದೇ ಇಲ್ಲ). ೩೩

इयं स्वर्गामिनीश्रेणिः सुलभाऽत्र श्रिता पुरा।
भविष्यद्देहसंबन्धः कृष्णातीरे तु सर्वदा ॥ ३४ ॥

ಕೃಷ್ಣಾತೀರದಲ್ಲಿ ಜನ್ಮಪಡೆದವರಿಗೆ ಯಾವಾಗಲೂ ಸುಲಭವಾಗಿ ಈ ಕೃಷ್ಣವೇಣಿಯು ಸ್ವರ್ಗಕ್ಕೆ ಸುಲಭವಾದ ಶ್ರೇಣಿಯೂ, ಮೆಟ್ಟಲುಗಳು. ೩೪

भिन्नेन जङ्गमत्वेन स्थाणुत्वेनापि वा पुनः।

ईश्वर उवाच –

इत्थं हर्षात् प्रजल्पन्तः सहोत्तस्थुः सुरादयः ॥ ३५ ॥

ಈ ಕೃಷ್ಣಾತೀರದಲ್ಲಿ ಒಡಕು ಕಲ್ಲಾಗಿ, ಗಿಡವಾಗಿ ಹುಟ್ಟಲಿ, ಹೇಗಾದರೂ ಆ ತೀರದ ಸ್ಪರ್ಶಮಾತ್ರದಿಂದ ಸ್ವರ್ಗದ ಮೆಟ್ಟಲುಗಳನ್ನು ಏರುವೆವು.

**ಈಶ್ವರನು ಹೇಳುವನು –**

ಹೀಗೆ ಎಲ್ಲ ದೇವತೆಗಳೂ ಪರಮಾನಂದದಿಂದ ಮಾತನಾಡುತ್ತ ನರ್ತನ ಮಾಡಿದರು. ೩೫

स्तुवन्तश्च ततो देवीं गायन्तश्चापि किन्नराः ॥ ३६ ॥

ಹೀಗೆ ಕೃಷ್ಣವೇಣಿಯನ್ನು ದೇವತೆಗಳು ಸ್ತೋತ್ರಮಾಡುತ್ತ ಗಾಯನಮಾಡುತ್ತಿದ್ದರು. ಕಿನ್ನರರೂ ಗಾಯನಮಾಡುತ್ತಿದ್ದರು. ೩೬

सद्भिः पुष्पफलैर्दैवैः सर्वेषामथ सोऽद्रिराट्।
तेषां चक्रे महां पूजां कृष्णायश्च विशेषतः ॥ ३७ ॥

ಪರಮಾನಂದಭರಿತನಾಗಿ, ಎಲ್ಲ ದೇವತೆಗಳನ್ನೂ [illegible], ಸಹ್ಯಪುತ್ರಿಯನ್ನು ಕುರಿತು, ಹೀಗೆ ಹೇಳಿದನು. ೩೮

अहमत्र निवत्स्यामि श्वेताश्वत्थवपुः सदा।
मत्पादान्निःसृता त्वं च नदी पुण्यजला भव ॥ ३९ ॥

ನಾನು ಶ್ವೇತಾಶ್ವತ್ಥರೂಪದಿಂದ ಇಲ್ಲಿಯೇ ವಾಸ ಮಾಡುವೆನು. ನೀನು ನನ್ನ ಪಾದದಿಂದ ಉದ್ಭವಳಾಗಿ ಪುಣ್ಯತೀರ್ಥಳಾಗಿ ಜಲರೂಪದಿಂದ ನದಿಯಾಗಿ ಕ್ಷಣದಲ್ಲಿ ಪ್ರವಹಿಸುವವಳಾಗು. ೩೯

ईश्वर उवाच –

इत्युक्त्वा भगवान् विष्णुः येनाश्वत्थो भवत्स्वयम्।
तन्मूलस्था च सा देवी तोयधाराऽभवत्क्षणात् ॥ ४० ॥

ಶ್ರೀನಾರಾಯಣನು ಹೀಗೆ ಹೇಳಿ ಸ್ವತಃ ಮರುಕ್ಷಣದಲ್ಲಿ ಅಶ್ವತ್ಥವೃಕ್ಷನಾದನು. ಆ ಅಶ್ವತ್ಥವೃಕ್ಷದ ಮೂಲ ಸ್ಥಾನದಿಂದ ಕೃಷ್ಣಾದೇವಿಯು ತತಕ್ಷಣದಲ್ಲಿ ಜಲಧಾರೆಯಾಗಿ ಪ್ರವಹಿಸಿದಳು. ೪೦

ततो जय जयेत्युच्चैः तुष्टुवुर्विबुधा दिवि।
हर्षान्नृत्यत्सुमुनिषु प्रससार महानदी ॥ ४१ ॥

ಎಲ್ಲ ದೇವತೆಗಳು ದೇವಲೋಕದಲ್ಲಿ ಜಯಜಯಕಾರ ಮಾಡುತ್ತ ಮುಕ್ತ ಕಂಠದಿಂದ ಸ್ತೋತ್ರ ಮಾಡಿದರು. ಅದರಂತೆ ಎಲ್ಲ ಋಷಿಗಳೂ ಕೂಡ ಪರಮ ಸಂತೋಷದಿಂದ ನರ್ತನಮಾಡುತ್ತಿರುವಾಗ ಕೃಷ್ಣವೇಣಿಯು ನದಿಯಾಗಿ ಪ್ರವಹಿಸಿದಳು. ೪೧

देवदुंदुभयो नेदुः पुष्पाणि मुमुचुर्घनाः।
गन्धर्वाश्च जगुर्हर्षात्कृष्णोदयमहोत्सवे ॥ ४२ ॥

ಕೃಷ್ಣ [illegible] ಉಗ[illegible]ದ ಮಹೋತ್ಸವ ಸಮಯದಲ್ಲಿ ದೇವತೆಗಳು

ಅವರನ್ನು ಅನುಸರಿಸಿದರು. ೪೩

इति जगदघनाशनाय कृष्णा धवलवपुर्धरणीं विभूषयन्ती ।
त्रिभुवनदुरितानि वर्जयन्ती पवनरवेण जगाम पूर्वकाष्ठाम् ॥ ४४ ॥

ಹೀಗೆ ಧವಳರೂಪ ಉಳ್ಳವಳಾಗಿ ಜಗತ್ತಿನ ಪಾಪವನ್ನು ನಾಶಮಾಡುತ್ತಾ ಕೃಷ್ಣಾದೇವಿಯು ಇಡೀ ಭೂಮಂಡಲವನ್ನೇ ಭೂಷಣವನ್ನಾಗಿ ಮಾಡಿ ಕೃಷ್ಣಾತರಂಗ ಸಂಭೂತವಾದ ಗಾಳಿಯಿಂದ ತ್ರೈಲೋಕ್ಯದ ಪಾಪವನ್ನು ನಾಶಮಾಡುತ್ತಾ ಪೂರ್ವದಿಕ್ಕಿಗೆ ಮುಖಮಾಡಿಕೊಂಡು ತನ್ನ ಪತಿಯ ಸನ್ನಿಧಾನಕ್ಕೆ (ಪೂರ್ವದಿಕ್ಕಿನ ಸಮುದ್ರಕ್ಕೆ) ಸನ್ಮುಖಳಾಗಿ ಹೊರಟಳು. ೪೪

अधर्मो राक्षसा क्लेशाः कलिश्च दुरितानि च ।
दौर्मनस्यं परं जग्मुः भुवि देवीसमागमात् ॥ ४५ ॥

ಅಧರ್ಮಿಗಳಾದ ರಾಕ್ಷಸರು ಬಹಳ ಸಂಕಟಪಟ್ಟರು. ಕಲಿಯೂ ಕೂಡ ಆ ಕೃಷ್ಣಾದೇವಿಯು ಜಲಪ್ರವಾಹರೂಪಳಾಗಿ ಭೂಮಂಡಲಕ್ಕೆ ಬಂದದ್ದು ನೋಡಿ ಬರೇ ಸಂಕಟಪಡುವುದಲ್ಲದೇ ಬಹಳ ದುಷ್ಟವಾದ ಮನಃಸ್ಸುಳ್ಳವನಾದನು. ೪೫

यदा कृष्णा भुवं याता ततःप्रभृति पुत्रकाः ।
अधर्मवृद्धिर्दुष्टाशा निरुद्धालोकनाशिनी ॥ ४६ ॥

ಯಾವಾಗ ಕೃಷ್ಣಾದೇವಿಯು ಭೂಲೋಕಕ್ಕೆ ಬಂದಳೋ ಅಹೊತ್ತಿನಿಂದ ಅಧರ್ಮದ ಬೆಳವಣಿಗೆಯು ಲೋಕನಾಶಕವಾದ ದುರಾಶೆಗಳೆಲ್ಲವೂ ತಡೆಯಲ್ಪಟ್ಟವು. ೪೬

मुक्त्वा युगक्रमं लोके नोपवर्धेत् विपर्ययः ।
महानदीप्रभावेन यावत्कल्पविकल्पना ॥ ४७ ॥

एवमेषा जगन्माता सर्वपुण्यमयी शुभा ।
तथा त्वतीव पुण्यानि तीर्थान्यत्र पदे पदे ॥ ४८ ॥

ಹೀಗೆ ಆ ಜಗನ್ಮಾತೆಯಾದ ಅಖಂಡಪುಣ್ಯಮಯಳಾದ ಶುಭಕರಳಾದ ಈ

ಹೇಗೆ ಋಗ್ವೇದ ಸಂಹಿತೆಯು ಎಲ್ಲ ಪಾಪಗಳನ್ನು ನಾಶಮಾಡುವದೋ ಹಾಗೆಯೇ ಅದರಲ್ಲಿ ಸೂಕ್ತಗಳೂ ಪ್ರತ್ಯೇಕವಾಗಿ ಅತೀವ ಪುಣ್ಯಕರವಾಗಿರುವವೋ ಅದರಂತೆ ಈ ಪುಣ್ಯಕರವಾದ ನದಿಯಲ್ಲಿ ದಿವ್ಯವಾದ ತೀರ್ಥಗಳು ಇರುವವು. ಅವುಗಳ ಮಾಹಾತ್ಮ್ಯವು ಅಸಾಮಾನ್ಯವಾದವುಗಳು. ಅತಿಶಯ ರಹಸ್ಯವಾದವುಗಳು. ಅನಂತವಾದವುಗಳು. ೪೯-೫೦

एवं संक्षेपतः प्रोक्तं देव्या माहात्म्यमुत्तमम् ।
सविस्तरं तु सत्त्वेन विद्धि त्वं मदनुग्रहात् ॥ ५१ ॥

ಅತಿಶಯೋತ್ತಮವಾದ ಕೃಷ್ಣಾದೇವಿಯ ಮಾಹಾತ್ಮ್ಯವನ್ನು ಹೀಗೆ ಸಂಕ್ಷೇಪವಾಗಿ ಹೇಳಿರುವೆನು. ಇನ್ನು ಮೇಲೆ ಸವಿಸ್ತಾರವಾಗಿ ನನ್ನ ಅನುಗ್ರಹದಿಂದ ನೀನೂ ತಿಳಿದುಕೊಳ್ಳಬೇಕು. ೫೧

मुनिभ्यो वद रम्यं हि जगतां हितकाम्यया ।
तीर्थानि चात्र गुह्यानि मत्प्रसाद्विवक्ष्यसि ॥ ५२ ॥

ಜಗತ್ತಿನ ಹಿತಕ್ಕೋಸ್ಕರ ರಮ್ಯವಾದ ಈ ಕೃಷ್ಣವೇಣೀ ಚರಿತ್ರವನ್ನು ಎಲ್ಲ ಮುನಿಗಳಿಗೆ ಹೇಳು. ನನ್ನ ಅನುಗ್ರಹದಿಂದ ರಹಸ್ಯವಾದ ಎಲ್ಲ ತೀರ್ಥಗಳನ್ನೂ ಹೇಳು. ೫೨

नारद उवाच –

इत्युक्तोऽनुगृहीतश्च स्कन्दो देवेन शंभुना ।
प्रणम्य च ययौ धाम स्वकीयं मुनिभिः सह ॥ ५३ ॥

ಹೀಗೆ ಮಹಾರುದ್ರದೇವರಿಂದ ಹೇಳಿಸಿಕೊಂಡು, ಅನುಗೃಹೀತನಾದ ಷಣ್ಮುಖನು ರುದ್ರದೇವರಿಗೆ ನಮಸ್ಕಾರಮಾಡಿ ಎಲ್ಲ ಋಷಿಗಳಿಂದ ಕೂಡಿಕೊಂಡು ತಮ್ಮ ತಮ್ಮ ಆಶ್ರಮಕ್ಕೆ ಹೋದರು. ೫೩

सोऽथ ब्रवीत् मुनिभ्यस्तन्माहात्म्यं सर्वगुह्यवित् ।

तीर्थानि तत्र गुह्यानि स्कन्द नत्वा जगद्गुरुम् ॥ ५५ ॥

ಹೇ ಮುನಿಶ್ರೇಷ್ಠರೇ, ಆ ಎಲ್ಲ ಮಾಹಾತ್ಮ್ಯವನ್ನೂ ಹೇಳುವೆನು, ಕೇಳಿರಿ. ಎಂದು ಹೇಳಿದನು ೫೫

यश्चेमं संभवं देव्याः कृष्णायानयनं तथा ।
स्मरेद्भक्त्या सुपूतात्मा स याति परमं पदम् ॥ ५६ ॥

ಯಾರು ಈ ಕೃಷ್ಣವೇಣೀದೇವಿಯ ಆಗಮನ, ಉಗಮಗಳನ್ನು ಶ್ರವಣ ಹಾಗೂ ಸ್ಮರಣ ಮಾಡುವರೋ ಅವರು ಪೂತಾತ್ಮರಾಗಿ ಸದ್ಗತಿಯನ್ನು ಪಡೆಯುವರು. ೫೬

श्रीकृष्णनद्यागमनं मुनीन्द्राः साक्षाच्छिवोक्तं परमं पवित्रम् ।
श्रृण्वन् समाप्नोति सदीर्घमायुरारोग्यमैश्वर्यमयो विमुक्तिम् ॥ ५७ ॥

ಪರಮಪವಿತ್ರವಾದ ಶ್ರೀಕೃಷ್ಣವೇಣೀ ನದಿಯ ಆಗಮನವನ್ನು ಎಲ್ಲ ಋಷಿ ಶ್ರೇಷ್ಠರೂ ಸಾಕ್ಷಾತ್ ರುದ್ರದೇವರಿಂದ ಶ್ರವಣಮಾಡಿ ಅಖಂಡ ಆಯುಷ್ಯವನ್ನೂ, ಆರೋಗ್ಯವನ್ನೂ ಐಶ್ವರ್ಯವನ್ನೂ ಹಾಗೂ ಮೋಕ್ಷವನ್ನೂ ಪಡೆದರು. ೫೭

॥ इति श्रीस्कन्दपुराणे कृष्णामाहात्म्ये ब्रम्हनारदसंवादे तृतीयोऽध्यायः ॥

❀ ❀ ❀

## ॥ अथ चतुर्थोऽध्यायः ॥

नारद उवाच –

तीर्थानि कृष्णवेणायाः समाख्यामि द्विजोत्तमाः
यथावत्ते प्रवक्ष्यामि गुह्यात् गुह्यतमानि च ॥ १ ॥

**ನಾರದರು– ಹೇಳುತ್ತಾರೆ :–**

ಬ್ರಾಹ್ಮಣೋತ್ತಮರೇ ! ಗೋಪ್ಯದಕ್ಕಿಂತಲು ಪರಮಗೋಪ್ಯಗಳಾದ ಕೃಷ್ಣವೇಣೀ ತೀರಸ್ಥ ಎಲ್ಲಾ ತೀರ್ಥಕ್ಷೇತ್ರಗಳ ಮಹಿಮೆಗಳನ್ನು ಯಥಾಸ್ಥಿತವಾಗಿ ಹೇಳುವೆನು. ೧

ಹೇ ಬ್ರಾಹ್ಮಣೋತ್ತಮರೆ ! ಆ ಬ್ರಹ್ಮಗಿರಿಯ ದಕ್ಷಿಣಭಾಗದಲ್ಲಿ ವೇದಗಿರಿ ಎಂಬ ಪರ್ವತ ಇರುವುದು. ಆ ವೇದಗಿರಿಯಲ್ಲಿ ರುಕ್, ಯಜು, ಸಾಮ, ಅಥರ್ವಣ ನಾಲ್ಕೂ ವೇದಗಳೂ ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ್ಯ ಈ ಆರು ಅಂಗಗಳು ವೇದಾಭಿಮಾನೀ ದೇವತೆಗಳೂ, ಷಡಂಗ ಅಭಿಮಾನಿ ದೇವತೆಗಳೂ ಮೂರ್ತಿಮಂತರಾಗಿ ಅಲ್ಲಿ ವಾಸಮಾಡುತ್ತಿರುವರು. ೩

तयोर्मध्ये महातीर्थं पुण्यमामलकं स्मृतम् ।
यत्रामलकिवृक्षोऽसौ देवैरेव प्रदृश्यते ॥ ४ ॥

ಬ್ರಹ್ಮಗಿರಿ ವೇದಗಿರಿ ಇವೆರಡರ ಮಧ್ಯದಲ್ಲಿ ಪುಣ್ಯಕರವಾದ ಆಮಲಕ ಎಂಬ ಮಹಾತೀರ್ಥವಿರುವುದು. ಆ ಅಮಲಕೀ ವೃಕ್ಷವು ದೇವತೆಗಳಿಗೆ ಮಾತ್ರ ದೃಶ್ಯಮಾನ ವಾಗಿರುವುದು. ೪

तस्य मूलात्समुत्पन्ना वेणा नाम महानदी ।
तस्मिन् देशेऽश्वत्थमूलात् कृष्णा चैव समुद्गता ॥ ५ ॥

ಆ ಆಮಲಕೀ ವೃಕ್ಷದ (ನೆಲ್ಲಿ ಗಿಡ) ಮೂಲದಿಂದಲೇ ವೇಣಾ ಎಂಬ ಮಹಾನದಿಯು ಉತ್ಪನ್ನವಾಗಿರುವುದು. ಆ ದೇಶದಲ್ಲಿಯೇ ಇರುವ ಅಶ್ವತ್ಥವೃಕ್ಷದ ಮೂಲದಿಂದಲೇ ಕೃಷ್ಣಾದೇವಿಯೂ ಉದ್ಭೂತಳಾಗಿರುವಳು. ೫

तत्रादौ विष्णुतीर्थं तु पापिनामतिदुर्लभम् ।
तत्र स्नात्वा सकृन्मर्त्यः सारूप्यं लभते हरेः ॥ ६ ॥

ಆ ಕೃಷ್ಣವೇಣಿಯ ಪ್ರವಾಹವು ಪೂರ್ವದಿಕ್ಕಿನಿಂದ ಸಮುದ್ರದವರೆಗೂ ಪ್ರವಾಹರೂಪವಾಗಿ ಹೊರಟಿತು. ಅಲ್ಲಿ ಮೊದಲನೇ ತೀರ್ಥ, ವಿಷ್ಣುತೀರ್ಥ. ಪಾಪಿಗಳಿಗೆ ಅತಿ ದುರ್ಲಭವಾಗಿರುವುದು. ಆ ವಿಷ್ಣುತೀರ್ಥದಲ್ಲಿ ಸ್ನಾನ ಮಾಡಿದವರು ಒಂದೇ ಸಲಕ್ಕೇ ಭಗವಂತನ ಸಾರೂಪ್ಯವನ್ನು ಪಡೆಯುವರು. ೬

अमावास्यां गुरुवारे तत्स्थानं मुक्तिसाधनम् ।

येनेदं कृष्णवेणेति सर्वलोकेषु गीयते ॥ ८ ॥

ಅಲ್ಲಿಂದ ವೇಣಾನದಿಯ ವೇಗವು ಮನುಷ್ಯರಿಗೆ ಸಕಲ ಇಷ್ಟಾರ್ಥಗಳನ್ನು ಉಂಟುಮಾಡಿಕೊಡತಕ್ಕವಳು. ಆದಕಾರಣ ಈ ಜಗತ್ತಿನಲ್ಲಿ ಕೃಷ್ಣವೇಣಿ ಎಂದು ಸ್ತೋತ್ರಮಾಡಿಸಿಕೊಳ್ಳಲ್ಪಟ್ಟಿರುವಳು. ೮

कृष्णा च या जगच्छान्त्यै ब्रह्मणा निर्मिता पुरा ।
वेणा प्राक् कृष्णया युक्ता महती ख्यातिमाप सा ॥ ९ ॥

ಜಗತ್ತಿಗೆ ಶಾಂತಿಗೋಸ್ಕರ ಬ್ರಹ್ಮದೇವರು ಕೃಷ್ಣಾದೇವಿಯನ್ನು ಮೊಟ್ಟಮೊದಲು ನಿರ್ಮಿಸಿದರು. ಆ ವೇಣಿಯು ಮೊಟ್ಟಮೊದಲು ಕೃಷ್ಣಾದೇವಿಯಿಂದ ಕೂಡಿಕೊಂಡು ಮಹತ್ತರವಾದ ಪ್ರಸಿದ್ಧಿಯನ್ನು ಪಡೆದಳು. ೯

ततः ककुद्मतीसंगं कृत्वाऽस्मिन् वारुणं जपम् ।
गायत्र्यष्टशतं चापि मुच्यते सर्वपातकैः ॥ १० ॥

ಅಲ್ಲಿಂದ ಕಕುದ್ಮತೀ ಸಂಗಮ, ಅಲ್ಲಿ ವಾರುಣ ಜಪ, ಗಾಯತ್ರೀ ಮಂತ್ರ ಒಂದು ನೂರಾ ಎಂಟು ಸಲ ಜಪ ಮಾಡಿದರೆ ಎಲ್ಲ ಪಾಪಗಳಿಂದಲೂ ಮುಕ್ತರಾಗುತ್ತಾರೆ. ೧೦

शिलीभूतं महाकायं राक्षसं दुष्टचेतसम् ।
भित्वा धाराभिरुग्राभिः कालेन प्रेषितं द्विजाः ॥ ११ ॥

ದುಷ್ಟಸ್ವಭಾವವುಳ್ಳ ಅದ್ಭುತ ದೇಹಉಳ್ಳ ಒಬ್ಬ ರಾಕ್ಷಸನು ದೊಡ್ಡ ಕಲ್ಲುಬಂಡೆಯಾಗಿದ್ದನು. ಆ ಕಲ್ಲುಬಂಡಿಯನ್ನು ತನ್ನ ಉಗ್ರವಾದ ತೆರೆಗಳ ಪ್ರಭಾವದಿಂದ ಭೇದಿಸಿಕೊಂಡು ಬರುವ ಕೃಷ್ಣವೇಣಿಯನ್ನು ಬ್ರಾಹ್ಮಣರು ಸ್ವಾಗತಮಾಡಿದರು. ೧೧

यत्र सत्या समायाता तत्र तीर्थं महापुलम् ।
विहङ्गं नाम लोकेऽस्मिन्तीर्थानामुत्तमोत्तमम् ॥ १२ ॥

ಎಲ್ಲೆ ಸತ್ಯಾ ಬರುವಳೋ (ಕೃಷ್ಣವೇಣಿಯು) ಅಲ್ಲಿ ತೀರ್ಥವು ಮಹಾಫಲ

ತೀರ್ಥವು ಶಂಭುತೀರ್ಥವು, ಬಹಳ ಪವಿತ್ರವಾದದ್ದು. ಆ ಶಂಭುತೀರ್ಥದ ಸಾನ್ನಿಧ್ಯದಿಂದ ಎಲ್ಲ ಪಾಪಗಳೂ ನಾಶವಾಗುವವು. ೧೩

यत्र जातिस्मरः स्नात्वा विहङ्गः स्वर्गमाप्नुयात् ।
यत्रास्ते शङ्करः साक्षात् स्वयंभूर्हितकाम्यया ॥ १४ ॥

ಯಾವ ವಿಹಂಗತೀರ್ಥದಲ್ಲಿ ಸ್ವತಃ ರುದ್ರದೇವರು ಹಾಗೂ ಬ್ರಹ್ಮದೇವರು ಎಲ್ಲರಿಗೂ ಅವರವರ ಇಷ್ಟಾರ್ಥಗಳನ್ನು ಪೂರ್ಣಮಾಡುವವರಾಗಿರುವರೋ ಆ ತೀರ್ಥದಲ್ಲಿ ಸ್ನಾನಮಾಡಿದರೆ. ಜನ್ಮಾಂತರಸ್ಮರಣವಾಗಿ ಸ್ವರ್ಗ ಪ್ರಾಪ್ತಿಯಾಗುವದು. ೧೪

ततो वेद नदो नाम कृष्णाया सह सङ्गतः ।
गिरेरुत्तरदिग्भागादागतः पुण्यदः किल ॥ १५ ॥

ಅಲ್ಲಿಂದ ಮುಂದೆ ವೇದನದೀ ಎಂಬ ನದಿಯು ಕೃಷ್ಣವೇಣಿಯ ನದಿಯಿಂದ ಸಂಗಮವಾಗಿ ಸಹ್ಯಾದ್ರಿಯ ಉತ್ತರ ದಿಕ್ಕುಗಳಿಂದ ಪುಣ್ಯದಾಯಕಳಾಗಿ ಬಂದಳು. ೧೫

तस्य सङ्गे महालिङ्गं धूर्जटिर्नाम नामतः ।
तस्य दर्शनमात्रेण चतुर्वर्गफलं लभेत् ॥ १६ ॥

ಆ ವೇದನದಿ, ಕೃಷ್ಣವೇಣಿ ಸಂಗಮದಲ್ಲಿ ಧೂರ್ಜಟಿ ಎಂಬ ಮಹೇಶ್ವರನ ಲಿಂಗವಿರುವದು, ಆ ಲಿಂಗದ ದರ್ಶನಮಾತ್ರದಿಂದ ನಾಲ್ಕೂ ಪುರುಷಾರ್ಥಗಳ ಫಲವು ಲಭಿಸುವದು. ೧೬

ततः क्रमाद्रुद्रतीर्थे गोकर्णाख्यो महान् ऋषिः ।
यत्र तप्त्वा तपो घोरं गतिमाप सुदुर्लभाम् ॥ १७ ॥

ಅಲ್ಲಿಂದ ಮುಂದೆ ರುದ್ರತೀರ್ಥವಿರುವದು. ಅಲ್ಲಿ ಗೋಕರ್ಣ ಎಂಬ ಮಹಾನ್ ಋಷಿಗಳು ತಪಸ್ಸು ಮಾಡಿ ದುರ್ಲಭವಾದ ಗತಿಯನ್ನು ಪಡೆದರು. ಅದು ರುದ್ರತೀರ್ಥ. ೧೭

ऋषय ऊचुः–

भारद्वाजकुलोत्पन्नो ऋषिर्विद्वान् सधार्मिकः।
गोकर्णो नाम सुतपाः शिवार्चनरतः सदा ॥ १९ ॥

ನಾರದರು ಹೇಳುತ್ತಾರೆ –

ಭಾರದ್ವಾಜರ ವಂಶದಲ್ಲಿ ಹುಟ್ಟಿ ಧಾರ್ಮಿಕನಾಗಿ ಮಹಾಜ್ಞಾನಿಯಾಗಿ ದೊಡ್ಡ ಋಷಿಯಾಗಿ ಮಹಾತಪಸ್ವಿಯಾಗಿ ಮಹಾದೇವರ ಭಕ್ತನಾದವನು ಗೋಕರ್ಣನು. ೧೯

मानापमानयोस्तुल्यस्तृष्णालोभविवर्जितः।
मदमत्सरहीनात्मा सर्वभूतहिते रतः ॥ २० ॥

ಮಾನಾಪಮಾನಗಳನ್ನು ಸಮವಾಗಿ ತಿಳಿದುಕೊಂಡು ಮದಮತ್ಸರಗಳಿಂದ ರಹಿತನಾಗಿ ಸರ್ವ ಪ್ರಾಣಿಗಳಿಗೆ ಹಿತ ಬಯಸುವವನು. ೨೦

येनकेनचिदाच्छन्नो येनकेनचिदास्थितः।
संपादयन् क्रियाकाण्डं शिवे नित्यं अहैतुकम् ॥ २१ ॥

ಮಾನರಕ್ಷಣಕ್ಕೋಸ್ಕರ ಮಾತ್ರ ಬಟ್ಟೆಯನ್ನು ಧರಿಸಿ ಯಾವುದಾದರೊಂದು ಆಶ್ರಯ ಪಡೆದು ತನ್ನ ಕರ್ತವ್ಯ ಲೋಪವಾಗದಂತೆ ಕಾಮನೆ ಇಲ್ಲದೆ ಸತ್ಕರ್ಮಾನುಷ್ಠಾನ ಮಾಡುವಂಥವನು. ೨೧

ऊर्ध्वरेता मुनिर्नित्यं कृष्णातीरमुपाश्रितः।
कालेन स्वल्पतः सिद्धिर्जाता कृष्णाम्बुसेवनात् ॥ २२ ॥

ಆ ಗೋಕರ್ಣನೆಂಬ ಋಷಿಯು ಊರ್ಧ್ವರೇತಸ್ವಿಯಾಗಿ ದಿನಾಲು ಕೃಷ್ಣಾತೀರವನ್ನು ಆಶ್ರಯಿಸಿಕೊಂಡು ಕೇವಲ ಕೃಷ್ಣಾನದಿಯ ನೀರನ್ನೇ ಸೇವಿಸುವವನಾಗಿ ಬಹಳ ಸ್ವಲ್ಪ ಕಾಲದಲ್ಲಿಯೇ ಸಿದ್ಧಿಯನ್ನು ಪಡೆದನು. ೨೨

तस्य प्रसन्नो भगवान् सोमः सोमार्धभूषणः।
प्राह गंभीरया वाचा वरं वरय सुव्रत ॥ २३ ॥

ಪಾಪ ತಿಸಹಿ ರಾದ ಚಂದ್ರಭೂಷಿತನಾ ಪೂಜ್ಯರಾದ ಪಾರ್ವತೀ ಸಹಿತರಾದ

इत्युक्तस्तं मुनिं प्राह देवं त्रिभुवनेश्वरम् ।
आत्मारामं पूर्णकामं सोमं सोमविभूषणम् ॥ २५ ॥

ಹೀಗೆ ಹೇಳಿಸಿಕೊಂಡ ಆ ಗೋಕರ್ಣನು ಆನಂದಪೂರ್ಣನಾದ, ಪೂರ್ಣ ಕಾಮನಾದ, ಚಂದ್ರಭೂಷಿತರಾದ, ಪಾರ್ವತೀಸಹಿತರಾದ ಚಂದ್ರಭೂಷಿತರಾದ ರುದ್ರದೇವರನ್ನು ಕುರಿತು ಹೇಳಿದರು. ೨೫

ॐ नमो भवाय रुद्राय शर्वाय पशुपाय च ।
उग्राय महते नित्यं भीमाय शंभवे नमः ॥ २६ ॥

ಪರಮಮಂಗಲಕರನಾದ, ಪಶುಪತಿಯಾದ, ಉಗ್ರರಾದ, ಭಯಂಕರರಾದ, ಶರ್ವ, ರುದ್ರ, ಶಂಭು ಎಂಬ ಹೆಸರಿನಿಂದ ಪ್ರಸಿದ್ಧರಾದ, ಪರಮಪೂಜ್ಯರಾದ "ಓಂ ನಮೋ ರುದ್ರಾಯ ನಮಃ". ೨೬

इति मन्त्राष्टकं देवं प्रणवाद्यं नमोन्तकम् ।
त्वदग्रे यः पठेन्नित्यं तस्याभीष्टप्रदो भव ॥ २७ ॥

ಓಂಕಾರದಿಂದ ಆರಂಭವಾಗಿ ನಮಃ ಶಬ್ದದಿಂದ ಕೂಡಿಕೊಂಡು ಇರುವ ಈ ಮಂತ್ರವನ್ನು ನಿಮ್ಮ ಸನ್ನಿಧಾನದಲ್ಲಿ ನಿತ್ಯದಲ್ಲಿಯೂ ಯಾರು ಪಠಣಮಾಡುವರೋ ಅವರ ಇಷ್ಟಾರ್ಥಗಳನ್ನು ಪೂರ್ಣಮಾಡುವವರಾಗಿರಿ. ೨೭

मन्नाम्ना लिङ्गमूर्तिस्त्वं आश्रमे मम शंकर ।
सर्वकामप्रदः सर्वं तीर्थं हि त्वं महेश्वरम् ॥ २८ ॥

ಎಲೈ ಶಂಕರನೇ, ನೀವು ಲಿಂಗಾಕಾರವಾಗಿ ನನ್ನ ಆಶ್ರಮದಲ್ಲಿ, ನನ್ನ ಹೆಸರಿನಿಂದಲೇ ಎಲ್ಲರ ಇಷ್ಟಾರ್ಥಗಳನ್ನು ಪೂರ್ಣಮಾಡುವದಾಗಿ, ಎಲ್ಲ ತೀರ್ಥಗಳ ಸನ್ನಿಧಾನ ವುಳ್ಳವರಾಗಿ, ಮಹೇಶ್ವರನಾಗಿ ಇರುವವರಾಗಿರಿ. ೨೮.

पुत्रहीनाश्च या नार्यः पतिहीनाश्च पुत्रिकाः ।
अस्मिन् मम महातीर्थे स्नानाच्छुद्धा भवन्तु ताः ॥ २९ ॥

ವನ್ನು ಕುರಿತು ಹೋಗುವರು. ೩೦

**इत्युक्तस्तेन मुनिना तथेत्याह च शङ्करः ।**
**पुष्पके मुनिमारोप्य जगाम स्वपदं हरः ॥ ३१ ॥**

ಆ ಋಷಿಗಳಿಂದ ಹೀಗೆ ಹೇಳಿಸಿಕೊಂಡು ಆ ರುದ್ರದೇವರು ತಥಾಸ್ತು ಎಂದು ಹೇಳಿ ಪುಷ್ಪಕವಿಮಾನವನ್ನು ಏರಿಕೊಂಡು ಕೈಲಾಸಕ್ಕೆ ಹೊರಟುಹೋದರು. ೩೧

**इत्येतत्कथितं विप्राः गेकर्णं दक्षिणे तटे ।**
**कृष्णायाः सर्वपापघ्नं गङ्गाद्वारसमीपतः ॥ ३२ ॥**

ಹೇ ಬ್ರಾಹ್ಮಣರೇ, ಕೃಷ್ಣವೇಣೀತೀರದ ದಕ್ಷಿಣ ತಟದಲ್ಲಿ ಇರುವ ಸರ್ವ ಪಾಪ ಪರಿಹಾರಕವಾದ ಗೋಕರ್ಣತೀರ್ಥ ಗಂಗಾದ್ವಾರಕ್ಕೆ ಬಹಳ ಸಮೀಪವೆಂದು ನನ್ನಿಂದ ಹೇಳಲ್ಪಟ್ಟಿತು. ೩೨

**द्वे सहस्रे द्विगुणिते पर्वताच्च द्विजोत्तमाः ।**
**धनुषां कृष्णसान्निध्ये गोकर्णाख्यं महाफलम् ॥ ३३ ॥**

ಹೇ ಬ್ರಾಹ್ಮಣೋತ್ತಮರೇ ! ಸಹ್ಯಾದ್ರಿ ಪರ್ವತದಿಂದ ನಾಲ್ಕು ಸಾವಿರ ದನುಷ್ಯದ (ಮೊಳ) ಮುಂದೆ ಕೃಷ್ಣಾತಟಾಕದಲ್ಲಿ ಮಹಾಫಲಪ್ರದವಾದ ಗೋಕರ್ಣವೆಂಬ ಮಹಾತೀರ್ಥವುಂಟು. ೩೩

**यः प्रातरुत्थाय सदाग्रजन्मा श्रृणोति चाख्यानमिदं पठेद्वा ।**
**कृष्णाश्रयं सर्वसुखास्पदं मुदा पदं मुरारेरमृतं प्रयाति ॥ ३४ ॥**

ಯಾವ ಬ್ರಾಹ್ಮಣರು ಪ್ರಾತಃಕಾಲದಲ್ಲಿ ಎದ್ದು ಈ ಗೋಕರ್ಣಾಖ್ಯಾನವನ್ನು ಪಠಣಮಾಡುವರೋ ಅವರು, ಕೃಷ್ಣಾತಟಾಕದಲ್ಲಿ ವಾಸಮಾಡುವವರಾಗಿ ಎಲ್ಲ ಸುಖವನ್ನೂ ಅನುಭವಿಸುವವರಾಗಿ ಶ್ರೀಕೃಷ್ಣಪರಮಾತ್ಮನ ದಿವ್ಯ ಸ್ಥಾನವನ್ನು ಪಡೆಯುವರು. ೩೪

**॥ इति श्री स्कन्दपुराणे ब्रह्मनारदसंवादे कृष्णामाहात्म्ये**

ततोऽन्यत् संप्रवक्ष्यामि कृष्णाया दक्षिणे तटे ।
गणिकाख्यं महातीर्थं सर्वपापप्रणाशनम् ॥ १ ॥

ಅಲ್ಲಿಂದ ಮುಂದೆ ಸಕಲ ಪಾಪ ಪರಿಹಾರಕವಾದ, ಮಹಾತೀರ್ಥವೆಂದು ಪ್ರಸಿದ್ಧವಾದ ಗಣಿಕಾ ಎಂದು ಹೆಸರಿನ ಮಹಾತೀರ್ಥವು ಕೃಷ್ಣವೇಣಿಯ ದಕ್ಷಿಣ ತಟದಲ್ಲಿ ಇರುವದು. ೧

धनुषां षट्सहस्रेषु गोकर्णात् द्विजसत्तमाः ।
सर्वपापक्षयकरं महापातकिनामपि ॥ २ ॥

ಹೇ ಬ್ರಾಹ್ಮಣೋತ್ತಮರೇ! ಗೋಕರ್ಣತೀರ್ಥದಿಂದ ೬ ಸಾವಿರ ಧನುಷ್ಯದ (ಮೊಳದ)ಮೇಲೆ ಗಣಿಕಾ ಎಂಬ ಮಹಾತೀರ್ಥವಿದೆ. ಆ ತೀರ್ಥವು ಮಹಾಪಾತಕಿಗಳ ಎಲ್ಲ ಪಾಪಗಳನ್ನು ನಾಶಮಾಡುವಂತಹುದು. ೨

स्कन्द उवाच –

नरो नारायणाच्चैव मानसौ ब्रह्मणः सुतौ ।
कृष्णां द्रष्टुं समायातौ अर्थितौ ब्रह्मणा स्वयम् ॥ ३ ॥

ಬ್ರಹ್ಮದೇವರ ಮಾನಸಪುತ್ರರಾದ ನರನಾರಾಯಣರು ಸ್ವತಃ ಬ್ರಹ್ಮದೇವರಿಂದ ಪ್ರಾರ್ಥಿತರಾಗಿ ಕೃಷ್ಣವೇಣಿಯನ್ನು (ಗಣಿಕಾ ತೀರ್ಥವನ್ನು) ನೋಡುವುದಕ್ಕೆ ಬಂದರು. ೩

ततः सरित्समुत्पन्ना सर्वतीर्थात्कमण्डलौ ।
कृष्णाया सङ्गता तेन नाम्ना ख्याता कमण्डली ॥ ४ ॥

ಆ ಗಣಿಕಾ ತೀರ್ಥದಿಂದ, ಆ ನರನಾರಾಯಣರ ಕಮಂಡಲುವಿನಲ್ಲಿದ್ದ ಸರ್ವತೀರ್ಥಾತ್ಮಕವಾದ ಜಲವು, ನದಿಯಾಗಿ ಪ್ರವಹಿಸಿ ಕೃಷ್ಣವೇಣಿಯ ಸಂಗಮವಾಗಿ ಕಮಂಡಲೀ ಎಂದು ಪ್ರಸಿದ್ಧವಾಯಿತು. ೪

ततस्तत्सङ्गमे पुण्ये तपस्तौ चक्रतुश्चिरम् ।
कालेनाल्पेन तौ सिद्धौ परां सिद्धिं अवापतुः ॥ ५ ॥

ಹೇಳುವೆನು. ೬

ऋषिरासीन्महातेजा गौतमो वृद्धसंमतः ।
महाकुलवने रम्ये धनधान्यसमन्विते ॥ ७ ॥

ಜ್ಞಾನವೃದ್ಧರಾದ ಮಹಾತೇಜಸ್ವಿಗಳಾದ ಗೌತಮ ಎಂಬ ಋಷಿಗಳು ಧನ-ಧಾನ್ಯಗಳಿಂದ ಸಮೃದ್ಧವಾದ, ರಮ್ಯವಾದ ಮಹಾಕುಲವೆಂಬ ವನದಲ್ಲಿ ಇರುತ್ತಿದ್ದರು. ೭

श्रुताध्ययनसंपन्नः सदाचारोऽतिथिप्रियः ।
ज्ञानेन भक्तियोगेन प्रशान्तात्मा शिवार्चकः ॥ ८ ॥

ಆ ಗೌತಮ ಋಷಿಗಳು ವೇದಶಾಸ್ತ್ರ ಅಧ್ಯಯನಮಾಡಿ ಸಂಪನ್ನರಾದವರು, ಸದಾಚಾರಿಗಳಾಗಿ ಅತಿಥಿ ಸತ್ಕಾರ್ಯ ಮಾಡುವವರೂ ಹಾಗೂ ಜ್ಞಾನಯೋಗ, ಭಕ್ತಿಯೋಗಗಳಿಂದಲೂ, ಪ್ರಶಾಂತಸ್ವಭಾವದವರಾಗಿ ರುದ್ರದೇವರ ಭಕ್ತರಾಗಿದ್ದರು. ೮

तस्य रूपवती भार्या वृद्धस्य तरुणी मता ।
नाम्ना सिंहोदरी ख्याता सिंहीव रमणप्रिया ॥ ९ ॥

ಆ ಗೌತಮ ಬ್ರಾಹ್ಮಣನಿಗೆ ಅತ್ಯಂತ ರೂಪವತಿಯಾದ ತರುಣಿಯಾದ ಹೆಂಡತಿಯು, ಸಿಂಹೋದರಿ ಎಂಬ ಹೆಸರು ಉಳ್ಳವಳು, ಪ್ರಸಿದ್ಧಳು, ಹೆಣ್ಣು ಸಿಂಹಿಣಿಯಂತೆ ರಮಣಪ್ರಿಯಳಿದ್ದಳು. ೯

भर्तारं याचतेत्यर्थं त्वं रमस्व सुखं मया ।
तडिच्चञ्चलमायुस्ते कौसुमं यौवनं मम ॥ १० ॥

ಆ ರೂಪವತಿಯಾದ ಸಿಂಹೋದರಿಯು ತನ್ನ ವೃದ್ಧ ಗಂಡನಾದ ಗೌತಮನಿಗೆ, ನನ್ನ ತಾರುಣ್ಯವು ಎಳೇ ಸುಗಂಧಿತ ಹೂವಿನಂತೆ ಇರುವುದು. ಆಯುಷ್ಯವು ಮಿಂಚಿನಂತೆ ಬಹಳ ಚಂಚಲವಿರುವದು. ಆದಕಾರಣ ನನ್ನ ಜೊತೆಗೆ ಅತ್ಯರ್ಥವಾಗಿ ಸುಖವಾಗಿ ರಮಿಸು. ೧೦

तथा चोक्तः स विप्रेन्द्रः ह्यपुत्रत्वं न लोकभाक् ॥ १२ ॥

ಹೀಗೆಯೇ ಎಷ್ಟೋ ದಿವಸಗಳು ದಾಟಿದವು. ಆದರೆ ಶುಭದಿವಸ ಬರಲೇ ಇಲ್ಲ. ಆವಾಗ ಆ ಗೌತಮ ಬ್ರಾಹ್ಮಣನು ಅಪುತ್ರನಾಗಿ ಜನರಿಂದ ನಿಂದಿತನಾದನು. ೧೨

एवमुक्तः स धर्मात्मा दुष्प्रजा भयभृत्ततः ।
सन्ध्याकालेऽपि सुतरां रेमे विप्रस्तया सह ॥ १३ ॥

ದುಷ್ಟ ಮಕ್ಕಳು ಜನಿಸುವವು ಎಂಬ ಭಯಯುಕ್ತನಾಗಿ ಆ ಧರ್ಮಾತ್ಮನಾದ ಗೌತಮ ಬ್ರಾಹ್ಮಣನು ಸಂಧ್ಯಾಕಾಲದಲ್ಲಿಯೂ ಕೂಡ ತನ್ನ ಹೆಂಡತಿಯಿಂದ ಕೂಡಿಕೊಂಡು ಯಥೇಷ್ಟವಾಗಿ ವಿಹರಿಸಿದನು. ೧೩

तदेव गर्भमाधत्ते भार्या तस्य महात्मनः ।
पुत्ररूपं महापापं प्राप्ते काले ह्यसूयत ॥ १४ ॥

ಆ ಗೌತಮ ಬ್ರಾಹ್ಮಣನ ಹೆಂಡತಿ ಸಿಂಹೋದರಿಯು ಮಗನೆಂಬ ಮಹಾಪಾಪವನ್ನೇ ಗರ್ಭಧಾರಣೆ ಮಾಡಿದಳು. ನವಮಾಸದಲ್ಲಿ ಪ್ರಸವವಾದಳು. ೧೪

विलोक्य जातकं तस्य गर्गः प्रोवाच संमतः ।
अहो बत मुनिश्रेष्ठ कथमीदृक् सुतस्तव ॥ १५ ॥

ಪುರೋಹಿತರಾದ ಗರ್ಗ ಋಷಿಗಳು ಆ ಬಾಲಕನ ಜಾತಕವನ್ನು ನೋಡಿ ಹೀಗೆ ಹೇಳಿದರು– ಹೇ ಋಷಿಶ್ರೇಷ್ಠರೇ, ಏನಾಶ್ಚರ್ಯವಿದು, ನಿಮಗೆ ಈ ಬಾಲಕನು ಹೇಗೆ ಮಗನಾದನು. ೧೫

सुदामा नाम पापात्मा पितृवंशभयङ्करः ।
ब्रह्महाऽयं सुरापश्च मातृगामी कुलान्तकः ॥ १६ ॥

भविष्यति दुराचारः तदर्थं शान्तिमिच्छसि ।

ಇವನು ಸುದಾಮನೆಂಬ ಪಾಪಾತ್ಮನು, ಪಿತೃವಂಶಕ್ಕೆ ಕಲಂಕದಾತ್ಮನು, ಭಯಂಕರನು,

ಈ ಶಬ್ದವನ್ನು ಕೇಳಿ ಧರ್ಮಾತ್ಮನಾದ ಗೌತಮ ಬ್ರಾಹ್ಮಣನು ಕೂಡಲೇ ಮೂರ್ಛಿತನಾದನು. ೧೭

निनिन्द सुतरां जायां प्रोवाचेदं पुनःपुनः ।
अपुत्रस्य गृहं शून्यं तथा मूर्खसुतस्य च ॥ १८ ॥

ಮಕ್ಕಳಿಲ್ಲದಿದ್ದರೂ, ಮೂರ್ಖ ಮಕ್ಕಳೂ ಇದ್ದರೂ, ಮನೆಯು ಶೂನ್ಯವೇ, ಎಂದು ಮೇಲಿಂದ ಮೇಲೆ ಸಂಕಟಪಡುತ್ತ ಅತಿಶಯವಾಗಿ ತನ್ನ ಭಾರ್ಯೆಯನ್ನು ನಿಂದಿಸಿದನು. ೧೮

दुष्पुत्रस्य गृहं शून्यं आतिथ्यविमुखस्य च ।
विष्णुभक्तिविहीनस्य धर्मशून्यस्य वै तथा ॥ १९ ॥

अग्निहोत्रविहीनस्य नित्यश्राद्धमकुर्वतः ।
भार्याजितस्य च तथा पितृवाक्यमकुर्वतः ॥ २० ॥

ದುಷ್ಟ ಮಗನಿಂದಲೂ ಮನೆಯು ಶೂನ್ಯವೇ. ಅತಿಥಿ ಸತ್ಕಾರ್ಯಗಳಿಗೆ ವಿಮುಖನಾದ, ವಿಷ್ಣುಭಕ್ತಿಯಿಲ್ಲದವನು, ಧರ್ಮ ಬಿಟ್ಟವನು, ದಿನಾಲು ಅಗ್ನಿ ಪೂಜಾ ಮಾಡದೇ ಇರುವವನು, ನಿತ್ಯದಲ್ಲಿಯೂ ಬ್ರಹ್ಮಯಜ್ಞದಲ್ಲಿ ತರ್ಪಣಕೊಡದೇ ಇರುವವನು, ಭಾರ್ಯೆಯ ವಶನಾದವನು, ತಂದೆಯ ಮಾತನ್ನು ಕೇಳದವನು ಇಂಥವರಿದ್ದರೂ ಕೂಡ ಮನೆಯು ಶೂನ್ಯವೇ. ೧೯-೨೦

दुराचारस्य च तथा दुष्पुत्रजनकस्य च ।
एवमुक्तः स धर्मात्मा जायां पश्यन् रुदन् मुहुः ॥ २१ ॥

ದುರಾಚಾರಿಯಾದ ದುಷ್ಟ ಮಗನನ್ನು ನೋಡಿ, ಪತ್ನಿಯನ್ನೂ ನೋಡಿ, ಧರ್ಮಾತ್ಮನಾದ ಗೌತಮ ಬ್ರಾಹ್ಮಣನು ಬಹಳ ಶೋಕತಪ್ತನಾದನು. ೨೧

हृदयस्फुटमासाद्य तत्रैव निधनं गतः ।
सा तस्य तरुणी भार्या मदविह्वललोचना ॥ २२ ॥

तरुणी रूपसंपन्ना मध्यक्षामा सुलोचना  ॥ २३ ॥

ಮೃತನಾದ ಪತಿಯನ್ನೂ, ಬಾಲಕನಾದ ಮಗನನ್ನೂ ಬಿಟ್ಟು ತರುಣಿಯು, ಸುಂದರ ರೂಪಸಂಪನ್ನಳೂ, ಸಿಂಹಕಟಿಯೂ, ಸುಲೋಚನಳೂ ಆದ ಆ ಸಿಂಹೋದರಿಯು ಅನ್ಯತ್ರ ಹೊರಟುಹೋದಳು. ೨೩

ततोऽन्यत्कुलमासाद्य वेश्यानां मुख्यतां गता।
कामसेनेति विख्याता रूपयौवनशालिनी  ॥ २४ ॥

ಅಲ್ಲಿಂದ ಬೇರೆಯವರನ್ನು ಆಶ್ರಯಿಸಿ ವೇಶ್ಯೆಯರಿಗೆ ಮುಖ್ಯಳಾಗಿ ತಾರುಣ್ಯದಿಂದಲೂ, ಸೌಂದರ್ಯದಿಂದಲೂ, ಪರಿಪೂರ್ಣಳಾಗಿ ಕಾಮಸೇನಾ ಎಂಬ ಹೆಸರಿನಿಂದ ಪ್ರಸಿದ್ಧಳಾದಳು. ೨೪

कान्यकुब्जे स्थितिं कृत्वा यूनां सर्वस्वहारिणी।
कुसुंभरक्तवसना श्वेतगन्धानुलेपना  ॥ २५ ॥

ಕಾನ್ಯಕುಬ್ಜ ಎಂಬುವ ಸ್ಥಳದಲ್ಲಿ ವಾಸಮಾಡಿ ತರುಣರಾದ ಜಾರ ಪುರುಷರನ್ನು ವಶಮಾಡಿಕೊಂಡು ಅವರ ಸರ್ವಸ್ವವನ್ನೂ ಹರಣಮಾಡಿ ಮೋಹಕವಾದ ಬಟ್ಟೆಯನ್ನು ಧರಿಸಿ ಮೋಹ ಬರುವಂತೆ ಶ್ವೇತ ಗಂಧವನ್ನು ಶರೀರಕ್ಕೆ ಲೇಪಮಾಡಿಕೊಳ್ಳುತ್ತಿದ್ದಳು. ೨೫

माणिक्यमुक्ताभरणा पर्यङ्के तु हिरण्मये।
बहुभिर्वारमुख्याभिः सेव्यमाना समन्ततः.
चामरैर्व्यजनैर्धूपैः पुष्पै रंभेव नन्दने  ॥ २६ ॥

ಮುತ್ತು, ರತ್ನ, ಆಭರಣಗಳಿಂದ ಅಲಂಕೃತಳಾಗಿ ಹಿರಣ್ಮಯವಾದ ಪರ್ಯಂಕದಲ್ಲಿ ಕುಳಿತುಕೊಂಡು ಅನೇಕಾನೇಕ ವೇಶ್ಯೆಯರಿಂದಲೂ, ವೇಶ್ಯೆಯರ ಮುಖ್ಯಸ್ಥರಿಂದಲೂ, ಚಾಮರ, ಬೀಸಣಿಕೆ, ಧೂಪ, ಪುಷ್ಪಗಳಿಂದ ಸೇವೆ ಮಾಡಿಸಿಕೊಳ್ಳುತ್ತ ವಿಷಯಲಂಪಟಳಾಗಿದ್ದಳು . ೨೬

सुदामा मेखला भित्त्वा याति द्यूतालयं सदा।
निवारितोऽपि सततं सुहृद्भिः सह सङ्गतैः ॥ २८ ॥

ಆ ಸುದಾಮನೆಂಬ ಪಾಪಿ ಮಗನು ತನ್ನ ನೀತಿ ನಿಯಮಗಳನ್ನು ಮೀರಿ, ಅವನ ಗೆಳೆಯರು ತಡೆದರೂ ಕೂಡ ಕಪಟತನದ ಜೂಜಾಟದಲ್ಲಿ ಅವನ ಗೆಳೆಯರು ತಡೆದರೂಕೊಡ ರತನಾಗಿದ್ದನು. ೨೮

न श्रृणोति वचस्तेषां पानगोष्ठीरतः सदा।
कुलं विसृज्य सकलं स जातः पापपूरूषः ॥ २९ ॥

ತನ್ನ ಸಂಗಡಿಗರ ಮಾತುಗಳನ್ನು ಕೇಳದೇ ಸುರಾಪಾನದಲ್ಲಿ ರತನಾಗಿ ತದ್ವಿಷಯಕವಾದ, ತತ್ಸಂಬಂಧಿಯಾದ ಮಾತುಗಳನ್ನೇ ಆಡುತ್ತ ತನ್ನ ಕುಲವನ್ನು ಪರಿತ್ಯಾಗಮಾಡಿ ಮಹಾ ಪಾಪಪುರುಷನಾದನು. ೨೯

कदाचित्तस्करैः सार्धं गतवान् मार्गलुंपकैः।
तैः सार्धं विप्रमुख्यांश्च जघ्ने बहु धनान् बहून् ॥ ३० ॥

ಒಂದು ದಿವಸ ತಸ್ಕರರಿಂದ ಕೂಡಿಕೊಂಡು ಮಾರ್ಗಸ್ಥರನ್ನು ಲೂಟಿಮಾಡುತ್ತ, ಆ ಕಳ್ಳರಿಂದ ಕೂಡಿಕೊಂಡು ಬ್ರಾಹ್ಮಣರನ್ನು ಸಂಹರಿಸುತ್ತ, ಎಷ್ಟೋ ಧನಗಳನ್ನೂ, ದ್ರವ್ಯಗಳನ್ನೂ ದೋಚಿದರು ೩೦

तद्विभज्य धनं सर्वे गतास्ते निजमन्दिरम्।
कान्यकुब्जे गतः सोऽपि सुदामा कामलोलुपः ॥ ३१ ॥

ಆ ಬ್ರಹ್ಮಸ್ವವನ್ನು ಹರಣ ಮಾಡಿ ತಮ್ಮ ತಮ್ಮಲ್ಲಿ ವಿಭಾಗಮಾಡಿಕೊಂಡು ತಮ್ಮ ತಮ್ಮ ಸ್ಥಾನಕ್ಕೆ ಹೊರಟುಹೋದರು. ಆ ಕಾಮಲೋಲುಪನಾದ ಪಾಪಿ ಸುದಾಮನು ಕಾನ್ಯಕುಬ್ಜದಲ್ಲಿಯೇ ಹೋಗಿ ಇರುವವನಾದನು. ೩೧

चकमे कामसेनां तां बहुवित्तेन पापकृत्।
का त्वं कस्य कुतः कान्ते संप्राप्ता वारमुख्यताम् ॥ ३२ ॥

इत्युक्ता तेन सा तथ्यं अब्रवीद्धसती सती ।
गौतमो नाम विप्रेन्द्रो वृद्धत्वाद्विकलेन्द्रियः ॥ ३३ ॥

ಆ ಪಾಪಿ ಸುದಾಮನು ಪ್ರಶ್ನೆಮಾಡಿದಾಗ ಆಗ ಕಾಮಸೇನೆ ಎಂಬ ವೇಶ್ಯೆಯು (ಸಿಂಹೋದರಿಯು ಗೌತಮನ ಹೆಂಡತಿಯು) ಹಸನ್ಮುಖಿಯಾಗಿ ನಿಜವಾದ ವಿಷಯವನ್ನು ಹೇಳಿದಳು. ಗೌತಮನೆಂಬ ಬ್ರಾಹ್ಮಣನ ಹೆಂಡತಿಯು ನಾನು. ಅವನು ವೃದ್ಧನಾದ ಕಾರಣ ಇಂದ್ರಿಯಗಳಿಂದ ದುರ್ಬಲನು. ೩೩

तस्याऽहं तरुणी भार्या सततं रतिमिच्छति ।
धर्मात्मा सुप्रजाकांक्षी न स रेमे तथापि यत् ॥ ३४ ॥

ಆ ಗೌತಮ ಬ್ರಾಹ್ಮಣನ ಹೆಂಡತಿಯು ನಾನು. ತರುಣಿಯು, ಯಾವಾಗಲೂ ರತಿಯನ್ನೇ ಬಯಸುವವಳಾಗಿದ್ದೆನು. ಆದರೆ ಅವನು ಧರ್ಮಾತ್ಮನು. ಸುಪ್ರಜೆಯನ್ನು ಬಯಸುವವನಾದ ಕಾರಣ ನನ್ನನ್ನು, ನಾನು ಬೇಡಿದಾಗ ರತಿಸುಖವನ್ನು ಕೊಡಲಿಲ್ಲ. ೩೪

मया निर्भत्सितः क्रुद्धः सन्ध्याकालेऽप्यलोलुपः ।
दुष्कृतं गर्भमाधत्त तमुत्पाद्य दिवंगतः ॥ ३५ ॥

ನಾನು ರತಿಕ್ರೀಡೆಗೆ ಅವನನ್ನು ಆಗ್ರಹಪಡಿಸಿದಾಗ ಸಂಧ್ಯಾಕಾಲದಲ್ಲಿ ವಿಷಯಲೋಲುಪನಲ್ಲದಿದ್ದರೂ ನನ್ನನ್ನು ರಮಿಸಿದನು. ಆ ನಿಶಿದ್ಧ ಕಾಲದಲ್ಲಿ ರಮಿಸಿದ ಕಾರಣ ನಾನು ಗರ್ಭವತಿಯಾದೆ. ಆ ದುಷ್ಟ ಗರ್ಭವು ಹುಟ್ಟಿದ ಕೂಡಲೇ ಆ ಬ್ರಾಹ್ಮಣ ಮರಣಹೊಂದಿದನು. ೩೫

मृतं पतिं शिशुं पुत्रं आश्रमं सपरिच्छदम् ।
समुत्सृज्य गताऽन्यत्र ह्यपूर्णविषयाऽसती ॥ ३६ ॥

ಮೃತನಾದ ಪತಿಯನ್ನು ಮಗನನ್ನು ಬಿಟ್ಟು ಸಮೃದ್ಧವಾದ ಪತಿಯ ಆಶ್ರಮವನ್ನು ಬಿಟ್ಟು ಅನ್ಯತ್ರ ವಿಷಯಲೋಲುಪಳಾಗಿ ದುಷ್ಟಳಾಗಿ ಹೊರಟು ಹೋದೆನು. ೩೬

इत्यप्रियं वचस्तस्याः समाकर्ण्य विरज्य सः ।
द्विजस...

ಅಲ್ಲಿಯೇ ಇರುವ ದೊಡ್ಡ ಕಂಬಕ್ಕೆ ತನ್ನ ತಲೆಯನ್ನು ಬಡೆದುಕೊಂಡು, ಎಲೇ ವಿಧಿಯೇ! ನಾನು ಏನು ಅಪರಾಧವನ್ನು ಮಾಡಿದೆ, ಎಂಥ ದುಷ್ಕೃತ್ಯವನ್ನು ಮಾಡಿದೆ ? ೩೮

**किं ततो ब्रह्महा भूत्वा मातृगामी सुरापगः ।**
**कथं तरामि वृजिनं को मे शुद्धिं प्रयच्छति ॥ ३९ ॥**

ಬ್ರಹ್ಮಹತ್ಯೆಯನ್ನು ಮಾಡಿದೆ, ಮಾತೃಗಾಮಿಯಾದೆ, ಸುರಾಪಾನ ಮಾಡಿದೆ, ಈ ಪಾಪದಿಂದ ನಾನು ಹೇಗೆ ಬಿಡುಗಡೆಯಾಗಬೇಕು ? ನನ್ನನ್ನು ಯಾರು ಉದ್ಧಾರ ಮಾಡುವರು. ೩೯

**इत्युक्त्वा स तु पापात्मा मूर्छयाऽभिहतो भृशम् ।**
**लब्धसंज्ञः शिरो धुन्वन् लज्जया पर्यतप्यत ॥ ४० ॥**

ಹೀಗೆ ಆ ಪಾಪಾತ್ಮನು ಸಂಕಟಪಡುತ್ತ ಮೂರ್ಛೆ ಹೋದನು. ಎಚ್ಚರಿಕೆ ಬಂದಮೇಲೆ ತನ್ನ ತಲೆಯನ್ನು ತಾನೇ ಬಡೆದುಕೊಳ್ಳುತ್ತ ಲಜ್ಜೆಯಿಂದ ಬಹಳ ಸಂಕಟಪಡುವವನಾದನು. ೪೦

**सा तं निजसुतं ज्ञात्वा जगर्हे वारमुख्यताम् ।**
**अहो बत महत्पापं कृतं मे का गतिर्मम ॥ ४१ ॥**

ಅವಳೂ ಕೂಡ ಸಿಂಹೋದರಿಯು (ಕಾಮಸೇನೆಯು) ಇವನು ತನ್ನ ಮಗನೆಂದು ತಿಳಿದು ವೇಶ್ಯೆಯ ಕರ್ಮವನ್ನು ನಿಂದಿಸುತ್ತ ಅಯ್ಯೋ ಮಹತ್ಪಾಪವನ್ನು ನಾನು ಮಾಡಿದೆನು. ನನಗೆ ಇನ್ನಾರು ಗತಿ ? ಎಂದು ಶೋಕತಪ್ತಳಾದಳು. ೪೧

**क्व ब्रह्मभार्या क्व च वारमुख्या क्व धर्मपत्नी क्व च पुत्रभोगी ।**
**क्व पुण्यपाकात्कुलधर्मिणामहो न देहपापाद्दुरितं तरेमहि ॥ ४२ ॥**

ಬ್ರಾಹ್ಮಣಪತ್ನಿಯಾಗಿ, ಜಾರಿಣಿಯರಿಗೆ ಮುಖ್ಯಸ್ಥಳಾದೆ. ಧರ್ಮಪತ್ನಿಯಾದವಳು, ಪುತ್ರಭೋಗಿಯಾದೆ. ಪುಣ್ಯ ಕಳೆದುಕೊಂಡು ಕುಲಧರ್ಮವನ್ನು ಬಿಟ್ಟು ಈ ಪಾಪಿ ದೇಹವನ್ನು ತೆಗೆದುಕೊಂಡು ಈ ದುರಿತದಿಂದ ಹೇಗೆ ಬಿಡುಗಡೆ ಆದೀತು ಎಂದು ಶೋಕತಪ್ತಳಾದಳು. ೪೨

सञ्जातं द्विजमुख्यस्य निर्विण्णः स वनं ययौ ॥ ४४ ॥

ವಿರಕ್ತಳಾಗಿ ಹೋರಟು ಹೋಗುವ ಆ ಸಿಂಹೋದರಿಯನ್ನು ನೋಡಿ, ಆ ಕಾರ್ಯಕಾರಣವನ್ನು ತಿಳಿದುಕೊಂಡು ಬ್ರಾಹ್ಮಣಪುತ್ರನೂ ನಿರ್ವಿಣ್ಣನಾಗಿ ಆವನೂ ವನಕ್ಕೆ ಹೋದನು. ೪೪

तौ वनं क्रुद्धमनसौ जग्मतुर्भृशदुःखितौ ।
परस्परमपश्यन्तौ देवलं तावपश्यतौ ॥ ४५ ॥

ಅವರಿಬ್ಬರೂ ಕ್ರೋಧಯುಕ್ತ ಮನಃಸ್ಸುಳ್ಳವರಾಗಿ ಬಹಳ ದುಃಖಿತರಾಗಿ ಪರಸ್ಪರವಾಗಿ ನೋಡಲಾರದೆ ಹೊರಟರು. ಅವರಿಬ್ಬರೂ ಆ ವನದಲ್ಲಿ ದೇವಲಋಷಿಗಳನ್ನು ನೋಡಿದರು. ೪೫

तौ दृष्ट्वा देवलः प्राह विरक्तौ दुःखितौ नरौ ।
युवाभ्यां किं कृतं कर्म मर्तुं व्यवसितौ यतः ॥ ४६ ॥

ವಿರಕ್ತರಾಗಿರುವ ಮತ್ತು ದುಃಖಿತರಾಗಿರುವ ಆವರಿಬ್ಬರನ್ನು ನೋಡಿ ನೀವಿಬ್ಬರೂ ಏನು ಪಾಪ ಕರ್ಮ ಮಾಡಿದಿರಿ ? ಯಾವ ಕಾರಣದಿಂದ ಮರಣಕ್ಕೆ ಸಿದ್ಧರಾದಿರಿ ? ಎಂದು ಋಷಿಯು ಕೇಳಿದನು. ೪೬

तावाहतुर्मुनिश्रेष्ठं दुष्कृतं स्वकृतं महत् ।
आश्राव्य चाद्य नाशाय प्राहतौ कृपया मुनिः ॥ ४७ ॥

ಅವರಿಬ್ಬರೂ ತಾವು ಮಾಡಿದ ಮಹತ್ತರವಾದ ದುಷ್ಕರ್ಮವನ್ನು, ಶ್ರೇಷ್ಠರಾದ ಆ ದೇವಲ ಋಷಿಗಳಿಗೆ ಹೇಳಿದರು. ಅದನ್ನು ಕೇಳಿ ಆ ದೇವಲ ಋಷಿಗಳು ದಯಾಳುಗಳಾಗಿ ಪಾಪ ಪರಿಹಾರದ ಉಪಾಯವನ್ನು ಅವರಿಬ್ಬರಿಗೂ ಹೇಳಿದರು. ೪೭

युवाभ्यां सञ्चितं यत्तु तस्य दुष्कृतकर्मणः ।
निष्कृतिर्न क्वचिद्दृष्टा विना कृष्णाम्बुसेवनात् ॥ ४८ ॥

ನಿಮ್ಮಿಬ್ಬರಿಂದ ಸಂಚಿತವಾದ ಆ ದುಷ್ಕರ್ಮಗಳಿಗೆ ಪರಿಹಾರವು ಕೃಷ್ಣವೇಣಿಯ

ಅವರಿಬ್ಬರೂ ಆ ದೇವಲ ಋಷಿಗಳಿಗೆ ನಮಸ್ಕಾರ ಮಾಡಿ, ಹೇ ಋಷಿಗಳೇ ! ಆ ಕೃಷ್ಣಾ ಯಾರು ? ಆ ಕೃಷ್ಣಾ ಎಲ್ಲಿ ಇರುವಳು ? ಆ ಕೃಷ್ಣವೇಣಿಯು ಹೇಗೆ ಎಲ್ಲಿ ದೊರಕುವಳು ? ಎನ್ನುವುದನ್ನು ಹೇಳಿರಿ ಎಂದು ಕೇಳಿದರು. ೪೯

देवल उवाच –

अस्ति प्राच्यां दिशि महान् सह्याद्रिर्नाम शैलराट् ।
वैकुण्ठस्य तनुः साक्षात्तस्माच्छैलाद्विनिस्सृता ॥ ५० ॥

ಇಲ್ಲಿಂದ ಪೂರ್ವ ದಿಕ್ಕಿನಲ್ಲಿ ಮಹತ್ತರವಾದ ಸಹ್ಯಾದ್ರಿ ಎಂಬ ಪರ್ವತರಾಜನಿರುವನು. ಸಾಕ್ಷಾತ್ ವೈಕುಂಠಪತಿಯ ಮಗನು. ಆ ಪರ್ವತದಿಂದ ಹೊರಟು ಬರುವವಳೇ ಸಾಕ್ಷಾತ್ ಕೃಷ್ಣವೇಣಿಯು. ೫೦

सर्वदेवमयी कृष्णा सर्वोपनिषदां तनुः ।
युवयोः शरणं सैव नान्यत्पश्येन्महाघयोः ॥ ५१ ॥

ಆ ಕೃಷ್ಣವೇಣಿಯು ಎಲ್ಲ ದೇವತಾಮಯಳಾದವಳು, ಎಲ್ಲ ಉಪನಿಷತ್ ಗಳೇ ಶರೀರಭೂತಳಾದವಳು, ನಿಮ್ಮಿಬ್ಬರ ಪಾಪವನ್ನು ತೊಳೆಯಲಿಕ್ಕೆ ಕೃಷ್ಣವೇಣಿಯ ಹೊರತಾಗಿ ಇನ್ನೊಬ್ಬರಿಂದ ಸಾಧ್ಯವಿಲ್ಲ. ಆದ್ದರಿಂದ ಅವಳಿಗೇ ಶರಣು ಹೋಗಿರಿ. ೫೧

ब्रह्मनद्याश्च सम्भेदे नरनारायणाश्रमे ।
तत्र माघशतं कृत्वा धूतपापौ भविष्यथः ॥ ५२ ॥

ಆ ಕೃಷ್ಣವೇಣೀ ಅಂದರೇ ಬ್ರಹ್ಮನದಿ. ಅಲ್ಲಿಯೇ ನರನಾರಾಯಣಾಶ್ರಮದಲ್ಲಿ ಮಾಘಮಾಸದಲ್ಲಿ ಒಂದು ನೂರು ಸಲ ಸ್ನಾನ ಮಾಡಿರಿ. ನಿಮ್ಮ ಪಾಪಗಳೆಲ್ಲವೂ ಬಿಟ್ಟು ಹೋಗುವವು. ೫೨

स्कन्द उवाच –

इत्यादिष्टौ तु मुनिना विरक्तौ तौ कृपालुना ।
जग्मतुर्दक्षिणामाशां सह्याद्रीं देवपर्वतम् ॥ ५३ ॥

ಮತ್ತು ಸಹ್ಯಾದ್ರಿಯು ಪ್ರವಾಹ ರೂಪದಿಂದ ಬರುವುದನ್ನು ನೋಡಿ ಪ್ರಾರ್ಥಿಸಿದರು. ೫೪

ऊचतु: परया प्रीत्या मातर्नो देहि सद्गतिम् ।
इत्युक्त्वा सह्यजां पुण्यां सुस्नातौ संगमे तयोः ॥ ५५ ॥

ಹೇ ಕೃಷ್ಣವೇಣಿ ! ಹೇ ತಾಯಿ ! ನಮಗೆ ಸದ್ಗತಿಯನ್ನು ಕೊಡು. ಎಂದು ಪರಮ ಪ್ರೀತಿಯಿಂದ ಪ್ರಾರ್ಥನೆ ಮಾಡಿ ಸಹ್ಯಾದ್ರಿಯಿಂದ ಪ್ರವಹಿಸುವ ಪುಣ್ಯಕರವಾದ ಕೃಷ್ಣವೇಣಿಯ ಸಂಗಮದಲ್ಲಿ ಸ್ನಾನ ಮಾಡಿದರು. ೫೫

वस्तुं व्यवसितौ तावत्तस्मिन्नारायणाश्रमे ।
तावदृषीश्वरं दृष्ट्वा त्रपया निर्गतौ ततः ॥ ५६ ॥

ಆ ನಾರಾಯಣಾಶ್ರಮದಲ್ಲಿಯೇ ವಾಸಮಾಡಿದರು. ಅಲ್ಲಿಯವರೆಗೂ ಆ ಋಷಿಶ್ರೇಷ್ಠರನ್ನು ನೋಡಿ ಲಜ್ಜಾನ್ವಿತರಾಗಿ ಅಲ್ಲಿಂದ ಹೊರಟರು. ೫೬

गणिका पश्चिमे गत्वा सह्यजा दक्षिणे तटे ।
न्यवसत्कृतविश्वासा निराहारा जितेन्द्रिया ॥ ५७ ॥

ಆ ಗಣಿಕೆಯು (ಸಿಂಹೋದರಿಯು) ಪಶ್ಚಿಮ ದಿಕ್ಕಿಗೆ ಹೋಗಿ ಕೃಷ್ಣವೇಣಿಯ ದಕ್ಷಿಣ ತಟಾಕದಲ್ಲಿ ಪರಮ ವಿಶ್ವಾಸದಿಂದ ನಿರಾಹಾರಿಯಾಗಿ ಜಿತೇಂದ್ರಿಯಳಾಗಿ ವಾಸಮಾಡಿದಳು. ೫೭

नित्यं त्रिषवणं स्नात्वा शुद्धसत्त्वा विरक्तधीः ।
प्रायोपविष्टा गणिका मरणे कृतनिश्चया ॥ ५८ ॥

ಆ ಗಣಿಕೆಯು ದಿನಾಲು ತ್ರಿಕಾಲ ಸ್ನಾನ ಮಾಡುತ್ತಾ ಶುದ್ಧವಾದ ಅಂತಃಕರಣ ವುಳ್ಳವಳಾಗಿ ವಿರಕ್ತಳಾಗಿ ಮರಣದಲ್ಲಿ ನಿಶ್ಚಯವುಳ್ಳವಳಾಗಿ ಪ್ರಾಯೋಪವೇಶನಕ್ಕೆ ಕುಳಿತಳು. ೫೮

दृष्ट्वा प्रोवाच नन्दी तां गणिके किमु गृध्नसे ।
सा तं प्रोवाच हसती क्व ते भर्ता महेश्वरः ॥ ५९ ॥

ಹೇಳುವೇವ್ರೋ, ಆ ಕೃಪಾಳುವಾದ ಅವರನ್ನು ಪ್ರಸನ್ನೀಕರಿಸಿದ ಹೊರತು ಆ ದುಃಖವು ಅನುಭವಕ್ಕೆ ಬರುವದಿಲ್ಲ. ೬೦

त्वया वृषेण मे दुःखं विश्लेष्टुं नैव शक्यते ।
इत्थं प्राह हसन्नंदी महादेवं व्यजिज्ञपत् ॥ ६१ ॥

ನಿನ್ನಿಂದ ನನ್ನ ದುಃಖವು ಅಳಿಸಲಿಕ್ಕೆ (ಪರಿಹರಿಸಲಿಕ್ಕೆ) ಶಕ್ಯವಿಲ್ಲ. ಹೀಗೆ ಹೇಳಿದಾಗ ಆ ನಂದಿಯು ಮಂದಹಾಸದಿಂದ ಮಹಾದೇವರನ್ನು ವಿಜ್ಞಾಪನೆ ಮಾಡಿಕೊಂಡನು. ೬೧

देव सत्यं गणिकया वच उक्तं वृषध्वज ।
शरण्यस्त्वं हि जगतां विरक्तानां विशेषतः ॥ ६२ ॥

ಹೇ ವೃಷಧ್ವಜ ನಂದಿವಾಹನನೇ ! ಆ ಗಣಿಕೆಯು ಹೇಳಿದ ಮಾತು ಸತ್ಯ. ನೀನು ಶರಣಾಗತರಕ್ಷಕನು. ವಿಶೇಷತಃ ವಿರಕ್ತರಿಗೂ ಪೂರ್ಣ ರಕ್ಷಕನು. ೬೨

अतस्त्वयैव सन्तप्ता निर्वार्य्या गणिका मृदु ।
तथेत्युक्त्वा स भगवान् नरनारायणाश्रमे ॥ ६३ ॥

प्रायोपविष्टां गणिकां समभ्येत्याब्रवीदिदम् ।
अपि कल्याणि किं तेऽद्य कृष्णातीरेऽपि खिद्यसे ॥ ६४ ॥

ಆದ್ದರಿಂದ ಸಂತಪ್ತಳಾದ, ಮೃದು ಆದ ಆ ಗಣಿಕೆಯ ಸಂಕಟಗಳನ್ನು ನೀವೇ ನಿವಾರಣ ಮಾಡಬೇಕು. ಆ ರುದ್ರದೇವರು ತಥಾಸ್ತು ಎಂದು ಹೇಳಿ ನರನಾರಾಯಣಾಶ್ರಮದಲ್ಲಿ ಪ್ರಾಯೋಪವೇಶನಕ್ಕೆ ಸಿದ್ಧಳಾದ ಗಣಿಕೆಯನ್ನು ನೋಡಿ ಈ ಮಾತು ಕೇಳಿದರು– ಹೇ ಕಲ್ಯಾಣೀ ! ಕೃಷ್ಣಾತೀರದಲ್ಲಿ ಇದ್ದು ಏಕೆ ದುಃಖಪಡುತ್ತಿರುವಿ. ೬೪

द्वादशाब्दैर्न तद्विद्याद्यत्तु कृष्णानिषेवणात् ।
या गतिर्योगयुक्तानां मुनीनां ऊर्ध्वरेतसाम् ॥ ६५ ॥

ಹನ್ನೆರಡು ವರ್ಷಗಳ ವರೆಗೆ ಕೃಷ್ಣಾತೀರದಲ್ಲಿ ವಾಸಮಾಡಿ ಕೃಷ್ಣವೇಣೀಸ್ನಾನ-ಪಾನ ಮಾಡಿದಂಥ ಊರ್ಧ್ವರೇತಸ್ಕರಾದ ಯೋಗಿಗಳಿಗೆ ಋಷಿಗಳಿಗೆ ಯಾವ ಗತಿಯಾಗುವದೋ, ೬೫

ಆ ಪುಣ್ಯವು ಹೇ ಭದ್ರೇ ! ಕೃಷ್ಣವೇಣಿಯ ನೀರು ಕುಡಿಯುವವರಿಗೆ ಬರುವದು. ನೀನಂತೂ ಅತೀವ ಪುಣ್ಯಕರವಾದ ಈ ಕೃಷ್ಣಾತೀರದಲ್ಲಿ ನಿನ್ನ ಶರೀರವು, ೬೭

निर्धूतं ब्रूहि कल्याणि किं ते कृत्यं वरानने ।
तथाचास्तु विशुद्धत्त्वाद्वरदोऽहं समागतः ॥ ६८ ॥

ಹೇ ಕಲ್ಯಾಣಿ, ಬಹಳಪವಿತ್ರವಾಗಿದೆ. ಹೇ ವರಾನನೇ ! ನೀನು ಇನ್ನು ಏನೂ ಮಾಡತಕ್ಕದ್ದು ಇಲ್ಲ. ನೀನು ಶುದ್ಧಳಾಗಿರುವಿ. ಆದ ಕಾರಣ ನಿನಗೆ ನಾನು ವರ ಕೊಡಲಿಕ್ಕೆ ಬಂದಿರುವೆನು. ೬೮

इत्युक्ता गणिका तत्र देवदेवेन शम्भुना ।
प्रणम्य दण्डवद्भूमौ प्रोवाचेदं विरक्तधीः ॥ ६९ ॥

ಹೀಗೆ ರುದ್ರದೇವರು ಹೇಳಿದಾಗ ಆ ಗಣಿಕೆಯು ಆ ರುದ್ರದೇವರಿಗೆ ದಂಡವತ್ ಪ್ರಣಾಮಮಾಡಿ ಅತ್ಯಂತ ವೈರಾಗ್ಯ ಬುದ್ಧಿಯಿಂದ ಈ ಮಾತನ್ನು ಹೇಳಿದಳು. ೬೯

देव देव जगन्नाथ यन्मया दुष्कृतं कृतम् ।
तत्त्वया हृदिसंस्थेन ज्ञातं किं पुनरुच्यते ॥ ७० ॥

ದೇವದೇವೇಶನಾದ ಜಗನ್ನಾಥನೇ ! ಈಶ್ವರನೇ ! ನನ್ನಿಂದ ಏನೇನು ಪಾಪ ಕರ್ಮವು ಮಾಡಲ್ಪಟ್ಟಿರುವವೋ ಅವೆಲ್ಲವನ್ನೂ ತಿಳಿದಿರುವವನಾಗಿರುವಿ. ನಾನು ಮತ್ತೆ ಏನು ಹೇಳಲಿ ? ೭೦

यदि प्रसन्नो भगवान् सर्वभूतभयावहः ।
यन्मूलं भयमुत्पन्नं तस्मान्मुच्येत मां शिवः ॥ ७१ ॥

ಎಲ್ಲ ಪ್ರಾಣಿ ಮಾತ್ರಗಳ ಭಯಪರಿಹಾರಕರಾದ ನೀವು ನನ್ನ ಮೇಲೆ ಪ್ರಸನ್ನರಾಗಿದ್ದ ಪಕ್ಷದಲ್ಲಿ ನನಗೆ ಯಾವ ಕಾರಣದಿಂದ ಭಯ ಹುಟ್ಟಿರುವದೋ ಆ ಭಯದಿಂದ ನನ್ನನ್ನು ಮುಕ್ತರನ್ನಾಗಿ ಮಾಡಿರಿ. ೭೧

गणिका च सुनिष्पापा यन्मया प्रार्थितः पुरा ।

अस्मिन् मम महातीर्थे गणिकाया वरप्रद ।
य: स्नाति माघमासे च स पुण्यां लभते गतिम् ॥ ७३ ॥

ಈ ಗಣಿಕೆಗೆ ವರ ಪ್ರದಾನವಾದ, ಈ ಕೃಷ್ಣವೇಣಿಯ ಮಹಾತೀರ್ಥದಲ್ಲಿ ಸ್ನಾನಮಾಡುವವರಿಗೆ, ಮಾಘ ಮಾಸದಲ್ಲಿ ಯಾರು ಸ್ನಾನ ಮಾಡಿದರೆ ಯಾವ ಪುಣ್ಯಪ್ರಾಪ್ತಿಯಾಗುವದೋ, ಆ ಪುಣ್ಯವು ಅವರೆಲ್ಲರಿಗೂ ದೊರಕಲಿ. ೭೩

ब्रह्मघ्नोऽथ सुरापो वा मातृगो गुरुतल्पगः ।
अस्मिन् माघव्रतं कृत्वा मुक्तो भवतु तत्क्षणात् ॥ ७४ ॥

ಈ ಗಣಿಕಾತೀರ್ಥದಲ್ಲಿ ಮಾಘಮಾಸದಲ್ಲಿ ಯಾರು ಸ್ನಾನ ಮಾಡುವರೋ ಅವರು ಬ್ರಹ್ಮಹತ್ಯೆ, ಸುರಾಪಾನ, ಮಾತೃಗಮನ, ಗುರುಸ್ತ್ರೀಗಮನ, ಎಲ್ಲ ಪಾಪವೂ ತತ್ಕ್ಷಣದಲ್ಲಿ ಪರಿಹಾರವಾಗಲಿ. ೭೪

स्नात्वा पिण्डप्रदो यस्तु श्राद्धं कृत्वा हिरण्यदः ।
अस्मिन् मम महातीर्थे स सौम्यां लभते गतिम् ॥ ७५ ॥

ಆ ಕೃಷ್ಣವೇಣಿತೀರ್ಥದಲ್ಲಿ ಸ್ನಾನ ಮಾಡಿ ಹಿರಣ್ಯಶ್ರಾದ್ಧ ಮಾಡಿ ಯಾರು ಪಿಂಡದಾನವನ್ನು ಮಾಡುವರೋ ಅವರಿಗೆ ಸುಲಭವಾಗಿ ಶ್ರೇಷ್ಠವಾದ ಸದ್ಗತಿಯಾಗಲಿ. ೭೫

यन्मया दुष्कृतं भर्ग धर्मनाशात् कृतं मत् ।
महद्बीजं भर्जयतां भवदं भवनाशन ॥ ७६ ॥

ಹೇ ರುದ್ರದೇವರೇ ! ಸಂಸಾರ ತಾಪತ್ರಯಗಳನ್ನು ಪರಿಹರಿಸುವ ಈಶ್ವರನೇ ! ನನ್ನಿಂದ ಯಾವ ಧರ್ಮನಾಶಕರವಾದ ದುಷ್ಕರ್ಮಗಳು ಮಾಡಲ್ಪಟ್ಟಿರುವವೋ ಅದರ ಅಧರ್ಮದ ಬೀಜವು ಸುಟ್ಟು ಹೋಗಲಿ. ೭೬

इत्थं गुणिकया प्रोक्तं समाकर्ण्यान्तकान्तकः ।
तथेति नन्दिमारुह्य तामादाय दिवं ययौ ॥ ७७ ॥

द्वे सहस्रे तु दण्डानां ततो नारायणाश्रमात् ॥ ७९ ॥

ಎರಡು ಸಾವಿರ ಹೆಜ್ಜೆಯ ಮೇಲೆ ನಾರಾಯಣಾಶ್ರಮದಿಂದ ದೂರವಿರುವದು.
೭೯

श्रीकृष्णनद्याश्चरितं महाद्भुतं श्रृणोति यः श्रावयति द्विजाग्र्यः ।
स शुद्धसत्त्वेष्टफलप्रदो भवेत् प्रयात्यभीष्टां गतिमीप्सितां च ॥ ८० ॥

ಹೇ ಬ್ರಾಹ್ಮಣ ಶ್ರೇಷ್ಠರೇ !ಪರಮ ಅದ್ಭುತವಾದ ಈ ಕೃಷ್ಣವೇಣಿಯ ಚರಿತ್ರೆಯನ್ನು ಯಾರು ಶ್ರವಣ ಮಾಡುವರೋ, ಶ್ರವಣ ಮಾಡಿಸುವರೋ ಅವರಿಬ್ಬರೂ ಪರಮ ಶುಧ್ಧಾಂತಃಕರಣ ಉಳ್ಳವರಾಗಿ ಇಷ್ಟಾರ್ಥವನ್ನುಪಡೆಯುವವರಾಗಿ ಸದ್ಗತಿಯನ್ನು ಪಡೆಯುವರು. ೮೦

॥ इति श्रीस्कन्दपुराणे ब्रह्मनारद संवादे कृष्णामाहात्म्ये
गणिकातीर्थवर्णनं नाम पञ्चमोऽध्यायः ॥

❀ ❀ ❀

## ॥ अथ षष्ठोऽध्यायः ॥

स्कन्द उवाच –

अथान्यत्संप्रवक्ष्यामि नरनारायणाश्रमे ।
कमंडल्याश्च संभेदे ऋषितीर्थं अनुत्तमम् ॥ १ ॥

ಆಮೇಲೆ ಈ ನರನಾರಾಯಣಾಶ್ರಮದಲ್ಲಿ ಇನ್ನೊಂದು ಮಹಾತೀರ್ಥ ಉಂಟು. ಹೇಳುವೆನು. ಆ ಕಮಂಡಲಿಯಿಂದ ಹೊರಟು ಆ ಪ್ರವಾಹದಲ್ಲಿ ಅತಿ ಶ್ರೇಷ್ಠವಾದ ಋಷಿತೀರ್ಥವಿರುವದು. ೧

ऋषितीर्थं परं पुण्यं सङ्गमादुत्तरे तटे ॥ ३ ॥

ತಪಸ್ವಿಗಳಾದ ಆ ನರನಾರಾಯಣರಿಬ್ಬರೂ ಎಲ್ಲಿ ವಾಸಮಾಡಿರುವರೋ, ಎಲ್ಲಿ ಬ್ರಹ್ಮರ್ಷಿಗಳೂ, ಸಿದ್ಧರೂ, ಗಂಧರ್ವರೂ, ಮಹೋರಗಗಳೂ, ಅಗ್ನಿಷ್ವಾತ್ತಾದಿ ಪಿತೃಗಳೂ ಮೂರ್ತಿಮಂತರಾಗಿ ಎಲ್ಲಿ ಇರುವರೋ, ಅದು ಋಷಿತೀರ್ಥವು, ಸಂಗಮದ ಉತ್ತರ ತಟಾಕದಲ್ಲಿ ಇರುವದು. ೨-೩

पितृतीर्थं तटे याम्ये देवतीर्थं च पूर्वतः ।
यत्र सिद्धेश्वरो देवो यत्र धौम्यो महातपाः ॥ ४ ॥

सुदामा यत्र पयसि स्नानमुक्तो महांहसः ।
धूतं तेन महापापं अश्राव्यं दुष्कृतैरपि ॥ ५ ॥

ದಕ್ಷಿಣಕ್ಕೆ ಪಿತೃತೀರ್ಥವು, ಪೂರ್ವಕ್ಕೆ ದೇವತೀರ್ಥವು, ಎಲ್ಲಿ ಸಿದ್ಧೇಶ್ವರದೇವರು, ಎಲ್ಲಿ ಮಹಾತಪಸ್ವಿಗಳಾದ ಧೌಮ್ಯ ಋಷಿಗಳು, ಸುದಾಮನು, ಯಾವ ನೀರಿನಲ್ಲಿ ಸ್ನಾನಮಾಡಿ ಮಹಾಪಾಪಗಳಿಂದ ಮುಕ್ತನಾಗಿರುವನೋ, ಎಲ್ಲ ಮಹಾಪಾಪಗಳೂ ಅವನಿಂದ ತೊಳೆಯಲ್ಪಟ್ಟಿರುವವೋ, ಆ ಮಾಹಾತ್ಮ್ಯವು ದುಷ್ಕರ್ಮಿಗಳಿಂದಲೂ ಶ್ರವಣ ಮಾಡಲ್ಪಡತಕ್ಕದ್ದು. ೪-೫

धूतपापं ततः प्रोक्तं पापीनामपि दुर्लभम् ।
संगमात् क्रोशमात्रे तत् किञ्चिन्न्यूनं द्विजोत्तमाः ॥ ६ ॥

ಹೇ ಬ್ರಾಹ್ಮಣೋತ್ತಮರೇ ! ಆ ಸಂಗಮದಿಂದ ರಹದಾರಿಯ ಮೇಲೆ ಸ್ವಲ್ಪ ಕಮ್ಮಿ ಪಾಪಿಗಳಿಗೆ ಅತಿದುರ್ಲಭವಾದ ಧೂತಪಾಪ ತೀರ್ಥವು ಇರುವುದು. ೬

पितृतीर्थे तु यः स्नायात्तिलैरारण्यकैर्द्विजाः ।
तर्पयेत्स्वपितृन्दत्तं तत्कृतं त्वजरं भवेत् ॥ ७ ॥

ಹೇ ಬ್ರಾಹ್ಮಣರೇ ! ಪಿತೃತೀರ್ಥದಲ್ಲಿ ಯಾರು ಸ್ನಾನಮಾಡಿ ಪಿತೃಗಳಿಗೆ ತಿಲತರ್ಪಣ ಕೊಡುವರೋ, ಅವರು ಅಷ್ಟರಿಂದ ಜನನ-ಮರಣ-ರಹಿತರಾಗಿ ಮುಕ್ತರಾಗುವರು. ೭

ಇವುಗಳಿಂದ) ಯಾರು ಶ್ರಾದ್ಧ ಮಾಡುವರೋ, ಅವರು ಪಿತೃ ಋಣದಿಂದ ಮುಕ್ತರಾಗುವರು. ೯

संगमादुत्तरे स्नात्वा दद्यादन्नं यवैर्युतम्।
ऋषींस्तस्योपतिष्ठेत क्षीरं सर्पिर्मधूदकम् ॥ १० ॥

ಯಾರು ಸಂಗಮದ ಉತ್ತರ ತಟಾಕದಲ್ಲಿ ಸ್ನಾನಮಾಡಿ ಯವ (ಅಕ್ಕಿ) ಗಳಿಂದ ಕೂಡಿದ ಅನ್ನವನ್ನು ಕೊಡುವರೋ, ಅವರು ಋಷಿಋಣಗಳಿಂದ ಮುಕ್ತರಾಗುವರು. ೧೦

यत्फलानि प्रयच्छेत तिलैर्मिश्राणि संगमे।
नरनारायणौ प्रीतौ तस्य तुष्टिं प्रयच्छतः ॥ ११ ॥

ಆ ಸಂಗಮದಲ್ಲಿ ತಿಲಮಿಶ್ರವಾದ ಫಲಗಳನ್ನು, ಯಾರು ಕೊಡುವರೋ, ಅವರ ಮೇಲೆ ನರನಾರಾಯಣರು ಪ್ರೀತರಾಗುವರು. ಆದ್ದರಿಂದ ಆ ನರನಾರಾಯಣನ ಪ್ರೀತ್ಯರ್ಥವಾಗಿ ತಿಲಮಿಶ್ರವಾದ ಫಲಗಳನ್ನು ದಾನ ಕೊಡತಕ್ಕದ್ದು. ೧೧

माघमासे सकृत्स्नात्वा ऋषीन्देवांस्तु पूजयेत्।
फलैश्च नारिकैर्विप्रान् रुद्रलोकं स गच्छति ॥ १२ ॥

ಮಾಘ ಮಾಸದಲ್ಲಿ ಒಂದೇ ಸಲ ಸ್ನಾನ ಮಾಡಿ ಫಲಗಳಿಂದಲೂ, ನಾರಿಕೇಲಗಳಿಂದಲೂ, ದೇವತೆಗಳನ್ನು, ಋಷಿಗಳನ್ನು, ಬ್ರಾಹ್ಮಣರನ್ನು ಪೂಜಿಸುವವರು (ಕೈಲಾಸ) ರುದ್ರಲೋಕಕ್ಕೆ ಹೋಗುವರು. ೧೨

देवतीर्थे ततः पुण्ये प्रातःस्नायी भवेन्नरः।
सर्वपापविशुध्यर्थं मन्त्रेणानेन सुव्रताः ॥ १३ ॥

ಈ ಪುಣ್ಯಕರವಾದ ದೇವತೀರ್ಥದಲ್ಲಿ ಯಾವ ಮನುಷ್ಯರು ಪ್ರಾತಃಸ್ನಾನ ಮಾಡುವರೋ, ಅವರು ವ್ರತಸ್ಥರಾಗಿ ಈ ಮಂತ್ರಗಳಿಂದ ಸ್ನಾನಮಾಡಿದರೆ ಸರ್ವ ಪಾಪಗಳಿಂದ ಶುದ್ಧರಾಗುವರು. ೧೩

पावनं वरुणं नत्वा ततः स्नायाद्विशुद्धये ॥ १६ ॥

ಈ ಮೇಲಿನ ಎರಡು ಮಂತ್ರಗಳನ್ನು ಉಚ್ಚಾರಮಾಡುತ್ತ, ಆಗಮೋಕ್ತವಾದ ಪರಮಶುದ್ಧನಾದ, ಪವಿತ್ರನಾದ, ವರುಣನನ್ನು ನಮಸ್ಕರಿಸಿ ಆತ್ಮಶುದ್ಧ್ಯರ್ಥವಾಗಿ ಸ್ನಾನಮಾಡತಕ್ಕದ್ದು. ೧೬

माघस्नायी रवेर्बिम्बं भित्वा याति परं पदम्।
मोक्षभागी द्विजश्रेष्ठा माघस्नायी प्रकीर्तितः ॥ १७ ॥

ಹೇ ಬ್ರಾಹ್ಮಣಶ್ರೇಷ್ಠರೇ, ಮಾಘಸ್ನಾನ ಮಾಡತಕ್ಕವರು, ಸೂರ್ಯಮಂಡಲವನ್ನು ಭೇದಿಸಿಕೊಂಡು ಉತ್ತಮ ಗತಿಯುನ್ನು ಕುರಿತು ಹೋಗುವರು. ಎಂದು ಮಾಘಸ್ನಾನ ಮಾಡುವವರಿಗೆ ಹೇಳಿರುವರು. ೧೭

एवंविधो माघमासः तपस्वी जनवल्लभः।
तस्य पक्षे शुभे शुक्ले भवत्येकादशी तु या।
हस्तनक्षत्रसंयुक्ता महापातकनाशिनी ॥ १८ ॥

ಈ ವಿಧವಾಗಿ ಮಾಘಮಾಸವು ತಪಸ್ವೀ ನರಿಗೆ ಪ್ರೀತಿಪಾತ್ರವಾಗಿರುವದು. ಮಾಘ ಶುಕ್ಲ ಪಕ್ಷ ಏಕಾದಶೀ ತಿಥಿಯು ಹಸ್ತಾ ನಕ್ಷತ್ರದಿಂದ ಯುಕ್ತವಾಗಿದ್ದರೆ,ಎಲ್ಲ ಮಹಾಪಾತಕಗಳನ್ನೂ ನಾಶಮಾಡುವಂತಹದು. ೧೮

स्कन्द उवाच –

इति सञ्जल्पतां तेषां धूतपापो यतो भवेत्।
सुदामाऽपि द्विजश्रेष्ठा धूतपापं ततः स्मृतम् ॥ १९ ॥

ಹೀಗೆ ಹೇಳುವವರ ಪಾಪಗಳೂ ಕೂಡ ಬಿಟ್ಟು ಹೋಗುವವು. ಹೇ ಬ್ರಾಹ್ಮಣ ಶ್ರೇಷ್ಠರೇ, ಆದ್ದರಿಂದಲೇ ಸುದಾಮನು ಕೂಡ ಎಲ್ಲ ಪಾಪಗಳನ್ನೂ ತೊಳೆದುಕೊಂಡನು. ೧೯

शालकान् वयसंभूतो धौम्यो नाम महातपाः।
जपन्पञ्चाक्षरीं विद्यां परां सिद्धिं अवाप्नयात ॥ २० ॥

[illegible]
ಮಹಾದೇವರು ಅಭಿವ್ಯಕ್ತರಾದರು. ೨೧

ततोऽन्तरिक्षादसृजत् पुष्पवृष्टिं प्रभञ्जनः ।
मेघाः सौम्यां तदा वृष्टिं मुमुचुः तस्य चात्मनः ॥ २२ ॥

ಅದೇ ಕ್ಷಣದಲ್ಲಿ ವಾಯುದೇವರು ಅಂತರಿಕ್ಷದಿಂದ ಆ ರುದ್ರ ದೇವರ ಮೇಲೆ ಪುಷ್ಪವೃಷ್ಟಿ ಮಾಡಿದರು. ಆ ರುದ್ರದೇವರ ಮೇಲೆ ಮೋಡಗಳು ಸೌಮ್ಯವಾಗಿ ವೃಷ್ಟಿ ಮಾಡಿದವು. ೨೨

महापापहरं नृणां महाज्ञानप्रदं सदा ।
सिद्धेश्वरमहातीर्थे व्यतीपाते च संक्रमे ॥ २३ ॥

स्नात्वा पिण्डप्रदो यस्तु स सौम्यां गतिमाप्नुयात् ।
माघमासे व्यतीपाते तथा चंद्रक्षये द्विजाः ॥ २४ ॥

तर्पयेद्यः पितॄन्भक्त्या सघृतैर्गुडपायसैः ।
धूतपापे महातीर्थे सरुद्रस्यालयं व्रजेत् ॥ २५ ॥

ಆ ರುದ್ರದೇವರ ಸ್ಥಾನವು ಮನುಷ್ಯರ ಮಹಾಪಾಪವನ್ನು ಹರಣಮಾಡುವಂತಹುದು, ಹಾಗೂ ಯಾವಾಗಲೂ ವಿಶಿಷ್ಟಜ್ಞಾನವನ್ನು ಕೊಡುವಂತಹುದು. ಆ ಸಿದ್ಧೇಶ್ವರ ಮಹಾತೀರ್ಥದಲ್ಲಿ, ವ್ಯತೀಪಾತ, ಸಂಕ್ರಮಣಕಾಲದಲ್ಲಿ ಯಾರು ಸ್ನಾನಮಾಡಿ ಪಿಂಡದಾನ ಮಾಡುವರೋ ಅವರು ಪರಮ ಸೌಮ್ಯವಾದ ಗತಿಯನ್ನು ಪಡೆಯುವರು. ಹಾಗೂ ಮಾಘಮಾಸದಲ್ಲಿ, ವ್ಯತೀಪಾತದಲ್ಲಿ, ಚಂದ್ರಗ್ರಹಣಕಾಲದಲ್ಲಿ ಬ್ರಾಹ್ಮಣರು ಘೃತ ಸಹಿತವಾದ ಗುಡಪಾಯಸಗಳಿಂದ ಭಕ್ತಿ ಪೂರ್ವಕವಾಗಿ ಆ ಧೂತಪಾಪವೆಂಬ ಮಹಾತೀರ್ಥದಲ್ಲಿ ಪಿತೃಗಳಿಗೆ ತರ್ಪಣ ಕೊಡುವರೋ, ಅವರು ರುದ್ರ ಲೋಕಕ್ಕೆ ಹೋಗುವರು. ೨೩-೨೪-೨೫

सिद्धेश्वरमहातीर्थे सह्यजा उत्तरे तटे ।
हिरण्यं यः प्रयच्छेत स सौरां गतिमाप्नुयात् ॥ २६ ॥

ಆ ಸಹ್ಯಾದ್ರಿಯಿಂದ ಹರಿದು ಬರುವ ಕಷ ಣೆ ಉ ರ ತಟಾಕದ

ತೀರ್ಥಮಾಹಾತ್ಮ್ಯವನ್ನು ಬ್ರಾಹ್ಮಣರೇ, ನಾನು ನಿಮಗೆ ಹೇಳಿದೆನು. ೨೭

कमण्डली संगमतः सुपुण्यं नारायणस्याश्रममाहुरग्र्यम्।
तटद्वये सह्यसुताम्बुधा तं श्रृण्वन्नरो याति हरेः परं पदम् ॥ २८ ॥

ಆಗ ಕೃಷ್ಣವೇಣಿಯು ಕಮಂಡಲೀ ಸಂಗಮದಿಂದ ಬಹಳ ಪುಣ್ಯಕರವಾದ ಆ ನರನಾರಾಯಣಾಶ್ರಮವು, ಬಹಳ ಶ್ರೇಷ್ಠವಾದದ್ದು. ಆ ಕೃಷ್ಣವೇಣೀ ತಟಾಕದ ಎರಡೂ ದಂಡೆಯಲ್ಲಿಯ ಕೃಷ್ಣವೇಣಿಯ ಜಲಮಹಾತ್ಮ್ಯವನ್ನು ಶ್ರವಣಮಾಡುವರೋ ಅವರು ವಿಷ್ಣುಮಂದಿರಕ್ಕೆ ಹೋಗುವರು. ೨೮

इत्थं मुरारेः तनुजां कथां सतीं यः श्रावयेत् भक्तियुतो हि विद्वान्।
सदीर्घमायुः सधनं सधर्मं संप्राप्य चान्ते धृतिमेति पुण्यम् ॥ २९ ॥

ಹೀಗೆ ಶ್ರೀಕೃಷ್ಣನ ತನುಜಳಾದ, ಸತಿಯಾದ, ಕೃಷ್ಣವೇಣೀ ಮಹಾತ್ಮ್ಯವನ್ನು ಯಾವ ಜ್ಞಾನಿಗಳು ಭಕ್ತಿಪುರಸ್ಸರವಾಗಿ ಶ್ರವಣ ಮಾಡುವರೋ, ಅವರು ದೀರ್ಘಾಯುಷಿಗಳಾಗಿ, ಐಶ್ವರ್ಯವಂತರಾಗಿ, ಧರ್ಮವನ್ನು ಸಂಪಾದನೆ ಮಾಡಿ ಕೊನೆಗೆ ಧೈರ್ಯದಿಂದ ಪುಣ್ಯಕರವಾದ ಸ್ಥಾನವನ್ನು ಪಡೆಯುವರು. ೨೯

॥ इति श्रीस्कन्दपुराणे ब्रह्मनारदसंवादे कृष्णामाहात्म्ये
धूतपापवर्णनं नाम षष्ठोऽध्यायः ॥

❀ ❀ ❀

## ॥ अथ सप्तमोऽध्यायः ॥

स्कन्द उवाच –

ततोऽन्यत्संप्रवक्षामि सह्यजा दक्षिणे तटे।
सत्यतीर्थं महापुण्यं क्रोशान्ते धूतपापतः ॥ १ ॥

ಆ ಧೂತಪಾಪದ ಒಂದು ಹರದಾರಿಯ ಮೇಲೆ ಸಹ್ಯಜಳಾದ ಕೃಷ್ಣವೇಣಿಯ

ಸತ್ಯ, ವೇದ ಎಂಬ ಇಬ್ಬರು ಮಕ್ಕಳು ಇದ್ದರು. ೨

तौ पठित्वा तु विद्वांसौ सञ्जातौ तर्ककर्कशौ।
पित्रा दृष्टावतिप्रौढौ पितुर्द्रव्यविरोधिनौ ॥ ३ ॥

ಸತ್ಯ, ವೇದ ಎಂಬ ಇಬ್ಬರು ಮಕ್ಕಳು ಕರ್ಕಶವಾದ ತರ್ಕಶಾಸ್ತ್ರವನ್ನು ಅಧ್ಯಯನ ಮಾಡಿ ವಿದ್ವಾಂಸರಾದರು. ಪ್ರೌಢರಾದರು. ಪಿತ್ರಾರ್ಜಿತ ಸಂಪತ್ತಿನ ಮೇಲೆ ಮೋಹ ಉಳ್ಳವರಾದರು. ತಂದೆ ತಪನಋಷಿ ನೋಡಿದನು. ೩

तौ चाहूयाब्रवीत्पुत्रावस्ति मे विपुलं धनम्।
तद्गृहणीतं महाभागौ धर्मकार्यार्थसाधनम् ॥ ४ ॥

ಆ ಇಬ್ಬರು ಮಕ್ಕಳನ್ನೂ ಕರೆದು ಹೇಳಿದನು. ನನ್ನದು ಯಥೇಷ್ಟವಾದ ಧನವಿರುವುದು. ಭಾಗ್ಯವಂತರಾದ ನೀವಿಬ್ಬರೂ ಧರ್ಮಕಾರ್ಯದ ಸಲುವಾಗಿ ತೆಗೆದುಕೊಳ್ಳಿರಿ. ೪

निवृत्तविषयेणात्र त्रिवर्गः साधितो मया।
एतदेव हि मे शिष्टं यद्योगेनात्मदर्शनम् ॥ ५ ॥

ನನ್ನಿಂದ ವಿಷಯದ ಕಾಮನೆ ಇಲ್ಲದೆ ತ್ರಿವರ್ಗವು ಸಾಧಿಸಲ್ಪಟ್ಟಿರುವುದು. ಇದರಿಂದಲೇ ನಾನು ಸಂಪಾದನೆ ಮಾಡಿದ್ದು. ಇದು ಆತ್ಮಜ್ಞಾನಕ್ಕೆ ಸಾಧನವಾಗಿರುವುದು. ೫

अगस्त्यं मुनिशार्दूलं सत्यं कृत्वा यथांशतः।
भवनस्य गिरेः प्रस्थे स्थापितं मे धनं बहुः ॥ ६ ॥

ಅಗಸ್ತ್ಯ ಋಷಿಗಳನ್ನು ಸಾಕ್ಷಿ ಇಟ್ಟು ಸುವ್ಯವಸ್ಥಿತವಾಗಿ ಯಥೇಷ್ಟವಾದ ಧನವನ್ನು ಭವನಗಿರಿಯ ಪ್ರಸ್ಥಭಾಗದಲ್ಲಿ ಇಟ್ಟಿರುವೆನು ೬

इत्युक्त्वा तौ पिता विद्वान् जगाम तपसेवनम्।
तत्रागस्त्यं समाहूय विभागं कुरु मे मुने ॥ ७ ॥

ಸತ್ಯನು ಅನುಜನಾದ ವೇದನಿಗೆ ಹೇಳಿದನು. ನೀನು ಶ್ರೇಷ್ಠಶಿಲವನ್ನು ತೆಗೆದು ಕೊಂಬುವದಿಲ್ಲ. ಆವಾಗ ವೇದನೂ ಕೂಡ ಅಗ್ರಜನಾದ ಸತ್ಯನಿಗೆ ಮೂರ್ಖನೇ, ಸತ್ಯವನ್ನು ಭಂಗಮಾಡಬೇಡ ಎಂದು ಹೇಳಿದನು. ೮

सत्योऽपि मुष्टिघातेन विनिहत्यानुजं बलात्।
तावल्लगुडमादाय वेदेनैवाग्रजो हतः ॥ ९ ॥

ಅಗ ಅಣ್ಣನಾದ ಸತ್ಯನು ಅನುಜನಾದ ವೇದನನ್ನು ಮುಷ್ಟಿಯಿಂದ ಹೊಡೆದನು. ಅನುಜನಾದ ವೇದನು ಅಗ್ರಜನಾದ ಸತ್ಯನನ್ನು ಕಲ್ಲು ತೆಗೆದುಕೊಂಡು ಹೊಡೆದನು. ೯

निवार्यमाणावपि तौ मुनिना ज्ञानयोगिना।
प्रवारितावप्यन्योन्यं जघ्नतुस्तौ परस्परम् ॥ १० ॥

ಜ್ಞಾನಯೋಗಿಗಳಾದ ಅಗಸ್ತ್ಯ ಋಷಿಗಳು ತಡೆದರೂ ಕೂಡ ಅವರಿಬ್ಬರೂ ಅನ್ಯೋನ್ಯವಾಗಿ ಪರಸ್ಪರವಾಗಿ ಬಡದಾಡಿದರು. ೧೦

धनलौभ्यं तयोर्दृष्ट्वा जहर्षुः शयिनस्तदा।
निजघ्ने चानुजं सत्यः तावत्तेनैव ताडितः ॥ ११ ॥

ಅವರಿಬ್ಬರ ಧನಲೋಭವನ್ನು ನೋಡಿ ಶಯಿನನು ಅಪಹಾಸ ಮಾಡಿದನು. ಅಗ ಸತ್ಯನು ಅದೇ ಕಲ್ಲಿನಿಂದ ತಮ್ಮನನ್ನು ಹೊಡೆದು ಸಂಹಾರ ಮಾಡಿದನು. ೧೧

जगाम पितरं वक्तुं स हि क्षिप्तस्तु वै सदा।
दृष्टः पित्रा स शमिना निहतो धनलिप्सया ॥ १२ ॥

ತಂದೆಗೆ ಹೇಳಲಿಕ್ಕೆ ಕಲ್ಲಿನಿಂದ ತಾಡಿತನಾದ ಸತ್ಯನು ಅನುಜನನ್ನು ಹೊಡೆದು ಒಗದು ಬಂದನು. ಅಗ ಧನಲೋಭದಿಂದ ತಾಡಿತನಾಗಿ ಹತನಾದದ್ದನ್ನು ನೋಡಿ ಭಗವನ್ನಿಷ್ಠ ಬುದ್ಧಿಯುಳ್ಳ ಜ್ಞಾನಯೋಗಿಗಳಾದ ಋಷಿಗಳಿಂದ ಸಹಿತನಾಗಿ ತಂದೆ ತಪನನು ನೋಡಿದನು. ೧೨

पितो वाचव्यवसितं विचित्रं चैव दुःखदम्।

ಅಂತಃಕರಣದ ತಮಿಯುಮನಯು. ೧೪

**करुणाऽपि न सौन्दर्ये ययोस्तु जीवितं वृथा।**
**किं धनं धर्महीनं यत् किं श्रुतं श्रमवर्जितम्  ॥ १५ ॥**

ತಾರುಣ್ಯರಹಿತವಾದ ಮೇಲೆ ಸೌಂದರ್ಯವೂ ಇಲ್ಲ. ಜೀವನವೂ ವ್ಯರ್ಥ. ಧರ್ಮಹೀನವಾದ ಧನವು ಏನು ಪ್ರಯೋಜನ ? ಶ್ರಮವಿಲ್ಲದ ಐಶ್ವರ್ಯವು ಏನು ಪ್ರಯೋಜನ ? ೧೫

**किं कर्म नार्पितं विष्णौ किं ज्ञानं यन्न चैश्वरम्।**
**उपकारविहीनं किं देहगेहमथापि वा  ॥ १६ ॥**

ವಿಷ್ಣುವಿನಿಗೆ (ಭಗವಂತನಿಗೆ) ಸಮರ್ಪಣೆ ಮಾಡದ ಕರ್ಮ, ಈಶ್ವರನಿಗೆ ಪ್ರೀತಿಕರವಾಗದೇ ಇರುವ ಜ್ಞಾನವು, ಉಪಕಾರ ಮಾಡದ ದೇಹ ಗೇಹದಿಂದ ಏನು ಪ್ರಯೋಜನ ? ೧೬

**जीवितेनापि किं तेन सत्यहीनेन पुत्रक।**
**जीवितं यस्य धर्मार्थं धर्मो ज्ञानार्थ एव च  ॥ १७ ॥**

ಸತ್ಯವನ್ನೇ ಕಳೆದುಕೊಂಡನಂತರ ಜೀವನದಿಂದ ಏನು ಪ್ರಯೋಜನ ? ಜೀವನವು ಧರ್ಮಾರ್ಥದ ಸಲುವಾಗಿ ಇರುವದು. ಧರ್ಮವು ಜ್ಞಾನದ ಸಲುವಾಗಿ ಇರುವದು. ೧೭

**ज्ञानं ध्यानं च योगार्थं सोऽचिरादेव मुच्यते।**
**ब्राह्मणस्य हि देहोऽयं नोपभोगाय कल्पते  ॥ १८ ॥**

ಜ್ಞಾನವು ಧ್ಯಾನದ ಸಲುವಾಗಿ ಇರುವದು. ಧ್ಯಾನವು ಯೋಗದ ಸಲುವಾಗಿ ಇರುವದು. ಆ ಯೋಗವು ಮೋಕ್ಷದ ಸಲುವಾಗಿ, ಆ ಯೋಗದಿಂದ ಬೇಗನೇ ಮೋಕ್ಷಪ್ರಾಪ್ತಿ ಯಾಗುವುದು. ಬ್ರಾಹ್ಮಣರ ದೇಹವು ಉಪಭೋಗದ ಸಲುವಾಗಿ ಇರುವದಿಲ್ಲ. ೧೮

**इह क्लेशाय महते प्रेत्यानन्तसुखाय च।**

एतद्धर्मसर्वस्वं निन्दितानि विवर्जयेत्।
ऋजुः तपस्वी सन्तुष्टः रामःसत्यो जितेन्द्रियः ॥ २० ॥

ಇವೇ ಸರ್ವಸ್ವವು. ಧರ್ಮವು. ದೂಷಿತವಾದವುಗಳನ್ನು ಬಿಟ್ಟು ಬಿಡಬೇಕು, ಸಾತ್ವಿಕನಾಗಬೇಕು, ತಪಸ್ವಿಯಾಗಬೇಕು, ಸಂತುಷ್ಟನಾಗಬೇಕು, ಸಮಬುದ್ಧಿಯುಳ್ಳವನಾಗಿರಬೇಕು, ಸತ್ಯವಂತನಾಗಿರಬೇಕು, ಜಿತೇಂದ್ರಿಯನಾಗಬೇಕು. ೨೦

दान्तः शान्तो दयावांश्च ब्रह्मण्यान्नावसीदति।
पारुष्यं अनृतं हिंसा परस्वं परयोषितः ॥ २१ ॥

कापट्यं लोकवार्तां च पापभेदान् विवर्जयेत्।
परलोकहितं नित्यं शश्वदुत्थाय चिन्तयेत् ॥ २२ ॥

ಇಂದ್ರಿಯನಿಗ್ರಹವುಳ್ಳವನಾಗಬೇಕು, ಶಾಂತನಾಗಿರಬೇಕು, ದಯೆ ಉಳ್ಳವನಾಗಿರಬೇಕು, ಬ್ರಾಹ್ಮಣ್ಯವನ್ನು ಕಳೆದುಕೊಳ್ಳಬಾರದು. ಕ್ರೌರ್ಯವನ್ನು, ಸುಳ್ಳು, ಹಿಂಸಾ, ಪರಸ್ವ, ಪರಸ್ತ್ರೀಯರು, ಕಪಟತನವನ್ನೂ, ಲೋಕವಾರ್ತೆಯನ್ನೂ, ಪಾಪಕರ್ಮವನ್ನೂ ಬಿಡಬೇಕು. ಜನರಿಗೆ ಹಿತವನ್ನು ಬಯಸಬೇಕು. ದಿನಾಲು ಬೆಳಿಗ್ಗೆ ಎದ್ದಕೂಡಲೆ ಎಲ್ಲರಿಗೂ ಕ್ಷೇಮವನ್ನು ಚಿಂತಿಸಬೇಕು. ೨೧-೨೨

अत्रैव कर्मणामेवं विपाकं परिचिन्तयेत्।
ऊर्ध्वबाहुर्ब्रवीम्यैतन्न च कश्चिच्छृणोति मे ॥ २३ ॥

धर्मादर्थश्च कामश्च स धर्मः किन्न सेव्यते।
पूर्वे वयसि यो धर्मं न करोति समूढधीः ॥ २४ ॥

ಇದೇ ಜನ್ಮದಲ್ಲಿ ಕರ್ಮ ಪರಿಪಕ್ವವಾಗುವುದನ್ನು ಚಿಂತಿಸಬೇಕು. ಬಾಹುಗಳನ್ನೆತ್ತಿ ಶಪಥಪೂರ್ವಕವಾಗಿ ಹೇಳುವೆನು. ಇದನ್ನು ನನ್ನ ಮಾತನ್ನು ಯಾರು ಕೇಳುವದಿಲ್ಲವೋ ಧರ್ಮದಿಂದ ಅರ್ಥ, ಕಾಮ, ಮೋಕ್ಷ, ಇದೇ ಧರ್ಮವನ್ನು ಯಾರು ಆಚರಿಸುವದಿಲ್ಲವೋ, ಪೂರ್ವವಯಃಸಿನಲ್ಲಿ ಯಾವ ಧರ್ಮವನ್ನೂ ಮಾಡುವದಿಲ್ಲವೋ ಅವರು ಪರಮ ಮೂರ್ಖರು. ೨೩-೨೪

शून्यमार्गान्निवर्तन्ते ज्ञातयः सहबान्धवैः ॥ २६ ॥

ಆಕಸ್ಮಾತ್ತಾಗಿ ಮರಣ ಬಂದರೆ ಧರ್ಮ ಮಾಡುವದು ಸಾದ್ಯವಿಲ್ಲ. ಆಗ ಎಲ್ಲ ಜ್ಞಾತಿಗಳೂ ಬಾಂಧವರಿಂದ ಕೂಡಿಕೊಂಡು ನಿರ್ಗತಿಕರಾಗುವರು. ೨೬

येन ते सह गन्तव्यं तत्कर्म सुकृतं कुरु ।
तोयफेनोपमे देहे जीवे शकुनिवत्स्थिते ॥ २७ ॥

ನೀರಿನ ಮೇಲಿನ ಗುಳ್ಳೆಯಂತೆ ಈ ದೇಹದಲ್ಲಿ ಜೀವನು ಶಕುನಿಯಂತೆ ಇರುವನು. ಆದಕಾರಣ ಸಕಲ ಬಾಂಧವರಿಂದ ಕೂಡಿಕೊಂಡು ನಿರ್ಗತಿಕನಾಗದೇ ಸದ್ಗತಿಯನ್ನು ಪಡೆಯಬೇಕು. ಅದಕ್ಕೋಸ್ಕರ ಸುಕೃತಗಳಾದ ಸತ್ಕರ್ಮಗಳನ್ನು ಮಾಡು. ೨೭

अनित्ये प्रियसंवासे कथं स्वपिषि पुत्रक ।
अविश्राममनालम्बमपाथेयमदेशिकम् ॥ २८ ॥

ವಿಶ್ರಾಂತಿ ಇಲ್ಲದ, ಆಶ್ರಯವಿಲ್ಲದ, ಬುತ್ತಿಗಂಟು ಇಲ್ಲದ, ಅದೇಶಿಕವಾದ, ಈ ಅನಿತ್ಯವಾದ ಸಹವಾಸದಲ್ಲಿ ಎಲೋ ಮಗನೇ ಏಕೆ ಮಲಗಿರುವಿ. ೨೮

ततः कान्तारमध्वानं कथमेको गमिष्यसि ।
शुभे शुभे समादाय पुमान्यत्र हि गच्छति ॥ २९ ॥

ಆಮೇಲೆ ದಟ್ಟವಾದ ಅರಣ್ಯ ಸದೃಶವಾದ ಈ ದಾರಿಯನ್ನು ಕುರಿತು ಒಬ್ಬನೇ ಹೇಗೆ ಹೋಗುವಿ. ಶುಭ ಅಶುಭ ಎರಡನ್ನೂ ತೆಗೆದುಕೊಂಡು ಮನುಷ್ಯನು ಹೋಗಬೇಕಾಗುವದು. ೨೯

अन्यत्रैवास्य गच्छन्ति सुहृत्संबन्धिबान्धवाः ।
अहिंसा सत्यमस्तेयं क्षमाजपतपोमयम् ॥ ३० ॥

ಸುಹೃತ್ ಜನರು, ಸಂಬಂಧಿಗಳು, ಬಾಂಧವರು, ಬೇರೆ ಕಡೆಗೆ ಹೋಗಿಬಿಡುವರು. ಆದಕಾರಣ ಅಹಿಂಸಾ, ಸತ್ಯ, ಅಚೌರ್ಯ, ಕ್ಷಮೆ, ಜಪ, ತಪವೆಂಬ. ೩೦

सन्निमज्य त्रिषवणं याहि विष्णुमनामयम् ।
इत्याकर्ण्य पितुर्वाक्यं स सत्यो विगतस्पृहः ॥ ३२ ॥

ತ್ರಿಕಾಲದಲ್ಲಿ ಸ್ನಾನ ಮಾಡು, ನಿರಾಮಯವಾದ ವಿಷ್ಣುಲೋಕವನ್ನು ಕುರಿತು ಹೋಗು. ಈ ತಂದೆಯ ಮಾತನ್ನು ಕೇಳಿ ಆ ಸತ್ಯನು (ಮಗನು) ಈರ್ಷೆಯನ್ನು ಬಿಟ್ಟನು. ೩೨

प्रणम्य पितरं भक्त्या कृष्णातीरं जगाम सः ।
धूतपापात्क्रोशमात्रे कृष्णाया दक्षिणे तटे ॥ ३३ ॥

ತಂದೆಗೆ ನಮಸ್ಕಾರಮಾಡಿ, ಭಕ್ತಿಪುರಃಸರವಾಗಿ, ಆ ಸತ್ಯನೆಂಬ ಮಗನು ಕೃಷ್ಣವೇಣಿ ತಟಾಕಕ್ಕೆ ಹೋದನು. ಆ ಧೂತಪಾಪ ಕ್ಷೇತ್ರದ ಒಂದು ಕ್ರೋಶದ ಮೇಲೆ ಕೃಷ್ಣೆಯ ದಕ್ಷಿಣ ತಟಾಕದಲ್ಲಿ, ೩೩

आराधयन् महादेवं परित्यज्य मदादि षट् ।
तस्य प्रसन्नो भगवान् त्रिवर्णो नीललोहितः ॥ ३४ ॥

ಕಾಮಕ್ರೋಧಾದಿ ಷಡ್ವೈರಿಗಳನ್ನು ಪರಿತ್ಯಾಗಮಾಡಿ, ಮಹಾದೇವರನ್ನು ಆರಾಧನೆ ಮಾಡಿದನು. ಅವನ ಮೇಲೆ ಪೂಜ್ಯರಾದ, ನೀಲಕಂಠನಾದ, ವರ್ಣತ್ರಯಾತ್ಮಕನಾದ ಮಹಾದೇವರು ಪ್ರಸನ್ನರಾದರು. ೩೪

प्रशान्तमनसं दृष्ट्वा सर्वभूतहिते रतम् ।
समनिन्दा स्तुतिं शान्तं समलोष्टाश्वकाञ्चनम् ॥ ३५ ॥

ಪರಮವಿರಕ್ತನಾದ, ನಿಂದಾಸ್ತುತಿಗಳಿಗೆ ಸಮನಾದ, ಎಲ್ಲ ಪ್ರಾಣಿಗಳಿಗೂ ಹಿತವನ್ನು ಬಯಸುವ, ಪ್ರಶಾಂತವಾದ ಮನಸ್ಸು ಉಳ್ಳವನಾದ ಸತ್ಯನನ್ನು ನೋಡಿ. ೩೫

जपन्पञ्चाक्षरीं विद्यां अगस्त्येनोपदेशिताम् ।
तमाह भगवान् रुद्रः सत्य किं ते हृदि स्थितम् ॥ ३६ ॥

ಅದೆಲ್ಲವನ್ನೂ ಹೇಳು. ಮಹಾಭಾಗ್ಯವಂತನೇ, ಎಲ್ಲ ದೇವತೆಗಳಿಗೆ ಪರಮ ದುರ್ಲಭವಾದ, ಇನ್ನೊಬ್ಬರಿಗೆ ಕೊಡಲಿಕ್ಕೆ ಬಾರದಂತಹ, ಪರಮ ಮಂಗಲಕರವಾದ ವರವನ್ನು ಕೇಳು. ೩೭

तमाह देवदेवेशं प्रणम्य तपनात्मजः ।
योगं मे देहि देवेश सर्वेषां सर्वगः शिवः ।
पश्यामि सर्वभूतस्थं एकीभावेन संस्थितम् ॥ ३८ ॥

ತಪನನ ಮಗನಾದ ಸತ್ಯನು ದೇವ ದೇವೇಶನಾದ ಮಹಾದೇವರಿಗೆ ನಮಸ್ಕಾರ ಮಾಡಿ ಹೇಳಿದನು. ಹೇ ದೇವೇಶನಾದ, ಸರ್ವಜ್ಞನಾದ, ಸರ್ವರಿಗೂ ಮಂಗಲಕರನಾದ, ಶಿವನೇ ! ನನಗೆ ಸರ್ವಪ್ರಾಣಿಗಳಲ್ಲಿ ಇರುವ ಏಕೀಭಾವನೆಯಿಂದ ಎಲ್ಲರನ್ನೂ ನೋಡುವ ಆ ಪರಮಾತ್ಮನನ್ನು, ನೋಡುವ ಯೋಗವನ್ನು ಕೊಡುವವನಾಗು. ೩೮

स्कन्द उवाच –

इति तस्य वचः श्रुत्वा योगिध्येयांघ्रिपङ्कजः ।
आत्मारामः पूर्णकामः संविचिन्त्याब्रवीदिदम् ॥ ३९ ॥

ಹೀಗೆ ಕೇಳಿದ ಸತ್ಯನ ಮಾತನ್ನು ಕೇಳಿ, ಯೋಗಿಗಳಿಂದ ಆರಾಧಿಸಲ್ಪಟ್ಟ ಪಾದಕಮಲವುಳ್ಳ, ಪೂರ್ಣಕಾಮನಾದ, ಆನಂದಪೂರ್ಣನಾದ, ರುದ್ರದೇವರು ವಿಚಾರ ಮಾಡಿ ಈ ರೀತಿಯಾಗಿ ಹೇಳಿದರು. ೩೯

न पद्मासनयोगेन न नासाग्रनिरीक्षणात् ।
मनसश्चेन्द्रियाणां च संयोगो योग उच्यते ॥ ४० ॥

ಪದ್ಮಾಸನ ಯೋಗದಿಂದಲೂ, ನಾಸಾಗ್ರನಿರೀಕ್ಷಣ ಯೋಗದಿಂದಲೂ, ಮನಸ್ಸಿಗೂ ಇಂದ್ರಿಯಗಳಿಗೂ, ಸಂಯೋಗ ಮಾಡುವದಕ್ಕೆ ಯೋಗವೆಂದು ಹೆಸರು. ೪೦

कर्मणा मनसा वाचा भूतसाम्यमतन्द्रितः ।
भज ते सर्वभूतस्थं स मोक्षमधिगच्छति ॥ ४१ ॥

**इति योगस्य सर्वस्वं मया ते कथितं द्विज।**
**गृहाण परया तुष्ट्या परानन्दात्मको भव ॥ ४३ ॥**

ಹೀಗೆ ಯೋಗದ ಸರ್ವಸ್ವವನ್ನು ನಾನು ನಿನಗೆ ಹೇಳಿರುವೆನು. ಬ್ರಾಹ್ಮಣ ಶ್ರೇಷ್ಠನೇ! ಪರಮ ಸಂತೋಷದಿಂದ ಈ ಯೋಗವನ್ನು ತೆಗೆದುಕೊಂಡು ಪರಮಾನಂದ ಉಳ್ಳವನಾಗು. ೪೩

**आनन्दीभूतमात्मानं पश्यस्यनुभवं यदा।**
**तदा गन्तासि निर्वेदं श्रोतव्यस्य श्रुतस्य च ॥ ४४ ॥**

ಯಾವಾಗ ನೀನು ಆನಂದಪರವಶನಾಗಿ ಆನಂದಾನುಭವವನ್ನು ಅನುಭವಿಸುವೆಯೋ, ಆವಾಗ, ಹೇಳಿದ್ದು ಕೇಳಿದ್ದು ನಿನಗೆ ಸಾರ್ಥಕವಾಗಿ ವೈರಾಗ್ಯ ಉದಯವಾಗುವದು. ೪೪

**इति ते कथितं सत्ययोगतत्वं सुनिश्चितम्।**
**किमन्यदिच्छसे ब्रह्मन् यत्तेऽभीष्टं ददामि तत् ॥ ४५ ॥**

ಹೇ ಸತ್ಯನೇ! ನಿನಗೆ ನಿಶ್ಚಯವಾಗಿಯೂ ರಹಸ್ಯವಾದ ಯೋಗದ ತತ್ವವನ್ನು ಹೇಳಿರುವೆನು. ಎಲೇ ಬ್ರಾಹ್ಮಣನೇ! ನಿನಗೆ ಅಭೀಷ್ಟವನ್ನು ಕೂಡುವೆನು. ಏನು ಇಚ್ಛೆ ಇರುವುದು ಕೇಳು ?೪೫

**सत्य उवाच –**

**सत्यतीर्थं भवत्वेतत्त्वं च सत्यो भवत्विह।**
**अस्मिन् मम महातीर्थे नान्यत्किञ्चिद्वरं वृणे ॥ ४६ ॥**

ಈ ನನ್ನ ಮಹಾತೀರ್ಥದಲ್ಲಿ ನಾನು ಕೇಳುವದು- ಇದು ಸತ್ಯತೀರ್ಥವಾಗಲಿ; ನೀವು ಕೂಡ ಸತ್ಯಶಬ್ದವಾಚ್ಯರಾಗಿ ಇರುವವರಾಗಿರಿ. ಬೇರೆ ಏನೂ ವರವನ್ನು ಕೇಳುವವದಿಲ್ಲ. ೪೬

सा व्यपोहतु देवेश त्वत्प्रसादान् महेश्वर ॥ ४८ ॥

ಹೇ ಮಹೇಶ್ವರನೇ! ನಾನು ನಿನ್ನ ಹತ್ತಿರ ಬೇಡಿಕೊಳ್ಳುವೆನು. ನನಗೆ ಯಾವ ಬುದ್ಧಿಯನ್ನು ಕೊಟ್ಟಿರುವಿರೋ ಅದೇ ಬುದ್ಧಿಯನ್ನು ನನ್ನ ತಮ್ಮನಿಗೆ ಕೊಡಿರಿ. ನಿಮ್ಮ ಪರಮ ಪ್ರಸಾದದಿಂದ ಅವನ ಎಲ್ಲ ಪಾಪವೂ ನಾಶವಾಗಲಿ. ೪೮

तथाऽपि तत्त्वबोधोऽस्तु मां दृष्ट्वा पुरुषोत्तम ।
तस्य धीर्नैश्वरे रक्ता विरक्ता तां कुरु प्रभो ॥ ४९ ॥

ಹೇ ಪುರುಷೋತ್ತಮನೇ! ಆದರೂ ನನ್ನನ್ನು ನೋಡಿ ತತ್ವಜ್ಞಾನ ಉಂಟಾಗುವಂತೆ ಮಾಡಿರಿ. ಅವನಿಗೆ ಐಶ್ವರ್ಯವಾಸನೆ ಹುಟ್ಟದಂತೆ ಮಾಡಿ ಅವನನ್ನು ವೈರಾಗ್ಯವಂತನನ್ನಾಗಿ ಮಾಡಿರಿ. ೪೯

तथेत्युक्त्वा स भगवान् सर्वभूतमहेश्वरः ।
कृत्वा विदेह कैवल्यं विष्णोर्धाम परं ययौ ॥ ५० ॥

ಸರ್ವಪ್ರಾಣಿಗಳಿಗೂ ಸ್ವಾಮಿಯಾದ ಭಗವಂತನು ತಥಾಸ್ತು ಎಂದು ಹೇಳಿ, ವೈರಾಗ್ಯಮಾರ್ಗವನ್ನು ಹೇಳಿ, ವಿಷ್ಣುಲೋಕಕ್ಕೆ ಹೋದನು. ೫೦

॥ इति श्रीस्कन्दपुराणे कृष्णातीर्थवर्णनं नाम सप्तमोऽध्यायः ॥

❀ ❀ ❀

## ॥ अथ अष्टमोऽध्यायः ॥

नारद उवाच –

तं दृष्ट्वा योगसंसिद्धिं अग्रजं सुविरक्तधीः ।
वेदोऽपि पितरं प्राह न चाहं च धनं भजे ॥ १ ॥

ಯೋಗದಲ್ಲಿ ಸಿದ್ಧಿಯನ್ನು ಪಡೆದ ಅಗ್ರಜನಾದ ಸತ್ಯನನ್ನು ನೋಡಿ, ತಮ್ಮನಾದ

ಅಣ್ಣನಾದ ಸತ್ಯನನ್ನು ನೋಡಹೋಗು. ಆ ಭಾಗ್ಯವಂತನಾದ ಸತ್ಯನನ್ನು ನೋಡಿದ ಕೂಡಲೇ ನಿನಗೂ ಕೂಡ ಅವನ ಸಾನ್ನಿಧ್ಯದಿಂದ ಸದ್ಬುದ್ಧಿ ಹುಟ್ಟುವದು. ೨

यदि तस्माद्विनिर्मुक्तः पूतः कृष्णाम्भसा किल ।
इत्युक्तः सोऽपि पितरं प्रणम्याग्रजमागमत् ॥ ३ ॥

ಒಂದುವೇಳೆ ನೀನು ವಿರಕ್ತನಾಗಿದ್ದರೆ, ಕೃಷ್ಣವೇಣೀ ನೀರಿನಿಂದ ಪವಿತ್ರನಾಗುವಿ. ಹೀಗೆ ತಂದೆಯಿಂದ ಹೇಳಿಸಿಕೊಂಡ ಆ ವೇದನು ತಂದೆಗೆ ನಮಸ್ಕಾರ ಮಾಡಿ ಅಣ್ಣನ ಹತ್ತಿರ ಬಂದನು. ೩

दृष्ट्वाऽग्रजं सुनिर्मुक्तं जगर्हस्व कृतं ततः ।
तं दृष्ट्वा ह्यनुजं सत्यो मुमुक्षुं साधनक्षमम् ॥ ४ ॥

ವಿರಕ್ತನಾದ ಅಣ್ಣನನ್ನು ನೋಡಿ, ವೇದನು ತನ್ನ ಕರ್ಮ(ದುಷ್ಕರ್ಮ)ವನ್ನು ನೋಡಿ, ತಾನೇ ತನ್ನನ್ನು ಬೈದುಕೊಂಡನು. ತನ್ನ ದುಷ್ಕರ್ಮದಿಂದ ಬಿಡುಗಡೆ ಹೊಂದಲು ಬಯಸುವ ಸಾಧನಕ್ಕೆ ಯೋಗ್ಯನಾದ ತಮ್ಮನನ್ನು ಸತ್ಯನು ನೋಡಿದನು. ೪

हसन् प्रोवाच सुव्यक्तं किं ते कृष्णा निषेव्यतां ।
तथेत्युक्त्वा कृष्णगङ्गां स निमज्य पुनः पुनः ॥ ५ ॥

ಮಂದಹಾಸದಿಂದ ತಮ್ಮನಿಗೆ ಸತ್ಯನು ಸ್ಪಷ್ಟವಾಗಿ ಹೇಳಿದನು. ಕೃಷ್ಣವೇಣಿ ನದಿಗೆ ಹೋಗಿ, ನದಿಯಲ್ಲಿ ಸ್ನಾನಮಾಡಿ ಕೃಷ್ಣವೇಣಿಯನ್ನು ಸೇವಿಸು. ತಥಾಸ್ತು ಎಂದು ಹೇಳಿ, ಆ ಕೃಷ್ಣವೇಣಿಯಲ್ಲಿ ಪುನಃ ಪುನಃ ಅವಗಾಹನ ಸ್ನಾನ ಮಾಡಿದನು. ೫

गत्वा सत्येश्वरं वेदः समाराधयदीश्वरम् ।
कालाग्निरुद्रमीशानं अघोरास्त्रेण मन्त्रवित् ॥ ६ ॥

ವೇದನೂ ಕೂಡ ಸತ್ಯೇಶ್ವರನ ಹತ್ತಿರ ಹೋಗಿ ಈಶ್ವರನನ್ನು ಪೂಜಿಸಿದನು. ಕಾಲ, ಅಗ್ನಿ, ರುದ್ರ, ಈಶನನ್ನು ಮಂತ್ರಬಲ್ಲವನಾಗಿ ಅಘೋರಾಸ್ತ್ರ ಮಂತ್ರದಿಂದ ಆರಾಧನೆ ಮಾಡಿದನು. ೬

प्रोवाचोच्चैर्महादेवो वरं वरय सुव्रत।
वेदोऽप्याह प्रणम्येदं वरदो यदि मे शिव ॥ ८ ॥

ಮಹೇಶ್ವರನು ಮುಕ್ತಕಂಠದಿಂದ ಹೇಳಿದನು– ಹೇ ಸುವ್ರತನೇ !ವರವನ್ನು ಕೇಳು. ವೇದನೂ ಕೂಡ ಆ ಮಹೇಶ್ವರನಿಗೆ ನಮಸ್ಕಾರ ಮಾಡಿ, ಮಹೇಶ್ವರನೇ ! ಒಂದು ವೇಳೆ ನನಗೆ ವರಕೊಡುವವನಿದ್ದರೆ. ೮

सर्वयोगेश्वरैर्वन्द्यां सद्गतिं देहि शंकर।
सर्वभूतस्थमात्मानं सर्वभूतानि चात्मनि ॥ ९ ॥

ಶಂಕರನೇ !ಎಲ್ಲ ಯೋಗೀಶ್ವರರಿಂದಲೂ ವಂದನೀಯವಾದ ಸದ್ಗತಿಯನ್ನು ನನಗೆ ಕೊಡುವವನಾಗು. ಸರ್ವ ಪ್ರಾಣಿಗಳ ಅಂತರ್ಯಾಮಿಯಾದ ಆ ಪರಮಾತ್ಮನನ್ನು ೯

यया संविन्दते योगी विद्यया तां प्रयच्छ मे।
मन्नाम्ना पर्वतश्चायं यावदाभूत संप्लवम् ॥ १० ॥

ಯೋಗಿಯು ಯಾವ ವಿದ್ಯೆಯಿಂದ ತಿಳಿದುಕೊಳ್ಳವನೋ, ಆ ವಿದ್ಯೆಯನ್ನು ನನಗೆ ಕೊಡುವವನಾಗು. ಆಚಂದ್ರಾರ್ಕವಾಗಿ ಈ ಪರ್ವತವು ನನ್ನ ಹೆಸರಿನಿಂದ ಪ್ರಸಿದ್ಧವಾಗಲಿ. ೧೦

तिष्ठ त्वं च महादेव एष मेऽस्तु वरं परः।
यत्राहमाश्रमे तिष्ठेत् यत्र मे तपनं पितः ॥ ११ ॥

ಹೇ ಮಹಾದೇವರೇ ! ನಾನು ಯಾವ ಆಶ್ರಮದಲ್ಲಿ ಇರುವೆನೋ, ನನ್ನ ತಂದೆ ತಪನನು ಎಲ್ಲಿ ಇರುವನೋ, ಅಲ್ಲಿಯೇ ನೀನು ಇರಬೇಕು. ಇದು ನಾನು ಬೇಡಿಕೊಳ್ಳುವ ಶ್ರೇಷ್ಠವಾದ ವರವು. ೧೧

आवयोरन्तरे कृष्णा महापुण्यास्तु सर्वदा।
अस्मिन् सत्येश्वरे तीर्थे भुक्तिमुक्तिफलप्रदे ॥ १२ ॥

ನಮಿಬ್ಬರ ಮಧ್ಯದಲ್ಲಿ ಯಾವಾಗಲೂ ಈ ಪುಣ್ಯಕರಳಾದ ಕೃಷ್ಣವೇಣಿಯು

ಪರಮಶ್ರೇಷ್ಠವಾದ ಗತಿಯನ್ನು ಕುರಿತು ಹೊಂದಲಿ. ತಪನೇಶ್ವರ ದೇವಾಲಯದಿಂದಲೂ ಹಾಗೂ ವೇದಗಿರಿಯ ತಟಾಕದಿಂದಲೂ. ೧೩

अंतरा पतितो देहो येषां ते यान्ति सद्गतिम् ।
इत्युक्त्वा तं प्रणम्येशं संस्थितः स्वस्तिकासने ॥ १४ ॥

ಅಂತರದಲ್ಲಿ ಯಾರು ದೇಹತ್ಯಾಗಮಾಡುವರೋ, ಅವರು ಸದ್ಗತಿಯನ್ನು ಕುರಿತು ಹೋಗುವವರಾಗಲಿ,ಹೀಗೆ ಹೇಳಿ ಆ ಈಶ್ವರನನ್ನು ನಮಸ್ಕರಿಸಿ, ಪದ್ಮಾಸನದಲ್ಲಿ ಕುಳಿತುಕೊಂಡನು. ೧೪

अपानप्राणयोरैक्याच्चित्ते चैतन्यमादधन् ।
गतवान् परमं स्थानं यत्सुरैरपि दुर्लभम् ॥ १५ ॥

ಲಯಚಿಂತನ ಮಾಡಿ ದೇವತೆಗಳಿಗೂ ದುರ್ಲಭವಾದ ಪರಮಶ್ರೇಷ್ಠವಾದ ಸ್ಥಾನವನ್ನು ಪಡೆದನು. ೧೫

तपनो हि महादेवे जजाप शतरुद्रियम् ।
तस्यापि तुष्टो भगवान् परेशो नीललोहितः ॥ १६ ॥

ಆ ತಪನನೂ ಕೂಡ ಮಹೇಶ್ವರನನ್ನು ಉದ್ದೇಶಮಾಡಿಕೊಂಡು ಶತರುದ್ರನನ್ನು ಜಪಮಾಡಿದನು. ಆ ತಪನನಿಗೂ ಕೂಡ ನೀಲಕಂಠನಾದ ಪರಮೇಶ್ವರನು. ೧೬

प्राह गंभीरया वाचा यत्तेऽभीष्टं वृणीश्व तत् ।

ಗಂಭೀರವಾಣಿಯಿಂದ ಹೇಳಿದನು – ನೀನು ಅಭೀಷ್ಟವಾದ ವರವನ್ನು ಬೇಡು.

तपन उवाच –

देव देव जगन्नाथ सर्वानुग्रहकारक ।
प्रपन्नं पाहि मामीश सर्वगं त्वां यथा भजे ॥ १७ ॥

ನೀನು ಸರ್ವತ್ರದಲ್ಲಿ ಇದ್ದು ಎಲ್ಲರ ಮೇಲೆಯೂ ಅನುಗ್ರಹ

ಧರ್ಮರಕ್ಷಕನಾದ, ಮಹಾ ಭಾಗ್ಯಮಂತನಾದ, ಸರ್ವಶಾಂತನಾದ, ಗುಣತ್ರಯಗಳಿಗೆ ನಿಯಾಮಕನಾದ ಮಹಾದೇವನೇ ! ೧೮

तीव्रं प्रसन्नं सर्वज्ञं कारुण्यं सर्वजन्तुषु ।
योगं योगविदां वन्द्यं योगगम्यं निरन्तरम् ॥ १९ ॥

ನೀನು ಬೇಗನೇ ಪ್ರಸನ್ನನಾಗತಕ್ಕವನು, ಸರ್ವಜ್ಞನು, ಎಲ್ಲ ಪ್ರಾಣಿಗಳಲ್ಲಿಯೂ ದಯಾಘನನು, ಯೋಗಿಗಳಿಂದ ಪೂಜ್ಯನು, ಯೋಗಿಗಳಿಗೆ ಗಮ್ಯನು, ದಯಾಘನನು, ಯೋಗಿಯು, ನಿರಂತರವಾಗಿ. ೧೯

चिदात्मानं महात्मानं सर्वोपनिषदां वरम् ।
तत्कुरुष्व महादेव सर्वदेवहिते रत ॥ २० ॥

ಜ್ಞಾನಸ್ವರೂಪನಾದ, ಮಹಾತ್ಮನಾದ, ಸರ್ವೋಪನಿಷದಗಳಿಂದಲೂ ತಿಳಿಯಲ್ಪಡುವ, ಎಲ್ಲ ದೇವತೆಗಳಿಗೂ ಹಿತವನ್ನು ಬಯಸುವದರಲ್ಲಿ ರತನಾದ ಮಹೇಶ್ವರನೇ ! ನಿನ್ನನ್ನು ನಾನು ಭಜಿಸುವೆನು. ನನ್ನನ್ನು ರಕ್ಷಿಸು. ೨೦

इति स्तुतो महादेवः तपनेन महात्मना ।
पस्पर्श पाणिना रुद्रः प्रोवाचेदं ऋषिं तदा ॥ २१ ॥

ಹೀಗೆ ಮಹಾತ್ಮನಾದ ತಪನನು ಸ್ತೋತ್ರಮಾಡಿದನು.ಆಗ್ಗೆ ರುದ್ರದೇವರು ಆ ತಪನ ಋಷಿಯನ್ನು ತಮ್ಮ ಪ್ರಸನ್ನವಾದ ಅಮೃತ ಹಸ್ತದಿಂದ ಸ್ಪರ್ಶಮಾಡಿದರು. ಆ ತಪನ ಋಷಿಗಳಿಗೆ ಈ ರೀತಿಯಾಗಿ ಹೇಳಿದರು. ೨೧

ईश्वर उवाच –

नित्यानन्दं परं शान्तं वरेण्यं अमृतं शिवम् ।
महातत्त्वं महायोगं विद्धि मामन्तकान्तकम् ॥ २२ ॥

ಈಶ್ವರನು ಹೇಳಿದನು –

ಕುರಿತು (ಪರ್ವತಕ್ಕೆ) ಹೊರಟುಹೋದರು. ೨೩

तस्मात् सा पावनी गङ्गा प्रसृता तपनेश्वरात् ।
अगस्त्याश्रममासाद्य सङ्गता कृष्णागङ्गया ॥ २४ ॥

ಆದ್ದರಿಂದ ಪರಮ ಪವಿತ್ರಳಾದ ಗಂಗೆ ತಪನೇಶ್ವರ ಕ್ಷೇತ್ರದಿಂದ ಪ್ರವಹಿಸಿ, ಕೃಷ್ಣಗಂಗೆ ಎಂದು ಪ್ರಸಿದ್ಧಳಾಗಿ, ಅಗಸ್ತ್ಯ ಋಷಿಗಳ ಆಶ್ರಮಕ್ಕೆ ಬಂದಳು. ೨೪

इत्येतत्कथितं विप्राः सत्यतीर्थमनुत्तमम् ।
यस्य संस्मरणान्मर्त्यो महापापैः प्रमुच्यते ॥ २५ ॥

ಹೇ ಬ್ರಾಹ್ಮಣೋತ್ತಮರೇ! ಅತಿಶಯೋತ್ತಮವಾದ ಈ ಸತ್ಯತೀರ್ಥದ ಚರಿತ್ರೆಯನ್ನು ನಿಮಗೆ ಹೇಳಿರುವೆನು. ಈ ಸತ್ಯತೀರ್ಥದ ಸ್ಮರಣಮಾತ್ರದಿಂದ ಮಹಾಪಾತಕಗಳಿಂದಲೂ ಮುಕ್ತರಾಗುವರು. ೨೫

अतःपरं क्रोशमात्रं विष्णुतीर्थं महाफलम् ।
अश्वत्थरूपी भगवान् यत्रास्ते नरसेवितः ॥ २६ ॥

ಈ ಸತ್ಯತೀರ್ಥದ ಮುಂದೆ ಒಂದು ಹರದಾರಿಯ ಮೇಲೆ ಮಹಾಫಲಪ್ರದವಾದ ವಿಷ್ಣುತೀರ್ಥವುಂಟು.ಅಲ್ಲಿ ಮನುಷ್ಯರಿಂದ ಸೇವಿಸಲ್ಪಟ್ಟ ಅಶ್ವತ್ಥರೂಪದಿಂದ ಸಾಕ್ಷಾತ್ ನಾರಾಯಣನೇ ಇರುವನು. ೨೬

वनस्पतेति मन्त्रेण भ्रमेदष्टोत्तरं शतम् ।
यः प्रातः सेवते विद्वान् सर्वदोषैः प्रमुच्यते ॥ २७ ॥

ವನಸ್ಪತೇತಿ ಮಂತ್ರದಿಂದ ಆ ಅಶ್ವತ್ಥರೂಪೀ ನಾರಾಯಣನನ್ನು ಯಾರು ೧೦೮ ಸಲ ಪ್ರದಕ್ಷಿಣೆಮಾಡುವರೋ, ಪ್ರಾತಃಕಾಲದಲ್ಲಿ ಯಾರು ಸೇವಿಸುವರೋ ಅವರು ಸರ್ವದೋಷಗಳಿಂದ ಮುಕ್ತರಾಗುವರು. ೨೭

❀ ❀ ❀

## ॥ अथ नवमोऽध्यायः ॥

नारद उवाच –

ततो दण्डसहस्रेषु अग्नितीर्थं प्रचक्षते ।
भुक्तिमुक्तिप्रदं नृणां श्रृणुध्वं मुनिपुङ्गवाः ॥ १ ॥

ಆ ವಿಷ್ಣುತೀರ್ಥದ ಮುಂದೆ ಒಂದು ಸಾವಿರ ದಂಡ(ಮಾರು)ಮೇಲೆ ಅಗ್ನಿತೀರ್ಥವಿರುವದು. ಋಷಿಶ್ರೇಷ್ಠರೆ! ಮನುಷ್ಯರಿಗೆ ಐಹಿಕ ಪಾರತ್ರಿಕ ಎರಡೂ ಫಲಗಳನ್ನು ಕೊಡುವಂತಹದು ಇರುವದು. ೧

ऋषिरासीद् भृगुर्नाम मानसो ब्रह्मणः सुतः ।
दाता दान्तो दयावांश्च महायज्वो महातपाः ॥ २ ॥

ಮಹಾತಪಸ್ವಿಗಳಾದ, ಮಹಾಯಜ್ಞ ಮಾಡತಕ್ಕ, ದಯಾಘನರಾದ, ಇಂದ್ರಿಯ ನಿಗ್ರಹವುಳ್ಳ, ಬ್ರಹ್ಮದೇವರ ಮಾನಸಪುತ್ರರಾದ ಭೃಗುಋಷಿಗಳು ಎಂಬುವರು ಇದ್ದರು. ೨

महायोगी महाकर्मा महासत्त्वोऽतिथिप्रियः ।
सत्यवादी विशुद्धात्मा जितक्रोधो जितेन्द्रियः ॥ ३ ॥

ಮಹಾಯೋಗಿಯು, ಮಹತ್ಕರ್ಮಮಾಡುವವರು, ಮಹಾಬಲಿಷ್ಠರು, ಸತ್ಯವಂತರು, ಶುದ್ಧಾಂತಃಕರಣ ಉಳ್ಳವರು, ಜಿತಕ್ರೋಧರು, ಜಿತೇಂದ್ರಿಯರೂ. ೩

वर्णाश्रमाचारपरो ह्युपदेष्टा सतां गुरुः ।
सन्तुष्टः करुणामैत्रः सदाचारो महातपाः ॥ ४ ॥

ವರ್ಣಾಶ್ರಮ ಸದಾಚಾರಗಳಲ್ಲಿ ತತ್ಪರರಾಗಿ, ಉಪದೇಶಕರಾಗಿ ಸಜ್ಜನರಿಗೆ

ಯಾವಾಗಲೂ ಮಹಾದೇವರಿಗೆ ಅತ್ಯಂತ ಪ್ರಿಯರಾದವರೂ ಇದ್ದರು. ೫

तस्य भार्या महाभागा पतिशुश्रूषणे रता ।
दान्ता नाम सुदान्ता सा गृहकर्मण्यतन्द्रिता ॥ ६ ॥

ಆ ಭೃಗುಋಷಿಗಳ ಪತ್ನಿಯು ಪರಮ ಭಾಗ್ಯವಂತಳೂ, ಪತಿಯ ಶುಶ್ರೂಷೆಯಲ್ಲಿ ಪರಮ ಆಸಕ್ತಳೂ, ಪರಮ ಇಂದ್ರಿಯನಿಗ್ರಹ ಉಳ್ಳವಳೂ, ಗೃಹಕರ್ಮದಲ್ಲಿ ಆಲಸ್ಯ ಇಲ್ಲದವಳೂ. ೬

वेदि संमार्जनपरा स्वमित्रविषयेऽधिका ।
कमंडलु करानित्य अशोकाश्वत्थसेविनी ॥ ७ ॥

ಮನೆಯ ಅಂಗಳವನ್ನು ಸಂಮಾರ್ಜನಮಾಡುವವಳೂ, ಬಾಂಧವರಲ್ಲಿ ವಿಶೇಷ ಪ್ರೀತಿಯುಳ್ಳವಳೂ, ಪಾತ್ರೆಯನ್ನು ಸ್ವಚ್ಛವಾಗಿ ಇಡುವವಳೂ, ಸಂತೋಷಭರಿತಳೂ, ಅಶ್ವತ್ಥವೃಕ್ಷ ಸೇವೆ ಮಾಡುವವಳೂ. ೭

गन्धपात्री पुष्पपात्री जलपात्री प्रपूरिका ।
फलपाकेषु कुशला यज्ञकर्मणि सेविता ॥ ८ ॥

ಕರಕಮಲದಲ್ಲಿ ಸುಗಂಧಪಾತ್ರೆಯನ್ನು, ಪುಷ್ಪಪಾತ್ರೆಯನ್ನು, ಜಲಪಾತ್ರೆಯನ್ನು ತುಂಬಿ ಇಡುವವಳೂ, ಫಲ ಪಾಕಕರ್ಮಗಳಲ್ಲಿ ಪರಮ ಕುಶಲಳೂ, ಯಜ್ಞ ಕರ್ಮಗಳನ್ನು ಸೇವಿಸುವವಳೂ. ೮

भक्ता शक्ता च दक्षा च साध्वी रूपवती सती ।
संपन्ना ज्ञानसंपन्ना सर्वकालतिथिप्रिया ॥ ९ ॥

ಭಕ್ತಳೂ, ಸಶಕ್ತಳೂ, ಸತ್ಕಾರ್ಯದಲ್ಲಿ ದಕ್ಷಳೂ, ಸಾಧ್ವೀಮಣಿಯು, ಪರಮ ಸುಂದರಳೂ, ಮಹಾಪತಿವ್ರತೆಯೂ, ಐಶ್ವರ್ಯವಂತಳೂ, ಜ್ಞಾನ ಸಂಪನ್ನಳೂ, ಸರ್ವಕಾಲದಲ್ಲಿ ಅತಿಥಿ ಸತ್ಕಾರಪ್ರಿಯಳೂ ಇದ್ದಳು. ೯

ಮಾಡಲಿಕ್ಕೆ ದಿನಾಲು ಹೋಗುವಂತ ಹೋದರು. ೧೦

जजाप परमं हंसं स शिष्यो मुनिपुङ्गवः ।
स्थितोऽतिवेलं गङ्गायां तदा जनभयो महान् ॥

ಆ ಭೃಗುಋಷಿಗಳು ಶಿಷ್ಯಸಮೇತರಾಗಿ ಗಂಗಾತಟಾಕದಲ್ಲಿ ನಿಂತುಕೊ
ಪರಮಹಂಸಮಂತ್ರವನ್ನು ಬಹಳ ಹೊತ್ತಿನವರೆಗೆ ಜಪಮಾಡಹತ್ತಿದರು.
ಸಮಯದಲ್ಲಿ ಮಹಾಭಯಂಕರನಾದ. ೧೧

महाकामो महादंष्ट्रो महावक्त्रो महाभुजः ।
शूलो नाम महादैत्यः तां हर्तुं समुपागतः ॥

ವಿಕಾರ ದೇಹವುಳ್ಳ, ವಿಕಾರ ಭುಜವುಳ್ಳ ಶೂಲನೆಂಬ ಮಹಾದೈತ್ಯನು
ಭೃಗುಋಷಿಗಳ ಭಾರ್ಯಳನ್ನು ಅಪಹರಿಸಲಿಕ್ಕೆ ಬಂದನು. ೧೨

तस्याश्रमे महायोगे कदलीखण्डमण्डिते ।
प्रशान्तश्वापदाकीर्णे लतामंडल मंडिते ॥

ಒಂದು ಮಹಾಪರ್ವಕಾಲ. ಆ ಭೃಗುಋಷಿಗಳ ಆಶ್ರಮವು ಬಾಳೆಯ ಕಂಬಗ
ಅಲಂಕೃತವಾಗಿತ್ತು. ಲತಾ ಮಂಡಲಗಳಿಂದಲೂ ಅಲಂಕೃತವಾಗಿತ್ತು. ಆಪತ್ತು
ಅವಕಾಶವಿಲ್ಲದಂತೆ ಪ್ರಶಾಂತವಾಗಿತ್ತು. ೧೩

चूत चंपक जंबीर बीजपूरैरलंकृते ।
खर्जूरैर्नारिकेरैश्च क्रमुकैरुपशोभिते ॥

ಮಾವು, ಸಂಪಿಗೆ, ದಾಳಿಂಬರ ಮುಂತಾದ ವೃಕ್ಷಗಳಿಂದ ಅಲಂಕೃತವಾ
ಖರ್ಜೂರ, ತೆಂಗು ಮುಂತಾದ ಫಲವೃಕ್ಷಗಳಿಂದಲೂ ಸುಶೋಭಿತವಾಗಿತ್ತು. ೧೪

कपित्थाश्वत्थबदरीकोविदारैरलंकृते ।
सरोभिर्विमलैर्जुष्टे पद्मिनी खण्डमण्डिते ॥

ಕಪಿತ್ಥ, ಅಶ್ವತ್ಥ, ಬದರೀ, ಕೋವಿದಾರ ವೃಕ್ಷಗಳಿಂದಲೂ ಅಲಂಕೃತವಾ
ನಿರ್ಮಲವಾದ ನೀರು ಉಳ್ಳ ಸರೋವರಗಳಿಂದಲೂ,

ಲವಂಗ, ಉಶೀರ, ಕಲ್ಹಾರ, ಬರ್ಬರ, ವೃಕ್ಷಗಳಿಂದ ಆವೃತವಾಗಿತ್ತು. ಬ್ರಹ್ಮಜ್ಞಾನಿಗಳಿಂದಲೂ, ಬ್ರಹ್ಮಘೋಷದಿಂದಲೂ, ಬಹು ಬ್ರಾಹ್ಮಣರಿಂದಲೂ ರಮಣೀಯವಾಗಿತ್ತು. ೧೭

सूर्य वैश्वानराभैश्च तापसैरुपशोभिते ।
सर्वकामदुघाभिश्च धेनुभिः समलंकृते ॥ १८ ॥

ಸೂರ್ಯ, ಅಗ್ನಿಯಂತೆ ತೇಜಸ್ವಿಗಳಾದ ತಪಸ್ವಿಗಳಿಂದ, ಸುಶೋಭಿತವಾಗಿತ್ತು. ಕಾಮಧೇನುವಿನ ಸಮಾನವಾದ ಗೋಗಳಿಂದಲೂ ಸಮಲಂಕೃತವಾದ ಆ ಭೃಗು ಋಷಿಗಳ ಆಶ್ರಮವು. ೧೮

होमधूमैः सुरभिते घंटा शंखनिनादिते ।
रम्यप्रदेश एतस्मिन् द्विजो भूत्वा विवेश सः ॥ १९ ॥

ಹೋಮ ಧೂಮದಿಂದ ಸುಗಂಧಿತವಾಗಿತ್ತು. ಘಂಟೆ ಶಂಖನಿನಾದದಿಂದ ಮಂಗಲಕರವಾಗಿತ್ತು. ಈ ತರಹದ ರಮಣೀವಾದ ಪ್ರದೇಶದಲ್ಲಿ ಆ ಶೂಲನೆಂಬ ಮಹಾರಾಕ್ಷಸನು ಬ್ರಾಹ್ಮಣ ವೇಷದಿಂದ ಆ ಆಶ್ರಮವನ್ನು ಪ್ರವೇಶಿಸಿದನು. ೧೯

भृगोऽस्तु पुण्यशालां तां वृतां पुण्यशकुंतिभिः ।
प्रविवेश वरारोहां हर्तुकामः प्रियां मुनेः ॥ २० ॥

ಪುಣ್ಯಕರಳಾದ ಪಕ್ಷಿಗಳಿಂದ ಸುಶೋಭಿತವಾದ ಆ ಬೃಗುಋಷಿಗಳ ಪುಣ್ಯಕರವಾದ ಆ ಪರ್ಣಶಾಲೆಯನ್ನು, ಆ ಬೃಗುಋಷಿಗಳ ಪ್ರಿಯಳಾದ ಭಾರ್ಯಳನ್ನು ಅಪಹರಿಸುವ ಕಾಮನೆಯಿಂದ ಪ್ರವೇಶಿಸಿದನು. ೨೦

तं विशन्तं द्विजं दृष्ट्वा चुक्रुशुर्मृगपक्षिणः ।
पर्णशालाङ्गणे तिष्ठन् रङ्गमालाविभूषिते ॥ २१ ॥

ಆ ಆಶ್ರಮವನ್ನು ಪ್ರವೇಶಿಸುವ ಬ್ರಾಹ್ಮಣ ವೇಷಧಾರಿ ರಾಕ್ಷಸನನ್ನು ನೋಡಿ, ಮೃಗ

ಹೊರಗೆ ಬಂದಳು. ೨೨

तावद्ददर्श तं घोरं द्विजं कामविमोहितम् ।
कस्त्वं पप्रच्छ सुदती प्राङ्गणे मे किमिच्छसि ॥ २३ ॥

ಕಾಮ ಮೋಹಿತನಾದ, ಭಯಂಕರನಾದ ಆ ಬ್ರಾಹ್ಮಣವೇಷಧಾರಿ ರಾಕ್ಷಸನನ್ನು ನೋಡಿ, ಯಾರು ನೀನು ?ಆ ಋಷಿಪತ್ನಿಯಾದ ಸುದಿತಿ ದೇವಿಯು, ನನ್ನ ಅಂಗಣದಲ್ಲಿ ಯಾಕೆ ಬಂದಿರುವಿ ?ನೀನು ಏನು ಇಚ್ಛಿಸುವಿ ?ಎಂದು ಕೇಳಿದಳು. ೨೩

तामाह राक्षसः क्रूरो भृगोः पत्नीं अनिन्दिताम् ।
त्वं मे भार्या पुरा ह्यासीः मां त्वं वरय सुन्दरी ॥ २४ ॥

ಆ ಕ್ರೂರನಾದ ರಾಕ್ಷಸನು, ಭೃಗುಋಷಿಗಳ ನಿರ್ದೋಷಿಯಾದ ಪತ್ನಿಯನ್ನು ಕುರಿತು ಹೇಳಿದನು. ನೀನು ಭೃಗುಋಷಿಗಳಿಗಿಂತಲೂ ಮೊದಲು ನನ್ನ ಭಾರ್ಯಳಿದ್ದಿ. ಆದ ಕಾರಣ, ಹೇ ಸುಂದರೀ ! ನೀನು ನನ್ನನ್ನು ಪತಿಯೆಂದು ತಿಳಿದು ನನ್ನ ಜೊತೆಗೆ ಬಾ. ೨೪

तस्मान्नेतुं समायातः शीघ्रमागम्य तां शुभे ।
आदौ प्रतीक्षा हि कृता पूर्वा हि बलवत्तरा ॥ २५ ॥

ಮೊದಲೇ ನಾನು ಬಲವತ್ತರವಾದ ಪ್ರತಿಜ್ಞೆ ಮಾಡಿರುವೆನು. ನಿನ್ನನ್ನು ಕರೆದುಕೊಂಡು ಹೋಗಲಿಕ್ಕೆ ಬಂದಿರುವೆನು. ಹೇ ಶುಭೆ ಬೇಗನೇ ಬಾ. ೨೫

इति शास्त्रं प्रमाणं ते नो वा पृच्छ सभासदः ।
इत्युक्ता तेन सा भीता गृह्याग्नि शरणं ययौ ॥ २६ ॥

ಮೊದಲು ಪ್ರತಿಜ್ಞೆ ಮಾಡಿದ್ದೇ ಪ್ರಮಾಣವೆಂದು ಶಾಸ್ತ್ರಸಮ್ಮತ. ಆದಕಾರಣ ಬಾ. ಅಥವಾ ಸಭ್ಯರನ್ನು ಕೇಳು. ಹೀಗೆ ರಾಕ್ಷಸನು ಹೇಳಿದಕೂಡಲೇ ಆ ಭೃಗು ಪತ್ನಿಯು ಭಯಭೀತಳಾಗಿ ಅಗ್ನಿಶಾಲೆಗೆ ಹೋಗಿ ಗೃಹ್ಯಾಗ್ನಿಗೆ ಶರಣು ಹೋದಳು. ೨೬

कुण्डं प्रदक्षिणीकृत्य निलिल्येवे पती सती

त्वमग्ने सर्वभूतानां अंतश्चरसि पावक ॥ २८ ॥

ಆ ರಾಕ್ಷಸನು ಹೇಳಿದ ಕೂಡಲೇ ಆ ಬೃಗುಪತ್ನಿಯು ಮಂದಸ್ಮಿತಳಾಗಿ ಆ ಗೃಹ್ಯಾಗ್ನಿಯನ್ನು ಕೇಳಿದಳು. ಹೇ ಅಗ್ನಿದೇವತೆಗಳೇ! ಎಲ್ಲ ಪ್ರಾಣಿಗಳಲ್ಲಿಯೂ ಅಂತರ್ನಿಯಾಮಕರಾಗಿರುವಿರಿ. ೨೮

साक्षिवत्पुण्यपापेभ्यो ब्रूहि सत्यं कवे मम ।
इत्युक्तः पावकः सत्यं तां प्रोवाच शनैः शनैः ॥ २९ ॥

ಎಲ್ಲ ಪಾಪ ಪುಣ್ಯಗಳಿಗೆ ಸಾಕ್ಷೀಭೂತರಾದ ಹೇ (ಕವೇ) ಜ್ಞಾನಿಯೆ! ನನಗೆ ಸತ್ಯವನ್ನು ಹೇಳಿರಿ. ಎಂದು ಋಷಿಪತ್ನಿಯಿಂದ ಪ್ರಾರ್ಥಿತರಾದ ಅಗ್ನಿದೇವರು ಸಾವಕಾಶವಾಗಿ ಅವಳಿಗೆ ಸತ್ಯವೆಂದು ಹೇಳಿದರು. ೨೯

त्वं कृतासि पुराऽनेन पित्रा तस्य प्रतिश्रुता ।
पश्चात्त्वं भृगवे दत्ता धर्मकामार्थसिद्धये ॥ ३० ॥

ನೀನು ಪೂರ್ವದಲ್ಲಿ ರಾಕ್ಷಸನ ತಂದೆಯಿಂದ ಸ್ವೀಕರಿಸಲ್ಪಟ್ಟಿರುವಿ ಎಂದು ಸಿದ್ಧವಿದೆ. ಆಮೇಲೆ ಧರ್ಮಕಾರ್ಯಾರ್ಥದ ಸಿದ್ಧಿಗೋಸ್ಕರ ಬೃಗುಋಷಿಗಳಿಗೆ ನಿನ್ನನ್ನು ಕೊಟ್ಟರು. ೩೦

इत्याकर्ण्य कवेर्वाक्यं तां च धृत्वा करेण सः ।
निर्जगामाश्रमात्तस्माद्भृगोर्भीतस्तपोनिधेः ॥ ३१ ॥

ಹೀಗೆ ಜ್ಞಾನಿಗಳಾದ ಅಗ್ನಿದೇವರ ವಾಕ್ಯಗಳನ್ನು ಕೇಳಿ ಆ ರಾಕ್ಷಸನು ಅವಳ ಕೈ ಹಿಡಿದು ಆ ಬೃಗುಋಷಿಗಳ ಆಶ್ರಮದಿಂದ ತಪೋನಿಧಿಗಳಿಗೆ ಅಂಜಿ ಬಲಾತ್ಕಾರವಾಗಿ ಎಳೆದುಕೊಂಡು ಹೊರಟನು. ೩೧

गुर्विणीं तां समाकर्षन्निर्जगामाश्रमात्ततः ।
पश्यन्ती सा मुनेर्मार्गं रुदती करुणं बहु ॥ ३२ ॥

ಗರ್ಭಿಣಿಯಾದ ಆ ಋಷಿಪತ್ನಿಯನ್ನು ಆಶ್ರಮದಿಂದ ಎಳೆದುಕೊಂಡು ಹೊರಟು

ವ್ರತವನ್ನು ಮಾಡಲಿಲ್ಲವೇನು ? ೩೩

येन शून्यं भवेत्वद्य भृगोरप्यालयं महत्।
किं मे नाचरितं शंभोरुमामाहेश्वरं व्रतम् ॥ ३४ ॥

ಈ ಹೊತ್ತು ಈ ಭೃಗುಋಷಿಗಳ ಆಶ್ರಮವು ಯಾವ ಕಾರಣದಿಂದ ಶೂನ್ಯವಾಯಿತು ? ಹೇ ಶಂಭೋ! ನಾನು ಉಮಾಮಹೇಶ್ವರ ವ್ರತವನ್ನು ಆಚರಿಸಲಿಲ್ಲವೇನು ? ೩೪

येन धर्मात्मना जाता भृगुणा मे विघट्टना।
न कोऽपि मेऽस्ति विदितो भवेत्वद्य भृगुं विना ॥ ३५ ॥

ಯಾವ ಧರ್ಮಾತ್ಮನಿಂದ ಭೃಗುಋಷಿಗಳಿಂದ ಈ ಘಟನೆ ಯಾಯಿತು. ಭೃಗು ಋಷಿಗಳ ವಿನಃ ಯಾರೂ ಇದನ್ನು ತಿಳಿದಿರುವದಿಲ್ಲವೇನು ? ೩೫

कस्याग्रे कथ्यते दुःखं पुत्र त्वं गर्भगो मम।
मातुरित्थं समाकर्ण्य हुंकारेणापतत्सुतः ॥ ३६ ॥

ಈ ದುಃಖವನ್ನು ಯಾರ ಮುಂದೆ ಹೇಳಲಿ ?ಹೇ ಪುತ್ರನೇ !ನೀನು ನನ್ನ ಗರ್ಭದಲ್ಲಿ ಇರುವವನು. ಹೀಗೆ ತಾಯಿಯ ಮಾತನ್ನು ಕೇಳಿ ತತ್ಕ್ಷಣದಲ್ಲಿ ಆ ಗರ್ಭಸ್ಥ ಶಿಶುವು ಗರ್ಭದಲ್ಲಿಯೇ ಹುಂಕಾರಮಾಡಿತು. ೩೬

तत्क्षणात्तेजसा तस्य राक्षसो भस्मसादभूत्।
तस्मिन् प्रच्यविते गर्भे तमुत्थाप्य जगाम सा ॥ ३७ ॥

ಆ ಗರ್ಭಸ್ಥ ಶಿಶುವಿನ ಹುಂಕಾರ ತೇಜಃಸಿನಿಂದ ತತ್ಕ್ಷಣದಲ್ಲಿ ಆ ರಾಕ್ಷಸನು ಸುಟ್ಟು ಭಸ್ಮೀಭೂತನಾದನು. ಕೂಡಲೇ ಹೊರಗೆ ಬಂದ ಆ ಗರ್ಭವನ್ನು ಕರೆದುಕೊಂಡು ಆ ಋಷಿಪತ್ನಿಯು ಹೊರಟು ಹೋದಳು. ೩೭

चिराच्च तीर्थादागत्य स्वाश्रमान्ते विवेशताम्।

केन तेऽपकृतं भद्रे कोऽयं भस्माभवत्क्षणात्।
केन ते च्यावितो गर्भः तन्नो शंसस्वमाचिरम् ॥ ३९ ॥

ಯಾರು ನಿನಗೆ ಅಪಕಾರ ಮಾಡಿದರು ?ಹೇ ಭದ್ರೇ !ತಕ್ಷಣದಲ್ಲಿ ಭಸ್ಮರಾದವರು ಯಾರು ?ಯಾರಿಂದ ಗರ್ಭವು ಹೊರಗೆ ಸರಿಸಲ್ಪಟ್ಟಿತು ?ಅದೆಲ್ಲವನ್ನೂ ನನಗೆ ಬೇಗನೇ ಹೇಳು. ೩೯

प्रतिलभ्य शनैः सा तं वृत्तं प्रोवाच तद्यथा।

सती उवाच –

द्विजरूपधरः कश्चित् प्रययौ राक्षसाधमः ॥ ४० ॥

ಆ ಋಷಿಪತ್ನಿಯು ಸಾವಕಾಶವಾಗಿ ಯಾವತ್ತೂ ವೃತ್ತಾಂತವನ್ನು ವಿಸ್ತಾರವಾಗಿ ಹೇಳಿದಳು. ಬ್ರಾಹ್ಮಣ ವೇಷಧಾರಿ ಒಬ್ಬ ರಾಕ್ಷಸಾಧಮನು ಬಂದಿದ್ದನು. ೪೦

आगत्य चाश्रमद्वारि ममाहूयाब्रवीदिदम्।
एहि दान्ते मया पूर्वं वृताऽसि त्वं न संशयः ॥ ४१ ॥

ಆಶ್ರಮದ ಬಾಗಿಲದಲ್ಲಿ ಬಂದು, ಹೇ .ದಾಂತೇ! ನಾನು ನಿನ್ನನ್ನು ಮೊದಲೇ ವರಿಸಿದ್ದೇನೆ. ಇದರಲ್ಲಿ ಏನೂ ಸಂಶಯವಿಲ್ಲ. ಕಾರಣ ಬಾ ಎಂದು ನನ್ನನ್ನು ಕರೆದು ಹೇಳಿದನು. ೪೧

पित्रा दत्तासि ते भद्रे नोचेत् पृच्छ स्वपावकम्।
तेनैवमुक्ता रुदती गताहं पावकान्तिकम् ॥ ४२ ॥

ಹೇ ಭದ್ರೇ! ನಿನ್ನ ತಂದೆಯು ಮೊದಲೇ ನನಗೆ ಕೊಟ್ಟಿದ್ದಾನೆ. ಬೇಕಾದರೆ ಅಗ್ನಿಯನ್ನು ಕೇಳು. ಹೀಗೆ ಆವನು ಹೇಳಿದನು. ನಾನು ದುಃಖಿಸುತ್ತ ಅಗ್ನಿಯ ಹತ್ತಿರ ಹೋದೆನು. ೪೨

किं वक्त्ययं दुराचारो ब्रूहि सत्यं कवे मम।

ಅಪಹರಿಸಿದನು. ಬಲಿಷ್ಠನಾದ ಅವನಿಂದ ಅಪಹರಿಸಲ್ಪಟ್ಟ ನಾನು ಎಲ್ಲ ಕಡೆಗೂ ನಿಮ್ಮನ್ನು ನಿರೀಕ್ಷಿಸುತ್ತ, ೪೪

अपश्यन्ती जनं कञ्चित् ब्रुवती च वनस्पतीः ।
भो वनस्पतयः शुद्धाः सुपुष्पफलदाः सदा ॥ ४५ ॥

ಜನರನ್ನೂ ವನಸ್ಪತಿಗಳನ್ನೂ ನೋಡುತ್ತ, ಹೇ ಸುಗಂಧ ಪುಷ್ಪಗಳನ್ನೂ ಫಲಗಳನ್ನೂ ಕೊಡುವ ಶುದ್ಧರಾದ ವನಸ್ಪತಿಗಳೇ ! ಹೇಳಿರಿ. ೪೫

संशध्वं भृगवे शीघ्रं दान्तां हरति राक्षसः ।
ममाश्रमनिवासिन्यो देवता गृहदेवताः ॥ ४६ ॥

ರಾಕ್ಷಸನು, ದಾಂತಳಾದ ನಿಮ್ಮ ಪತ್ನಿಯನ್ನು ಅಪಹರಿಸುತ್ತಾನೆ ಎಂದು ಭೃಗು ಋಷಿಗಳಿಗೆ ಹೇಳಿರಿ. ನನ್ನ ಆಶ್ರಮದಲ್ಲಿ ವಾಸಮಾಡುವ ದೇವತೆಗಳೇ, ಗೃಹದೇವತೆಗಳೇ ಹೇಳಿರಿ. ೪೬

शंसध्वं भृगवे शीघ्रं दान्तां हरति राक्षसः ।
पुष्करिण्यः सपद्मिन्यः पक्षिणोऽबरचारिणः ॥ ४७ ॥

ಇಂದ್ರಿಯನಿಗ್ರಹಿಯಾದ ನಿಮ್ಮ ಪತ್ನಿಯನ್ನು ರಾಕ್ಷಸಾಧಮನು ಹರಣ ಮಾಡುತ್ತಾನೆ ಎಂದು ಭೃಗುಋಷಿಗಳಿಗೆ ಹೇಳಿರಿ. ಸುಗಂಧ ಪುಷ್ಪಗಳುಳ್ಳ ಪುಷ್ಕರಿಣಿಗಳೇ ಹೇಳಿರಿ. ಆಕಾಶದಲ್ಲಿ ಸಂಚರಿಸುದ ಪಕ್ಷಿಗಳೇ ಹೇಳಿರಿ. ೪೭

शंसध्वं भृगवे शीघ्रं दान्तां हरति राक्षसः ।
इत्युक्तः बहुशः क्रोशन् ससार मम सन्निधौ ।
नाभवत्कोऽपि मे त्राता तदा ह्यौरसकस्मरम् ॥ ४८ ॥

ರಾಕ್ಷಸಾಧಮನು ನನ್ನನ್ನು ಹರಣಮಾಡುತ್ತಿರುವನು ಎಂದು ಭೃಗುಋಷಿಗಳಿಗೆ ಹೇಳಿರಿ ಎಂದು ಆಕ್ರೋಶಮಾಡಿದರೂ ಯಾರೂ ನನಗೆ ರಕ್ಷಕರಾಗಿ ಬರಲಿಲ್ಲ. ಆ ಸಮಯದಲ್ಲಿ ನಾನು ನನ್ನ ಗರ್ಭಸ್ಥ ಶಿಶುವನ್ನು ಸ್ಮರಣ ಮಾಡಿದೆನು. ೪೮

शशाप वह्निं भृगुः सर्वभक्षो भवेति च ॥ ५० ॥

ಹೀಗೆ ಪತ್ನಿಯ ಮಾತನ್ನು ಕೇಳಿ, ಆ ಭೃಗುಋಷಿಗಳು ಸಿಟ್ಟಿನಿಂದ ಮೂರ್ಛಿತರಾಗಿ, ಅದೇ ಸಿಟ್ಟಿನ ಭರದಲ್ಲಿ, ನಿಜವಾಗಿ ಸರ್ವಭಕ್ಷಕನಾಗು. ಎಂದು ಅಗ್ನಿಯನ್ನು ಶಪಿಸಿದರು. ೫೦

**यस्त्वं धर्मरहस्येषु विमूढः पावकोऽपि सन्।**
**न हि सत्यं त्वया ज्ञातं सत्यं भूतहितं यतः ॥ ५१ ॥**

ನೀನು ಅಗ್ನಿಯಾದರೂ (ಜ್ಞಾನಿಯಾದರೂ) ಧರ್ಮಜ್ಞಾನದಲ್ಲಿ ಪರಮ ಮೂರ್ಖನು. ಸತ್ಯದ ರಹಸ್ಯವನ್ನು ನೀನು ತಿಳಿಲಿಲ್ಲ. ಯಾಕೆಂದರೆ (यद्भूतहितमत्यंतं तत್ಸತ್ಯಮಿತಿಚೋಚ್ಯತೇ) ಪ್ರಾಣಿಗಳಿಗೆ ಯಾವುದು ಹಿತಕರವಾಗಿರುವದೋ ಅದೇ ಸತ್ಯವು. ೫೧

**यन्नाशितं त्वया शून्यं कुर्वताग्ने ममाश्रमम्।**
**इति शप्तः स भृगुणा वह्निः क्रोधपरिप्लुतः ॥ ५२ ॥**

ನೀನು ನನ್ನ ಆಶ್ರಮವನ್ನು ನಾಶಮಾಡಿದಿ. ನೀನೂ ನಾಶನಾಗು. ಹೀಗೆ ಭೃಗು ಋಷಿಗಳು ಶಾಪಕೊಟ್ಟಕೂಡಲೇ ಅಗ್ನಿಯೂ ಕೂಡ ಸಿಟ್ಟಿನಿಂದ ಪರಿಪೂರ್ಣನಾದನು. ೫೨

**समाहृत्यात्मनः शक्तिं निलिल्येप्सु द्विजोत्तमाः।**
**तस्मिन्नन्तर्हिते वह्नौ लीनेप्सु सह शक्तिभिः ॥ ५३ ॥**

ಹೇ ಬ್ರಾಹ್ಮಣೋತ್ತಮರೇ !ಅಗ್ನಿ ತನ್ನ ಶಕ್ತಿಯನ್ನು ಅಪಕರ್ಷಣ ಮಾಡಿ ನೀರಿನಲ್ಲಿ ಲಯಮಾಡಿಬಿಟ್ಟನು. ಯಾವಾಗ ತನ್ನ ಸಕಲ ಶಕ್ತಿಗಳಿಂದ ಕೂಡಿ ನೀರಿನಲ್ಲಿ ಲೀನನಾದನೋ ಅಂತಃರ್ಧಾನನಾದನೋ. ೫೩

**प्रजानां जाठरो वह्निः सद्यो नष्टः स बाह्यतः।**
**तदा सर्वाणि भूतानि उच्चैरुच्चुक्रुशुर्द्विजाः ॥ ५४ ॥**

ಪ್ರಜೆಯ ಜಠರಾಗ್ನಿಯೂ ಕೂಡಲೇ ಬಾಹ್ಯತಃ ನಷ್ಟವಾಯಿತು. ಆ ಸಮಯದಲ್ಲಿ ಎಲ್ಲ ಪ್ರಾಣಿಗಳೂ, ಎಲ್ಲಬ್ರಾಹ್ಮಣರು !ದೊಡ್ಡ ಧ್ವನಿಯಿಂದ ಆಕ್ರೋಶಮಾಡಿದರು. ೫೪

अंधकारीकृते लोके पाकं सिद्धिविवर्जिते ॥ ५६ ॥

ಎಲ್ಲ ಮನುಷ್ಯರಿಗೂ ವಹ್ನಿ ಇಲ್ಲದೇ ಕರ್ಮ ಸಿದ್ಧಿಯು ತಟಸ್ಥವಾಯಿತು. ಲೋಕವೆಲ್ಲವೂ ಅಂಧಕಾರಮಯವಾಯಿತು. ಪಾಕಸಿದ್ಧಿ ವರ್ಜವಾಯಿತು. ೫೬

प्राप्तरोगे गतप्राणे आतिथ्यविमुखे यदा ।
ब्रह्माणं शरणं यातास्तदा देवाः सवासवाः ॥ ५७ ॥

ಎಲ್ಲರಿಗೂ ರೋಗ ಪ್ರಾಪ್ತವಾಯಿತು. ಪ್ರಾಣ ಹೋಗುವಂತೆ ಆಯಿತು. ಅತಿಥಿ ಸತ್ಕಾರ್ಯದಲ್ಲಿ ವಿಮುಖರಾದರು. ಆಗ ಇಂದ್ರದೇವರ ಸಹಿತರಾಗಿ ಎಲ್ಲ ದೇವತೆಗಳೂ ಕೂಡ ಬ್ರಹ್ಮದೇವರಿಗೆ ಶರಣು ಹೋದರು. ೫೭

किमेतदिति होवाच धाता सर्वान् दिवौकसान् ।
तं प्रणम्य तदा देवाः सशंसुर्नष्टवह्निताम् ॥ ५८ ॥

ಆವಾಗ ಬ್ರಹ್ಮದೇವರು ಎಲ್ಲ ದೇವತೆಗಳನ್ನು ಉದ್ದೇಶಮಾಡಿಕೊಂಡು ಏನಿದು ಎಂದು ಕೇಳಿದರು. ಎಲ್ಲ ದೇವತೆಗಳೂ ಆ ಬ್ರಹ್ಮದೇವರಿಗೆ ನಮಸ್ಕಾರ ಮಾಡಿ ಅಗ್ನಿ ನಾಶಹೊಂದಿದ್ದನ್ನು ಹೇಳಿದರು. ೫೮

अग्नेरनुगता धातः स्वधा स्वाहा हि नो वृथा ।
वषट्कारेण सहिताः सर्वे यज्ञालयं गताः ॥ ५९ ॥

ಸ್ವಧಾ, ಸ್ವಾಹಾದೇವಿಯರೂ ವಷಟ್ಕಾರದಿಂದ ಕೂಡಿಕೊಂಡು ಎಲ್ಲರೂ ಅಗ್ನಿಯನ್ನು ಅನುಸರಿಸಿ ಯಜ್ಞಾಲಯಕ್ಕೆ ಹೋದರು. ೫೯

पंचत्वं मनुजाः प्रापुः गवाश्वं महिषादिकम् ।
विनष्टं सर्वमेतत्ते जगत्स्थावरजङ्गमम् ॥ ६० ॥

ಮನುಷ್ಯರೂ, ಗೋಗಳೂ, ಅಶ್ವಗಳೂ, ಮಹಿಷಾದಿಗಳೂ, ಮರಣವನ್ನು ಪಡೆಯುತ್ತಿರುವವು. ಸ್ಥಾವರಜಂಗಮಾತ್ಮಕವಾದ ಜಗತ್ತೆ ನಷ್ಟವಾಗುತ್ತಿದೆ. ೬೦

आगतस्तत्र यत्रास्ते जलशायी हुताशनः ॥ ६२ ॥

ಬ್ರಹ್ಮದೇವರು ದೇವಗಣದಿಂದಲೂ, ಸಿದ್ಧರಿಂದಲೂ, ಋಷಿಗಣದಿಂದಲೂ, ಪಿತೃಗಣದಿಂದಲೂ, ಕೂಡಿಕೊಂಡು ಜಲಶಾಯಿಯಾಗಿ ಅಗ್ನಿದೇವರು ಎಲ್ಲಿ ಇರುವರೋ ಅಲ್ಲಿ ಬಂದರು. ೬೨

तानागतान् समालोक्य प्रजज्वाल हुताशनः ।
प्रोवाचेत्थं मया घातः कि कृत्यं हि वदस्व तत् ॥ ६३ ॥

ಆ ಬ್ರಹ್ಮಾದಿ ದೇವತೆಗಳು ಬಂದದ್ದು ನೋಡಿ ಅಗ್ನಿದೇವರು ಪ್ರಜ್ವಲಿತರಾಗಿ ಬ್ರಹ್ಮದೇವರೇ ! ನಾನು ಏನು ಮಾಡತಕ್ಕದ್ದು ಅವಶ್ಯ ಹೇಳಿರಿ ? ೬೩

किं मयाऽपकृतं देव शप्तोऽहं भृगुणा यतः ।
पावकेन मया सत्यमुच्यते कथमन्यथा ॥ ६४ ॥

ಬ್ರಹ್ಮದೇವರೇ ! ನಾನು ಮಾಡಿದ ಅಪರಾಧವೇನು ? ನಾನು ಅಗ್ನಿಯು, ಸತ್ಯವನ್ನೇ ಹೇಳಿರುವೆನು. ಅನ್ಯಥಾ ಭೃಗುಋಷಿಗಳು ಯಾಕೆ ಶಾಪ ಕೊಡಬೇಕು. ೬೪

सत्यवाच्यादहं धामः शप्तवान् सर्वभक्षताम् ।
इत्युक्तवन्तं संबोध्य वह्निमाह प्रजापतिः ॥ ६५ ॥

ನಾನು ಸತ್ಯವನ್ನೇ ಹೇಳಿರುವೆನು. ಹೇ ಬ್ರಹ್ಮದೇವರೇ ! ಸರ್ವ ಭಕ್ಷಕನಾಗು ಎಂದು ನನಗೆ ಭೃಗುಋಷಿಗಳು ಶಾಪ ಕೊಟ್ಟರು. ಹೀಗೆ ಹೇಳುವ ಅಗ್ನಿದೇವರಿಗೆ ಬ್ರಹ್ಮದೇವರು ಉತ್ತರಕೊಟ್ಟರು. ೬೫

प्रजापतिरुवाच –

त्वया तु सूक्तं हे वह्ने त्वन्नो भर्ता हविर्भुजाम् ।
त्वया विना न जीवामः कुतः श्राद्धं कुतोऽमृतम् ॥ ६६ ॥

ಎಲೇ ಅಗ್ನಿಯೇ ! ನೀನು ಹೇಳಿದ್ದು ಸರಿ. ನೀನು ನನಗೂ ಹವಿಷ್ಯಭೋಕ್ತರಾದ ದೇವತೆಗಳಿಗೂ ನೀನು ಭರ್ತ, ನೀನಿಲ್ಲದೇ ನಾವು ಯಾರೂ ಬದುಕುವದಿಲ್ಲ. ೬೬

यदि वह्ने महाभाग लोकान् संजीवयाधुना ।

ಹೇ ಅಗ್ನಿಯೇ ! ನೀನೇ ಯಜ್ಞ, ನೀನೇ ಸ್ವಧಾ, ನೀನೇ ಸ್ವಾಹಾ, ನೀನೇ ಕ್ರತು, ನೀನೇ ಎಲ್ಲ ದೇವತೆಗಳಿಗೆ ಮುಖ, ಪವಿತ್ರನೂ ನೀನೇ, ಅಮೃತನೂ ನೀನೇ. ೬೮

इत्युक्तो लोकगुरुणा वह्निराह प्रजापतिम् ।
स्थानं सन्दिश मे धात ऋषेः शापप्रमोचनम् ॥ ६९ ॥

ಹೀಗೆ ಜಗದ್ಗುರುಗಳಾದ ಬ್ರಹ್ಮದೇವರು ಹೇಳಿದ ಕೂಡಲೇ, ಅಗ್ನಿಯು ಬ್ರಹ್ಮದೇವರಿಗೆ ಹೇಳಿದರು. ಹೇ ಧಾತಃ! ಆ ಭೃಗುಋಷಿಗಳ ಶಾಪಮೋಚನದ ಸ್ಥಾನವನ್ನು ಹೇಳಿರಿ. ೬೯

यत्र तच्छुद्धिदं पुण्यं पावकस्यापि पावनम् ।
इत्युक्तो भगवान् ब्रह्मा वह्निनाश्वत्थयोनिना ॥ ७० ॥

ಅಶ್ವತ್ಥಯೋನಿಯಾದ ಅಗ್ನಿಯು, ಅಗ್ನಿಯನ್ನು ಪವಿತ್ರಮಾಡತಕ್ಕ ಪುಣ್ಯದಾಯಕವಾದ ಪರಮಶುದ್ದಿದಾಯಕವಾದ, ಸ್ಥಾನವನ್ನು ಹೇಳಿರಿ. ಎಂದು ಪ್ರಾರ್ಥಿಸಿದ ತತ್ಕ್ಷಣ ಪೂಜ್ಯರಾದ ಬ್ರಹ್ಮದೇವರು. ೭೦

प्राह गंभीरया वाचा याहि कृष्णां हविर्भुज ।
भविता तत्र शुद्धिस्ते साक्षाद्विष्णुमयी यतः ॥ ७१ ॥

ಗಂಭೀರವಾಣಿಯಿಂದ ಹೇಳಿದರು. ಹೇ ಹವಿರ್ಭೋಕ್ತನಾದ ಅಗ್ನಿಯೇ ! ನಿನಗೆ ಶುದ್ಧಿ ಸ್ಥಳವು ಸಾಕ್ಷಾತ್ ವಿಷ್ಣುಮಯಿಯಾದ ಕೃಷ್ಣವೇಣಿಯೇ ಆಗುವದು. ೭೧

तत्र मे यज्ञसदनं महत् वेदिस्त्रुवादिकम् ।
तथेत्युक्तो जगामाग्निर्भृगुणातिप्रसादितः ॥ ७२ ॥

ಆ ಕೃಷ್ಣವೇಣಿಯ ತಟಾಕವು ನನ್ನ ಯಜ್ಞಮಂಟಪವು. ಸ್ರುಕ್ ಸ್ರುವಾದಿಗಳಿಂದ ಸಮೃದ್ಧಿಯಾಗಿರುವದು. ಆದ್ದರಿಂದ ನೀನು ಅಲ್ಲಿಗೇ ಹೋಗು. ಭೃಗು ಋಷಿಗಳು ಅತಿ ಪ್ರಸನ್ನರಾಗುವರು. ತಥಾಸ್ತು ಅಂತ ಹೇಳಿ ಅಗ್ನಿಯು ಕೃಷ್ಣವೇಣೀ ತಟಾಕಕ್ಕೆ ಹೋದನು. ೭೨

कृष्णागङ्गां समासाद्य न्यवसद्दक्षिणे तटे ।

वत्सरार्धेन तत्रास्य सिद्धिर्जाता महात्मनः ॥ ७४ ॥

ಅಲ್ಲಿಂದ ಒಂದು ಸಾವಿರ ಧನುಷ್ಯದ ಮುಂದೆ ವಿಷ್ಣುತೀರ್ಥವು ಇರುವದು. ಹೇ ಬ್ರಾಹ್ಮಣೋತ್ತಮರೇ ! ಆ ಕೃಷ್ಣವೇಣಿಯ ದಕ್ಷಿಣ ತಟಾಕದ ಸಿದ್ಧೇಶ್ವರ ಸನ್ನಿಧಿಯಲ್ಲಿ ಆರು (೬) ತಿಂಗಳವರೆಗೆ ಯಾರು ವಾಸಮಾಡುವರೋ ಆ ಮಹಾತ್ಮರಿಗೆ ಎಲ್ಲ ಕಾರ್ಯಗಳೂ ಸಿದ್ಧಿಯಾಗುವವು. ೭೪

तस्मिन् तीर्थे महापुण्ये तिलाज्यं यः प्रयच्छति ।
ब्राह्मणेभ्यो द्विजश्रेष्ठाः पुनात्यासप्तमं कुलम् ॥ ७५ ॥

ಆ ಕೃಷ್ಣವೇಣಿ ತಟಾಕದ ತೀರ್ಥದಲ್ಲಿ (ಪುಣ್ಯಕರವಾದ) ಬ್ರಾಹ್ಮಣರಿಗೆ ಎಳ್ಳು, ತುಪ್ಪ ಯಾರು ದಾನ ಮಾಡುವರೋ ಅವರು, ಹೇ ಬ್ರಾಹ್ಮಣೋತ್ತಮರೇ ! ಏಳುಏಳು ಕುಲವನ್ನು ಪವಿತ್ರ ಮಾಡುವರು. ೭೫

श्राद्धं करोति यस्तस्य व्यतीपातेन्दुसंक्षये ।
सक्तुभिर्निर्वपेत्पिण्डान् पुरुषान् त्रीन् पुनाति सः ॥ ७६ ॥

ಆ ತೀರ್ಥದಲ್ಲಿ ಪುಣ್ಯಕರವಾದ ವ್ಯತೀಪಾತದಲ್ಲಿ, ಕ್ಷಯತಿಥಿಯಲ್ಲಿ, ಯಾರು ಶ್ರಾದ್ಧಮಾಡಿ ಸಕ್ತುಗಳಿಂದ ಪಿಂಡಪ್ರದಾನ ಮಾಡುವರೋ, ಅವರು ಮೂರು ಕುಲವನ್ನು ಪವಿತ್ರ ಮಾಡುವರು. ೭೬

यः सोमश्रवणे स्नात्वा सिद्धेशं चावलोकयेत् ।
प्रदोषे द्विज शार्दूल अग्निलोकं समश्नुते ॥ ७७ ॥

ಯಾರು, ಸೋಮವಾರ, ಶ್ರವಣಾ ನಕ್ಷತ್ರ, ಶ್ರಾವಣಮಾಸದಲ್ಲಿ, ಸ್ನಾನಮಾಡಿ ಆ ಸಿದ್ಧೇಶ್ವರನನ್ನು ಪ್ರದೋಷ ಕಾಲದಲ್ಲಿ ನೋಡುವರೋ, ಹೇ ಬ್ರಾಹ್ಮಣೋತ್ತಮರೇ ! ಅವರು ಅಗ್ನಿಲೋಕವನ್ನು ಕುರಿತು ಹೋಗುವರು. ೭೭

मकरस्थे रवौ विप्राः तिलाज्यं यः प्रयच्छति ।
गायत्र्यष्टसहस्रं तु चान्द्रायणफलं लभेत् ॥ ७८ ॥

ಹೇ ಬ್ರಾಹ್ಮಣೋತ್ತಮರೇ ! ಸೂರ್ಯನು ಮಕರರಾಶಿಗೆ ಬಂದಾಗ ಯಾರು

ಪಡೆಯುವರು. ೭೯

पावकस्य महातीर्थे यः शुक्लप्रतिपद्दिने ।
विप्रेभ्यस्तण्डुलान् दद्याद्दारिद्र्यं न भवेत् क्वचित् ॥ ८० ॥

ಆ ಅಗ್ನಿತೀರ್ಥದಲ್ಲಿ ಯಾರು ಶುಕ್ಲಪಕ್ಷ ಪ್ರತಿಪದಾ ದಿನದಲ್ಲಿ ಬ್ರಾಹ್ಮಣರಿಗೆ ತಂಡುಲ (ಅಕ್ಕಿ) ದಾನಮಾಡುವರೋ ಅವರಿಗೆ ಎಂದಿಗೂ ದಾರಿದ್ರ್ಯ ಉಂಟಾಗುವದಿಲ್ಲ. ೮೦

सिद्धेश्वरे पुण्यतीर्थे सह्यजादक्षिणे तटे ।
मिष्टान्नं द्विजमुख्येभ्यो दत्वा ह्यन्ते सुखी भवेत् ॥ ८१ ॥

ಸಹ್ಯಾದ್ರಿಯಲ್ಲಿ ಉಗಮಳಾದ ಕೃಷ್ಣವೇಣಿಯ ದಕ್ಷಿಣ ತಟಾಕದಲ್ಲಿಯ ಪುಣ್ಯಕರ ವಾದ ಸಿದ್ಧೇಶ್ವರ ಕ್ಷೇತ್ರದಲ್ಲಿ ಯಾರು, ಬ್ರಾಹ್ಮಣರಿಗೆ ಮೃಷ್ಟಾನ್ನ ದಾನಮಾಡುವರೋ ಅವರು ಅಂತ್ಯಕಾಲದಲ್ಲಿ ಬಹಳ ಸುಖ ಪಡೆಯುವರು. ೮೧

इत्यग्नितीर्थस्य फलं द्विजाग्र्याः
श्रीकृष्णनद्याः किल दक्षिणे तटे ।
आयुष्यमारोग्यमहाविभूतिं
शृण्वन्नरो याति शिवस्य लोकम् ॥ ८२ ॥

ಹೇ ಬ್ರಾಹ್ಮಣರೇ ! ಈ ಕೃಷ್ಣವೇಣೀ ನದಿಯ ದಕ್ಷಿಣ ತಟಾಕದಲ್ಲಿಯ ಅಗ್ನಿತೀರ್ಥದ ಫಲವನ್ನು ಯಾರು ಶ್ರವಣ ಮಾಡುವರೋ, ಅವರು ಆಯುಷ್ಯ, ಆರೋಗ್ಯ, ಮಹದೈಶ್ವರ್ಯಾದಿಗಳನ್ನು ಪಡೆದು ಕೊನೆಗೆ ಶಿವಲೋಕವನ್ನು ಕುರಿತು ಹೋಗುವರು. ೮೨

॥ इति श्री कृष्णामाहात्म्ये अग्नितीर्थवर्णनं नाम नवमोऽध्यायः ॥

❀ ❀ ❀

यस्य संस्मरणादेव सर्वपापैः प्रमुच्यते ॥ १ ॥

ಇದರ ಮುಂದೆ ಪರಮಪುಣ್ಯಕರವಾದ ಉತ್ತಮೋತ್ತಮವಾದ ವೈರಾಜವೆಂಬ ಕ್ಷೇತ್ರವಿರುವದು. ಯಾವಕ್ಷೇತ್ರದ ಸ್ಮರಣಮಾತ್ರದಿಂದ ಎಲ್ಲ ಪಾಪಗಳು ಬಿಡುಗಡೆ ಯಾಗುವವೋ ಅದೇ ವೈರಾಜಕ್ಷೇತ್ರವು. ೧

पुरा वैराजके कल्पे ब्रह्मा ब्रह्मविदांवरः ।
द्वादशाब्दं महासत्रं अकार्षीत्तत्र सिद्धये ॥ २ ॥

ಪೂರ್ವದಲ್ಲಿ ವೈರಾಜಕಕಲ್ಪದಲ್ಲಿ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಬ್ರಹ್ಮದೇವರು ಸಿದ್ಧಿಗೋಸ್ಕರ (೧೨) ಹನ್ನೆರಡು ವರ್ಷದ ಮಹಾಸತ್ರ (ಯಜ್ಞ) ವನ್ನು ಮಾಡಿದರು. ೨

तस्मिन् सत्रे मनोभिज्ञे सुयज्ञः सुमहाध्वनिः ।
दीयतां भुज्यतां चेति प्रीयतां भगवान् हरिः ॥ ३ ॥

ಆ ಮನೋಹರವಾದ ಯಜ್ಞದಲ್ಲಿ ಸುಯಜ್ಞವು ಎಂಬ ಮಹಾಧ್ವನಿಯು, ದಾನ ಮಾಡಿರಿ, ಭೋಗ ಮಾಡಿರಿ, ಪರಮಪೂಜ್ಯನಾದ ಸಾಕ್ಷಾನ್ನಾರಾಯಣನು ಪ್ರೀತ ನಾಗುವನು, ಎಂದು ಹೊರಟಿತು. ೩

तस्मिन् क्षेत्रे हेमपात्रे ब्रह्मनेत्रे सुखप्रदे ।
वसवो मनवः सिद्धाः ऋषयो देवतागणाः ॥ ४ ॥

ಆ ಯಜ್ಞವು ಸುವರ್ಣಪಾತ್ರೆಯುಳ್ಳದ್ದು, ಸುಖಪ್ರದವು, ಬ್ರಹ್ಮದೇವರ ನಿಯಾಮಕತ್ವದ್ದು. ಆ ಯಜ್ಞದಲ್ಲಿ ವಸುಗಳು, ಮನುಗಳು, ಸಿದ್ಧರು, ಋಷಿಗಳು, ದೇವಗಣಗಳು, ೪

स भार्यास्ते सदस्या सन् प्रवृत्ते यज्ञकर्मणि ।
वेद्यस्तत्र हिरण्मय्यो यूपश्चापि हिरण्मयाः ॥ ५ ॥

ಎಲ್ಲ ದೇವಗಣದವರೂ, ಸದಸ್ಯರೂ, ಸಪತ್ನೀಕರಾಗಿ ಸನ್ನಿಹಿತರಾದರು. ಆ

स्रुवश्चापिपारिजातैस्तथा कल्पवृक्षादिभिस्तथा ॥ ६ ॥

ಕಲಧೌತಗಳು, ಶೂರ್ಪಗಳು, ಒರಳುಗಳು, ಸ್ರುವಗಳು, ಪಾರಿಜಾತಗಳು ಹಾಗು ಕಲ್ಪವೃಕ್ಷಗಳೂ ಹುಟ್ಟಿದವು. ೬

आसनादि विचित्राणि कंबलान्यजिनानि च।
विशालमंटपे तस्मिन् विश्वकर्मकृतो द्विजः ॥ ७ ॥

ವಿಚಿತ್ರಗಳಾದ ಆಸನಗಳೂ, ಕಂಬಲಗಳೂ, ಕೃಷ್ಣಾಜಿನಗಳೂ, ಆ ವಿಶಾಲವಾದ ಯಜ್ಞಮಂಟಪದಲ್ಲಿ ವಿಶ್ವಕರ್ಮನಿಂದ ಮಾಡಲ್ಪಟ್ಟಿರುವವು. ೭

शंखं दुंदुभयो नेदुः गन्धर्वाश्च कलं जगुः।
ऋचो यजूंषि सामानि स्वयं वेदाः पठन्त्यहो ॥ ८ ॥

ಶಂಖಗಳೂ, ದುಂದುಭಿಗಳೂ, ಬಾರಿಸಲ್ಪಟ್ಟವು. ಗಂಧರ್ವರು ಗಾಯನ ಮಾಡಿದರು. ಋಗ್ವೇದ, ಯಜುರ್ವೇದ, ಸಾಮವೇದಗಳನ್ನು ಸ್ವತಃ ವೇದಾಭಿಮಾನಿ ದೇವತೆಗಳೇ ಪಠನ ಮಾಡಿದರು. ೮

प्रवृत्ते यज्ञसंभारे कुण्डे वेदिसु संभृते।
पत्नीशाला तु नैऋत्यां आग्नेयां तु महानसम् ॥ ९ ॥

ಆ ಯಜ್ಞ ಸಮಾರಂಭದಲ್ಲಿ ಯಜ್ಞಕುಂಡವೂ, ವೇದಿಕೆಗಳೂ, ಪರಿಪೂರ್ಣ ವಾಗಿದ್ದವು. ನೈಋತ್ಯದಲ್ಲಿ ಪತ್ನೀಶಾಲೆಗಳೂ, ಆಗ್ನೇಯದಲ್ಲಿ ಅಡಿಗೆ ಮನೆಯು, ೯

प्रतीच्यां गन्धपुष्पादि वायव्यां द्विजतर्पणम्।
हस्त्यश्वादि ततोऽदीच्यां धनधान्यसमन्वितम् ॥ १० ॥

ಪಶ್ಚಿಮದಿಕ್ಕಿನಲ್ಲಿ ಗಂಧಪುಷ್ಪಾದಿಗಳೂ, ವಾಯುವ್ಯದಲ್ಲಿ ಬ್ರಾಹ್ಮಣರಿಗೆ ತರ್ಪಣವು, ಉತ್ತರದಿಕ್ಕಿನಲ್ಲಿ ಆನೆ, ಕುದುರೆಗಳೂ, ಹಾಗೂ ಧನ ಧಾನ್ಯಗಳಿಂದ ತುಂಬಿದ್ದವು. ೧೦

ईशान्यां देवसदनं प्राच्यां ब्रह्मसभा स्मृता।
तत्र तस्मिन् समारंभे देवाः सर्वे समागताः ॥ ११ ॥

ಈಶಾನ್ಯದಿಕ್ಕಿನ ದೇವಗೃಹಗಳೂ, ಪೂರ್ವದಿಕ್ಕಿನ ಬ್ರಹ್ಮದೇವರ ಸಭಾ

यज्ञावोऽप्तिभवन्मह्यं तमानयतमाचिरम्।
वैराजेनैव मुक्तास्ते देवा वायुमथाब्रुवन् ॥ १३ ॥

ನನಗೋಸ್ಕರ ಬೇಗನೇ ರುದ್ರದೇವರನ್ನು ಕರೆದುಕೊಂಡು ಬನ್ನಿರಿ. ಹೀಗೆ ಬ್ರಹ್ಮದೇವರ ಮಾತು ಕೇಳಿ ಆ ಎಲ್ಲ ದೇವತೆಗಳೂ ವಾಯುದೇವರಿಗೆ ಹೇಳಿದರು. ೧೩

गच्छ वायो विश्वनाथं विज्ञापय सहो मया।
स माधवं महेशं च दंडपाणिसमन्वितम् ॥ १४ ॥

ಹೇ ವಾಯುದೇವರೇ! ಪಾರ್ವತೀಸಹಿತರಾದ ವಿಶ್ವನಾಥನಿಗೆ ವಿಜ್ಞಾಪನೆ ಮಾಡಿಕೊಳ್ಳಿರಿ. ದಂಡಪಾಣಿಯಿಂದ ಸಹಿತರಾದ ವೇಣೀಮಾಧವನಿಂದ ಕೂಡಿಕೊಂಡು, ೧೪

वाराणस्यां वसन्तं तं शीघ्रमानय शीघ्रग।
इत्युक्तो ऋषिभिर्वायुर्गत्वा वाराणसीं पुरीम् ॥ १५ ॥

ವಾರಾಣಸೀ (ಕಾಶೀ) ಕ್ಷೇತ್ರದಲ್ಲಿ ಇರುವ ಆ ವಿಶ್ವನಾಥನನ್ನು ಶೀಘ್ರಗಾಮಿಯಾದ ವಾಯುದೇವರೇ ಬೇಗನೇ ಕರೆದುಕೊಂಡು ಬನ್ನಿರಿ. ಹೀಗೆ ಋಷಿಗಳ ಮಾತನ್ನು ಕೇಳಿ ವಾಯುದೇವರು ವಾರಾಣಸೀ ಪಟ್ಟಣಕ್ಕೆ ಹೋಗಿ, ೧೫

इति विज्ञापयामास तारकेशं सदाशिवम्।
देवदेव जगन्नाथ यज्ञकर्मफलप्रद ॥ १६ ॥

ಯಜ್ಞಕರ್ಮಗಳ ಫಲಪ್ರದನಾದ, ದೇವದೇವೇಶನಾದ ಜಗನ್ನಾಥನೇ! ಎಂದು ತಾರಕೇಶನಾದ ಸದಾಶಿವನನ್ನು ಋಷಿಗಳು ಹೀಗೆ ವಿಜ್ಞಾಪನೆ ಮಾಡಿಕೊಂಡಿದ್ದಾರೆ. ೧೬

वेदोपनिषदां पूज्य कर्मयोग नमोऽस्तु ते।
त्वयि नाथे सति विभो ब्रह्म ब्रह्मविदां वरः ॥ १७ ॥

ವೇದೋಪನಿಷತ್ತುಗಳಿಂದಲೂ ಪರಮಪೂಜ್ಯನಾದ, ಕರ್ಮಯೋಗಿಯಾದ, ನಿನಗೆ ಅನಂತ ನಮಸ್ಕಾರಗಳು. ಹೇ ವಿಭೋ! ನೀನು ಎಲ್ಲರಿಗೂ ನಾಥನು. ಆದಕಾರಣ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಬ್ರಹ್ಮದೇವರು, ೧೭

त्वया स्वाहा स्वधा रुद्र त्वया श्राद्धं सनातनम् ॥ १९ ॥

ಚಂದ್ರನಿಂದ ಸುಶೋಭಿತನಾದ, ಪಾರ್ವತೀಪತಿಯಾದ ರುದ್ರನೇ ! ಸೋಮಪಾನ ಕ್ಕೋಸ್ಕರ ಬೇಗನೇ ಬಾ. ಎಲೇ ರುದ್ರನೇ ! ಸ್ವಾಹಾ, ಸ್ವಧಾ, ಸನಾತನವಾದ ಶ್ರಾದ್ಧವೂ. ೧೯

वषट्कारस्त्वमोङ्कारप्रणवः सर्वकर्मसु ।
त्वया साऽवभृथा यज्ञास्त्वया सोद्यापनं त्विदम् ॥ २० ॥

ನೀವು ವಷಟ್ಕಾರರು, ಎಲ್ಲ ಕರ್ಮಗಳಲ್ಲಿಯಾ ಓಂಕಾರರೂಪ ಪ್ರಣವ ಮಂತ್ರವು, ಯಜ್ಞದ ಉದ್ಯಾಪನವೂ ನೀವೇ. ೨೦

परिपूर्णं त्वया सर्वं ह्यफलं तु त्वया विना ।
विज्ञप्तिं ब्राह्मणादीनां श्रुत्वा विश्वहरोहरः ॥ २१ ॥

ನಿಮ್ಮಿಂದಲೇ ಯಜ್ಞವು ಪರಿಪೂರ್ಣವು. ನೀವು ಇಲ್ಲದೇ ಯಜ್ಞವು ನಿಷ್ಫಲ ವಾಗುವದು. ವಾಯುದೇವರಿಂದ ಬ್ರಾಹ್ಮಣರ ವಿಜ್ಞಾಪನೆಯನ್ನು ಕೇಳಿ ವಿಶ್ವಹರರಾದ ಮಹಾದೇವರು, ೨೧

त्वर्यतां त्वर्यतां भद्रे विशालाक्षिमखं विधेः ।
त्वया यज्ञोत्सवो धन्यो ब्राह्मणाः सर्वमङ्गले ॥ २२ ॥

ಹೇ ಸುಮಂಗಲೇ ! ವಿಶಾಲಾಕ್ಷೀ, ಬ್ರಹ್ಮದೇವರು ಯಜ್ಞ ಆರಂಭಮಾಡಿರುವರು. ನಿನ್ನಿಂದಲೇ ಬ್ರಾಹ್ಮಣರು, ಯಜ್ಞದ ಉತ್ಸವವು, ಎಲೇ ಸರ್ವ ಮಂಗಲಾದೇವಿ ! ಧನ್ಯರಾಗುವರು. ೨೨

ॐमित्युक्त्वा भगवती प्रहृष्टेनान्तरात्मना ।
आजगाम वृषारूढा विश्वनाथेन पार्वती ॥ २३ ॥

ಪರಮಪೂಜ್ಯಳಾದ ಪಾರ್ವತೀ (ರುದ್ರಾಣಿಯಾ), ಓಂ ತಥಾಸ್ತು ಎಂದು

ಮುಂದೆ ಮಾಡಿಕೊಂಡು, ಶ್ವೇತನೂ, ಕೃಷ್ಣನೂ, ಧೂಮ್ರಾಕ್ಷನೂ, ಪದ್ಮಾಕ್ಷನೂ, ಅನುಯಾಯಿಗಳಾದರು. ೨೪

**धनुष्पाणिर्गदापाणि: खड्गपाणि: परस्वधी: ।**
**पट्टिशी कुंतपाणिश्च दंडपाणिपुर:सरा: ॥ २५ ॥**

ಕೆಲವರು ಧನುರ್ಧಾರಿಗಳೂ, ಕೆಲವರು ಗದಾಧಾರಿಗಳೂ, ಕೆಲವರು ಖಡ್ಗಪಾಣಿಗಳೂ, ಕೆಲವರು ಪರಶುಧಾರಿಗಳೂ ಹಾಗೂ ಪಟ್ಟಿಶ, ಕುಂತಪಾಣಿಗಳಾಗಿ ದಂಡಪಾಣಿಗಳಾಗಿ ಹೊರಟರು. ೨೫

**कलावती चंद्रवती मालती पद्ममालिनी ।**
**विश्वाच कुलधौतांगी विद्याधर्य: प्रतस्थिरे ॥ २६ ॥**

ಕಲಾವತಿಯರು, ಚಂದ್ರವತಿಯರು, ಮಾಲತಿಯರು, ಪದ್ಮಮಾಲಿನಿಯರು ವಿಶ್ವಾದೇವತೆಯರೂ, ಕುಲಧೌತಾಂಗಿಯರೂ ವಿದ್ಯಾಧರೀ ಸ್ತ್ರೀಯರೂ ಎಲ್ಲ ದೇವತಾಸ್ತ್ರೀಯರೂ ಹೊರಟರು. ೨೬

**असितो देवलो व्यासो भरद्वाजान्वय: श्रिय: ।**
**ऋषिपत्न्य: सुवासिन्य: सुगन्धिन्य: प्रतस्थिरे ॥ २७ ॥**

ಅಸಿತ ಋಷಿಗಳೂ, ದೇವಲ ಋಷಿಗಳೂ, ವೇದವ್ಯಾಸ ದೇವರು, ಭರದ್ವಾಜಾದಿ ಎಲ್ಲ ವಂಶಜ ಋಷಿಗಳೂ, ಸುವಾಸಿನಿಯರೂ, ಸುಮಂಗಲಿಯರಾದ ಋಷಿಪತ್ನಿಯರೂ, ಸುವಾಹಿನಿಯರೂ, ಸುಗಂಧಿನಿಯರೂ ಎಲ್ಲರೂ ಹೊರಟರು. ೨೭

**समागतं समालोक्य विश्वनाथं प्रजापति: ।**
**प्रहर्षमतुलं प्राप्य पुरोऽगच्छत्सदाशिवम् ॥ २८ ॥**

ಎಲ್ಲ ಪರಿಹಾರ ಸಹಿತರಾಗಿ ಬರುವಂತಹ ವಿಶ್ವನಾಥನನ್ನು ನೋಡಿ ಬ್ರಹ್ಮದೇವರು ಪರಮ ಸಂತೋಷಭರಿತರಾಗಿ ರುದ್ರದೇವರನ್ನು ಎದುರುಗೊಳ್ಳಲಿಕ್ಕೆ ಹೊರಟರು. ೨೮

अब्रवीच्च विशालाक्षीं त्वया मातः सुमङ्गले ॥ ३० ॥

ದೇವ ಋಷಿಗಳಿಂದಲೂ ಹಾಗೂ ಮಾಧವನಿಂದ ಸಹಿತರಾದ ರುದ್ರ ದೇವರಿಗೆ ಸ್ವಾಗತವಾದಮೇಲೆ, ಹೇ ಮಾತೇ ಸುಮಂಗಲೀ, ಎಂದು ವಿಶಾಲಾಕ್ಷಿಯಾದ ಪಾರ್ವತೀದೇವಿಯನ್ನು ಕುರಿತು ಮಾತನಾಡಿದರು. ೩೦

जातं मे यज्ञसदनं तपसा कृपयाम्बिके ।
इत्युक्त्वा पितरौ ब्रह्मा माधवं चाब्रवीदिदम् ॥ ३१ ॥

ಹೇ ಅಂಬಿಕೇ! ನಿನ್ನ ಕೃಪೆಯಿಂದಲೂ ಹಾಗೂ ನನ್ನ ತಪಸ್ಸಿನಿಂದಲೂ ನನ್ನ ಯಜ್ಞಸದನವು ಪೂರ್ಣವಾಗಿದೆ. ಹೀಗೆ ಹೇಳಿ ತಂದೆ ತಾಯಿಗಳಾದ ಲಕ್ಷ್ಮೀಪತಿಯನ್ನು ಕುರಿತು ಬ್ರಹ್ಮದೇವರು ಮಾತನಾಡಿದರು. ೩೧

त्वया कर्माखिलं विष्णो पूर्णमस्तु सनातन ।
तत्त्वया विश्वनाथेन कालनाथेन चोमया ॥ ३२ ॥

ಸನಾತನನಾದ ವಿಷ್ಣುವೇ! ನಿನ್ನಿಂದಲೇ ಈ ಎಲ್ಲ ಯಜ್ಞಕರ್ಮಗಳೂ ಪೂರ್ಣವಾಗಲಿ. ಹಾಗು ಕಾಲನಾಥನಾದ ಪಾರ್ವತೀ ಸಮೇತನಾದ ವಿಶ್ವನಾಥನಿಂದಲೂ ಕೂಡಿಕೊಂಡು ಪೂರ್ಣಮಾಡು. ೩೨

त्रातव्यं यज्ञसदनं यावदाभूत संप्लवं ।
तथेत्युक्त्वा जगन्नाथो विश्वनाथेन चोमया ॥ ३३ ॥

ಕೊನೆಯವರೆಗೂ ಯಜ್ಞಸದನವನ್ನು ರಕ್ಷಣೆ ಮಾಡತಕ್ಕದ್ದು. ಎಂಬ ಬ್ರಹ್ಮದೇವರ ಮಾತನ್ನು ಕೇಳಿ, ಪಾರ್ವತಿಪತಿ ವಿಶ್ವನಾಥನಿಂದ ಕೂಡಿಕೊಂಡು, ತಥಾಸ್ತು ಎಂದು ಹೇಳಿ, ೩೩

न्यवसत्सह्यजातीरे उत्तरे दण्डपाणिनः ।

ततः स ऋत्विग्वरणाय वेधाः समाह्वयामास सधर्मचारिणीम् ।
नायाति शीघ्रं रजनीमरुक्षां सुवासिनीभ्यो ददती ह्यपूजयत् ॥ ३४ ॥

ಸುವಾಸಿನಿಯರನ್ನು ಪೂಜಿಸುತ್ತಿದ್ದಳು. ಬೇಗನೇ ಬರಲಿಲ್ಲ. ೩೫

तथा स्रजो गंधवती सुवासिनी तांबूलदानानि तथा सुमोदकान्।
अरुंधती भानुमती सतीभ्यः स्वलंकृताभ्यो ददती श्रमान्विता ॥ ३५ ॥

ಅರುಂದತೀ ಭಾನುಮತೀ ಮುಂತಾದ ಸತಿಯರಿಗೆ ಅಲಂಕಾರ ಪೂರ್ವಕವಾಗಿ ಪುಷ್ಪಮಾಲೆಗಳನ್ನು, ಗಂಧವನ್ನು, ಒಳ್ಳೆ ವಸ್ತ್ರಗಳನ್ನು, ತಾಂಬೂಲಗಳನ್ನು ಹಾಗೂ ಮೋದಕಗಳನ್ನು ಭಕ್ತಿಪುರಸ್ಸರವಾಗಿ ಕೊಡುವವಳಾಗಿದ್ದಳು. ೩೫

तावत्सरस्वती कृद्धा शाण्डिल्यं समभाषत।
शाण्डिल्यानय गायत्रीं द्वितीयां सहचारिणीम् ॥ ३६ ॥

ಅಷ್ಟರಲ್ಲಿ ಸರಸ್ವತೀದೇವಿಯು ಕ್ರುದ್ಧಳಾಗಿ ಶಾಂಡಿಲ್ಯರನ್ನು ಕುರಿತು ಹೇಳಿದಳು. ಹೇ ಶಾಂಡಿಲೀ! ಎರಡನೇ (ಸಹಚಾರಿಣಿಯಾದ) ಸಹಧರ್ಮಿಣಿಯಾದ ಗಾಯತ್ರೀ ದೇವಿಯನ್ನು ಕರೆದುಕೊಂಡು ಬಾ. ೩೬

यथा संपूर्यते सत्रं पवित्रं ब्रह्म कर्मणा।
इत्युक्तस्तां समानीय शांडिल्यः शंसितव्रतः ॥ ३७ ॥

ಈ ಪವಿತ್ರವಾದ ಯಜ್ಞವು ಬ್ರಹ್ಮದೇವರ ಬ್ರಹ್ಮಕರ್ಮದಿಂದ ಹೇಗೆ ಯಥಾಸಾಂಗ ಪೂರ್ಣವಾಗುವದೋ ಹಾಗೇ ಮಾಡು. ಆ ಮಾತನ್ನು ಕೇಳಿ ಶಾಂಡಿಲಿಯು ಆ ಗಾಯತ್ರೀ ದೇವಿಯನ್ನು ಕರೆದುಕೊಂಡು ಬಂದಳು. ೩೭

समन्वारब्धवान् सत्रं तया धाता समंत्रकम्।
तां दृष्ट्वा पतिसंलग्ना स्रुवं धारयती स्थिरम् ॥ ३८ ॥

ಬ್ರಹ್ಮದೇವರು ಆ ಎರಡನೇ ಸಹದರ್ಮಿಣಿಯಾದ ಗಾಯತ್ರೀದೇವಿಯಿಂದ ಕೂಡಿಕೊಂಡು ಮಂತ್ರಪುರಸ್ಸರವಾಗಿ ಯಜ್ಞವನ್ನು ಆರಂಭ ಮಾಡಿದರು. ಪತಿಯಿಂದ ಕೂಡಿಕೊಂಡು, ಧಾರಾಹುತಿ, ಪೂರ್ಣಾಹುತಿಯನ್ನು ಹಾಕುವದರಲ್ಲಿ ಸಂಲಗ್ನಳಾದದ್ದನ್ನು ನೋಡಿ, ಆ ಪೂರ್ಣಾಹುತಿಯು ಧಾರಾಹುತಿಯು ಸ್ಥಿರವಾಗುವಂತೆ. ೩೮

ಸಮಯದಲ್ಲಿ ಬ್ರಾಹ್ಮಣರೇ ! ಹಾಹಾಕಾರವಾಯಿತು. ೪೦

तां दृष्ट्वा त्वरिता विप्राः समानेतुं वृषाकपिः ।
गता ह्यब्धेस्तटं यावत्प्रविष्टा सागरं शुभा ॥ ४१ ॥

ಆ ಸಾವಿತ್ರಿಯನ್ನು ನೋಡಿ ಕರೆದುಕೊಂಡು ಬರಲಿಕ್ಕೆ ವೃಷಾಕಪಿಯು (ವಾಯುದೇವರು) ಸಮುದ್ರ ತಟಾಕಕ್ಕೆ ಹೋದರು. ಬ್ರಾಹ್ಮಣರೇ ! ಅಷ್ಟರಲ್ಲಿ ಅವಳು ಸಮುದ್ರವನ್ನು ಪ್ರವೇಶಮಾಡಿದಳು. ೪೧

तत्सुपुण्यं महातीर्थं भुक्तिमुक्तिफलप्रदम् ।
सर्वतीर्थोत्तमं विप्राः महापापहरं फलम् ॥ ४२ ॥

ಆದಕಾರಣ ಅದೇ ವೈರಾಜತೀರ್ಥವು (ವೈರಾಜ ಕ್ಷೇತ್ರವು) ಮಹಾ ಕ್ಷೇತ್ರವು. ಬಹು ಪುಣ್ಯಪ್ರದವು. ಐಹಿತ, ಪಾರತ್ರಿಕ ಎರಡೂ ಫಲಪ್ರದವು. ಎಲ್ಲ ತೀರ್ಥಗಳಕ್ಕಿಂತಲೂ ಉತ್ತಮವಾದದ್ದು. ಬ್ರಾಹ್ಮಣರೇ ! ಮಹಾ ಪಾಪ ಪರಿಹಾರಕವಾದದ್ದು. ಪರಮಶ್ರೇಷ್ಠ ವಾದದ್ದು. ೪೨

ततो ब्रह्मातिमूर्छोऽभूत्त्वरया परया युतः ।
देव्यां गतायां किं कार्यं किं कृतं नास्मरत्तदा ॥ ४३ ॥

ತಕ್ಷಣದಲ್ಲಿ ಬ್ರಹ್ಮದೇವರು ಮೂರ್ಛಿತರಾದರು. ಸಾವಿತ್ರೀ ದೇವಿಯು ಹೋದನಂತರ ಏನು ಮಾಡತಕ್ಕದ್ದು. ಇನ್ನು ನಾನೇನು ಮಾಡಲಿ ? ಎಂದು ಏನೂ, ತಿಳಿಯವಲ್ಲದು ಎಂದು ದುಃಖಿತರಾದರು. ೪೩

तदासुरो महापापो क्रियालोप्तुं समागमात् ।
तं भुवो धनवेधापि ज्ञातोऽसौ दण्डपाणिना ॥ ४४ ॥

ಆ ಸಮಯದಲ್ಲಿ ಮಹಾಪಾಪಿಯಾದ ಅಸುರನು ಕರ್ಮಲೋಪ ಮಾಡಲಿಕ್ಕೆ ತಕ್ಷಣದಲ್ಲಿ ಬಂದನು. ಅವನನ್ನು ನೋಡಿ ಬ್ರಹ್ಮದೇವರು ದಂಡಪಾಣಿಗಳಾಗಿ ಅದನ್ನು ತಿಳಿದುಕೊಂಡರು. ೪೪

कथितो देवदेवाय महादेवाय शूलिने ।

जघान तेनाध्वरविघ्नकारकं दैत्यप्रणाशं प्रवरं हि तीर्थम् ॥ ४६ ॥

ರುದ್ರದೇವರು ಶ್ರೀವಿಷ್ಣುವಿನ ಕರಕಮಲದಿಂದ ಸಹಸ್ರಕೋಟಿ ಪ್ರಕಾಶಮಾನವಾದ ಸುದರ್ಶನವನ್ನು ತಗೊಂಡು ಯಜ್ಞಕ್ಕೆ ವಿಘ್ನ ಉಂಟು ಮಾಡುವ ಆ ದೈತ್ಯನನ್ನು ಸಂಹಾರಮಾಡಿದರು. ಅದು ದೈತ್ಯನನ್ನು ಸಂಹಾರಮಾಡಿದ ಶ್ರೇಷ್ಠವಾದ ತೀರ್ಥವು. ೪೬

कीलाललिप्तं सदशोकवर्णं चक्रं निघृष्टं हरिणा हि यत्र ।
तच्चक्रतीर्थं प्रथितं हि राजते ऋक्षेर्हरेर्यज्ञफलं हि मञ्जसा ॥ ४७ ॥

ರಕ್ತದಿಂದ ಲಿಪ್ತವಾದ ಅಶೋಕವರ್ಣವುಳ್ಳ, ಪರಮಾತ್ಮನಿಂದ ದೈತ್ಯ ಸಂಹಾರಕ್ಕೋಸ್ಕರ ಬಿಡಲ್ಪಟ್ಟ ಚಕ್ರವು. ಆದ್ದರಿಂದ ಅದು ಚಕ್ರತೀರ್ಥವೆಂದು ಪ್ರಸಿದ್ಧವಾಗಿ ವಿರಾಜಮಾನವಾಗಿರುವುದು. ಆ ದೈತ್ಯನು ನೀರಿನಲ್ಲಿ ಮುಳುಗಿದರೂ, ಚಕ್ರದಿಂದ ಸಂಹೃತನಾದ ಕಾರಣ, ಇದೇ ಯಜ್ಞದ ಮಹಾಫಲವು. ೪೭

सिद्धेश्वराद्दंडशतात्तदग्रे तत्पापहारं भुवि भूरिपुण्यदम् ।
स्नात्वा द्विजेभ्यः प्रददाति योऽन्नं प्रपूर्य पात्राणि विशोकवान् जनः॥ ४८ ॥

ಸಿದ್ಧೇಶ್ವರದ ನೂರು ದಂಡದ ಮುಂದೆ ಮಹತ್ಪಾಪ ಪರಿಹಾರಕವಾದ ಭೂಮಿಯಲ್ಲಿ ಮಹಾಪುಣ್ಯಪ್ರದವಾದ ಈ ಚಕ್ರತೀರ್ಥವು. ಈ ತೀರ್ಥದಲ್ಲಿ ಸ್ನಾನ ಮಾಡಿ ಬ್ರಾಹ್ಮಣರಿಗೆ ಯಾರು ಅನ್ನದಾನ ಮಾಡುವರೋ ಅವರು ಸಕಲ ದುಃಖಗಳಿಂದ ಮುಕ್ತರಾಗುವರು. ೪೮

ततो धनूर्विंशति मे विभागे तच्चक्रतीर्थं श्रवणात्सुपुण्यदम् ।
ततो महाभैरवतीर्थमुत्तमं क्षेत्राधिपो यत्र च कालभैरवः ॥ ४९ ॥

ಶ್ರವಣ ಮಾತ್ರದಿಂದ ಪುಣ್ಯಪ್ರದವಾದ ಆ ಚಕ್ರತೀರ್ಥದ ಮುಂದೆ ಇಪ್ಪತ್ತು ಧನುಷ್ಯದ ಮುಂದೆ ಮಹಾಭೈರವತೀರ್ಥವು ಇದೆ. ಇದು, ಪರಮ ಉತ್ತಮವಾದದ್ದು. ಅಲ್ಲಿ ಕ್ಷೇತ್ರಾಧಿಪತಿ ಕಾಲಭೈರವನು. ೪೯

स्नात्वा मौनी महाकाल पश्यन् मृत्यु जपत्सुधीः ॥ ५१ ॥

ಹೇ ಬ್ರಾಹ್ಮಣರೇ ! ಬುದ್ಧಿವಂತನಾದವನು ಮಹಾಪರ್ವಕಾಲದಲ್ಲಿ ಸ್ನಾನಮಾಡಿ ಮೌನವ್ರತದಿಂದ ಆಶ್ವೀನ ಮಾಸದಲ್ಲಿ ರವಿವಾರ ದಿವಸ ಸೂರ್ಯೋದಯದ ಸಮಯದಲ್ಲಿ ಕಾಲಭೈರವನನ್ನು ನೋಡುತ್ತ ಮೃತ್ಯುಂಜಯ ಮಂತ್ರವನ್ನು ಜಪಿಸಬೇಕು. ೫೧

महाकालान्महातीर्थादन्तरे चक्रतीर्थतः ।
शिवविष्णोर्महातीर्थं विशालाक्ष्यावलोकितम् ॥ ५२ ॥

ಕಾಲಭೈರವತೀರ್ಥ, ಮಹಾತಿರ್ಥ, ಚಕ್ರತೀರ್ಥ ಇವುಗಳ ಮುಂದೆ ಶಿವ, ವಿಷ್ಣು, ಮಹಾತೀರ್ಥವು ಇರುವುದು. ವಿಶಾಲಾಕ್ಷಿಯಾದ ಪಾರ್ವತಿಯಿಂದ ಅವಲೋಕಿತವಾದದ್ದು. ೫೨

अष्टम्यां च चतुर्दश्यां एकादश्यां विशेषतः ।
तिलैः स्नात्वा विशालाक्षीं विश्वेशं चैव माधवम् ॥ ५३ ॥

ಅಷ್ಟಮಿ ತಿಥಿಯಲ್ಲಿ, ಚತುರ್ದಶೀ ತಿಥಿಯಲ್ಲಿ, ವಿಶೇಷತಃ ಏಕಾದಶೀ ತಿಥಿಯಲ್ಲಿ, ವಿಶಾಲಾಕ್ಷಿಯನ್ನು, ವಿಶ್ವೇಶನನ್ನು, ಮಾಧವನನ್ನು ತಿಲ ತೈಲದಿಂದ (ಸ್ನಾನ) ಅಭಿಷೇಕ ಮಾಡಿ. ೫೩

योऽर्चयेद्बिल्वपत्रैश्च तिलमिश्रैः द्विजोत्तमाः ।
स स्वर्गे मोदते तावद्यावदिन्द्राश्चतुर्दश ॥ ५४ ॥

ಹೇ ಬ್ರಾಹ್ಮಣೋತ್ತಮರೇ ! ತಿಲಮಿಶ್ರವಾದ ಬಿಲ್ವಪತ್ರಗಳಿಂದ ಯಾರು. ಪೂಜೆಮಾಡುವರೋ ಅವರು ಚತುರ್ದಶ ೧೪ ಇಂದ್ರ ಕಲ್ಪ ಪರ್ಯಂತರ ಸಂತೋಷದಿಂದ ವಾಸಮಾಡುವರು. ೫೪

अमावास्यां रवेवारि महाकालस्य चाग्रतः ।
पितॄनुद्दिश्य यो भक्त्या गां च दद्यात्पयस्विनीम् ॥ ५५ ॥

ಕಾಲ ಭೈರವನ ಮುಂದೆ ಅಮಾವಾಸ್ಯೆ, ರವಿವಾರ ದಿವಸ, ಪಿತೃಗಳನ್ನು

यः सोमश्रवणे स्नात्वा भक्त्या विश्वेश्वराग्रतः ।
दंपत्योर्वाससी दद्यात्सोमलोकं समश्नुते ॥ ५७ ॥

ಯಾರು ವಿಶ್ವೇಶ್ವರನ ಸನ್ನಿಧಾನದಲ್ಲಿ ಭಕ್ತಿಪುರಸ್ಸರವಾಗಿ, ಶ್ರವಣ ನಕ್ಷತ್ರ, ೋಮವಾರ, ಸ್ನಾನ ಮಾಡಿ ದಂಪತೀ ಪೂಜೆ ಮಾಡಿ ವಸ್ತ್ರದಾನ ಮಾಡುವರೋ, ಅವರು ೋಮಲೋಕವನ್ನು ಕುರಿತು ಹೋಗುವರು. ೫೭

माघे स्नात्वा सिते पक्षे द्वादश्यां यः समर्चयेत् ।
माधवं मालतीपुष्पैश्चन्दनेन सुगन्धिना ॥ ५८ ॥

ಮಾಘಮಾಸ ಶುಕ್ಲಪಕ್ಷ ದ್ವಾದಶೀ ತಿಥಿಯಲ್ಲಿ ಮಾಧವನನ್ನು ಮಾಲತೀ ುಷ್ಪಗಳಿಂದಲೂ ಸುಗಂಧಯುಕ್ತ ಚಂದನದಿಂದಲೂ ಯಾರು ಪೂಜಿಸುವವರೋ. ೫೮

उपहारैश्च तांबूलैर्लक्ष्मीवान् जायते ध्रुवम् ।
माघे सिते चतुर्दश्यां रात्रौ विश्वेश्वरं हरम् ॥ ५९ ॥

ಹಾಗೂ ಉಪಹಾರಗಳಿಂದಲೂ ತಾಂಬೂಲಗಳಿಂದಲೂ ಪೂಜಿಸುವವರು ಶ್ವರ್ಯವಂತರಾಗುವರು. ಮಾಘಶುಕ್ಲ ಪಕ್ಷ ಚತುರ್ದಶೀ ದಿವಸ ರಾತ್ರಿಯಲ್ಲಿ ಶ್ವೇಶ್ವರನಾದ ಹರನನ್ನು. ೫೯

स्नापयेत्पञ्चगव्येन कुंकुमेन सुगंधिना ।
अर्चित्वा बिल्वपत्रैश्च तिलैरीशं समर्चयेत् ॥ ५९ ॥

ಪಂಚಗವ್ಯದಿಂದಲೂ ಸುಗಂಧಯುಕ್ತವಾದ ಕುಂಕುಮದಿಂದಲೂ ಪೂಜೆಮಾಡಿ ಲ್ವಪತ್ರೆಗಳಿಂದಲೂ, ತಿಲಗಳಿಂದಲೂ ಮಹಾದೇವರನ್ನು ಅರ್ಚಿಸಬೇಕು. ೫೯

यः स याति पदं शंभोरमृतं शाश्वतं द्विजाः ।
तेन दत्तं महादानं तेन ज्ञातं परात्परम् ॥ ६० ॥

ಹೇ ಬ್ರಾಹ್ಮಣರೇ ! ಅವರು ಶಾಶ್ವತವಾದ ಅಮೃತವಾದ ಶಿವಪದವಿಯನ್ನು

इत्येतत्कथितं विप्राः पापहारं सुदर्शनम् ॥ ६२ ॥

ಈ ಬ್ರಹ್ಮ ಯಜ್ಞದ ಕೊನೆಯವರೆಗೂ ಕೃಷ್ಣಾತೀರದಲ್ಲಿ ಇದ್ದುಕೊಂಡು ಯಾವಾಗಲೂ ರಕ್ಷಣೆ ಮಾಡುತ್ತಿರುವರು. ಹೇ ಬ್ರಾಹ್ಮಣೋತ್ತಮರೇ! ಇದೆಲ್ಲವೂ ನಿಮಗೆ ಹೇಳಲ್ಪಟ್ಟಿತು. ಪಾಪಪರಿಹಾರಕವಾದ ಸುದರ್ಶನವೂ, ೬೨

भैरवं च महातीर्थं विश्वेशं तदनन्तरम् ।
यः श्रुणोति नरो भक्त्या स याति परमं पदम् ॥ ६३ ॥

ಹಾಗೂ ಭೈರವತೀರ್ಥವೂ, ಮಹಾತೀರ್ಥವೂ, ಅನಂತರ ವಿಶ್ವೇಶ್ವರನ ಮಾಹಾತ್ಮ್ಯವನ್ನು ಯಾರು ಭಕ್ತಿಯಿಂದ ಶ್ರವಣಮಾಡುವರೋ ಅವರು ಪರಮಶ್ರೇಷ್ಠವಾದ ಸದ್ಗತಿಯನ್ನು ಕುರಿತು ಹೋಗುವರು. ೬೩

॥ इति श्रीस्कन्दपुराणे कृष्णामाहात्म्ये भैरवतीर्थवर्णनं नाम दशमोऽध्यायः ॥

❀ ❀ ❀

## ॥ अथ एकादशोऽध्यायः ॥

स्कन्द उवाच–

अतः परं महातीर्थं धनुषां पंचविंशतौ ।
रामतीर्थं महापुण्यं श्रुणुध्वं मुनिपुङ्गवाः ॥ १ ॥

ಸ್ಕಂದನು ಹೇಳಿದನು –

ಇನ್ನು ಮೇಲೆ ಇಪ್ಪತ್ತೈದು ಧನುಸ್ಸಿನ ಅಂತರದಲ್ಲಿ "ರಾಮತೀರ್ಥವೆಂಬ" ದೊಡ್ಡ ತೀರ್ಥವಿದೆ. ಅದು ಮಹಾಪುಣ್ಯಕರವು. ಮುನಿಶ್ರೇಷ್ಠರೇ, ಕೇಳಿರಿ. ೧

कौशलेन्द्रसुतः श्रीमान् रामो नाम महाभुजः ।
पृथिव्यां चतुरन्तायां आसीत् राजा सुधार्मिकः ॥ २ ॥

द्विर्ददाति नचार्थिभ्यो रामो द्विर्नाभिभाषते ॥ ३ ॥

ಎರಡು ಸಾರೆ ಬಾಣವನ್ನು ಬಿಡುತ್ತಿರಲಿಲ್ಲ. ಆಶ್ರಿತರನ್ನು ಎರಡು ಸಾರೆ ಸ್ಥಾಪಿಸುತ್ತಿರಲಿಲ್ಲ. ಎರಡು ಸಾರೆ ಯಾಚಕರಿಗೆ ಕೊಡುತ್ತಿರಲಿಲ್ಲ. ರಾಮನು ಎರಡು ಸಾರೆ ಮಾತಾಡುತ್ತಿರಲಿಲ್ಲ. ೩

तस्य सत्याभिसन्धस्य धर्मराज्यं प्रकुर्वतः ।
यदभून्महदाश्चर्यं तच्छृणुध्वं द्विजोत्तमाः ॥ ४ ॥

ಸತ್ಯಪ್ರತಿಜ್ಞನಾದ ಆ ರಾಮನು ಧರ್ಮರಾಜ್ಯ ಮಾಡುತ್ತಿರಲು ಆಶ್ಚರ್ಯಕರವಾದ ಘಟನೆ ಏನಾಯಿತೆಂಬುದನ್ನು ಹೇಳುವೆ. ಎಲೈ ಬ್ರಾಹ್ಮಣರೇ, ಕೇಳಿರಿ. ೪

कस्यचिद् द्विजमुख्यस्य पञ्चवर्षयुतः सुतः ।
ब्रह्मचारी मृतः कस्मात् इत्यूचुः गोत्रिणो मिथः ॥ ५ ॥

ಒಬ್ಬ ಶ್ರೇಷ್ಠ ಬ್ರಾಹ್ಮಣನ ಐದು ವರ್ಷದ ಬ್ರಹ್ಮಚಾರಿ ಮಗನು ಮೃತನಾಗಲು ಏಕೆ ಹೀಗೆ ಆಯಿತು ಎಂದು ತಮ್ಮ ತಮ್ಮಲ್ಲಿಯೇ ಆ ಗೋತ್ರದಲ್ಲಿ ಹುಟ್ಟಿದವರು ಮಾತನಾಡಿದರು. ೫

तं गृहीत्वा सुतं विप्रो जयशर्मा रुदद् भृशम् ।
अयोध्यायाः महाद्वारि स्थापयित्वेदमब्रवीत् ॥ ६ ॥

ಜಯಶರ್ಮ ಎಂಬ ಬ್ರಾಹ್ಮಣನು ಅವನನ್ನು ಎತ್ತಿಕೊಂಡು ದೊಡ್ಡ ಧ್ವನಿಯಿಂದ ಅಳುತ್ತ ಅಯೋಧ್ಯಾ ಪಟ್ಟಣದ ಮಹಾದ್ವಾರದಲ್ಲಿ ಇಟ್ಟು ಹೀಗೆ ಅಂದನು. ೬

रामराम महाबाहो श्रृणु मे परमं वचः ।
यस्य राष्ट्रे महत् पापं वर्णसंकरकारकम् ॥ ७ ॥

ಹೇ ಬಾಹುಶಾಲಿಯಾದ ರಾಮನೇ, ನನ್ನ ಮಾತನ್ನು ಕೇಳು. ಯಾವನ ರಾಷ್ಟ್ರದಲ್ಲಿ ವರ್ಣಸಂಕರವನ್ನು ಉಂಟುಮಾಡುವ ಮಹಾಪಾಪವು. ೭

वर्तते तेन राजेन्द्र भवन्त्यल्पायुषो जनाः ।
न कुर्यादितरः पापं पुरे राष्ट्रे नृपालये ॥ ८ ॥

विचिन्वन् सर्वदेशेषु वनेषूपवनेषु च ।
ददृशे सह्यशीलस्य निकुञ्जे शूद्रतापसम् ॥ १० ॥

ಎಲ್ಲ ದೇಶಗಳಲ್ಲಿಯೂ, ಎಲ್ಲ ಉಪವನಗಳಲ್ಲಿಯೂ, ವನಗಳಲ್ಲಿಯೂ, ಹುಡುಕುತ್ತ, ಸಹ್ಯಾದ್ರಿಯ ಲತಾಗೃಹದಲ್ಲಿ ಒಬ್ಬ ಶೂದ್ರ ತಪಸ್ವಿಯನ್ನು ನೋಡಿದನು. ೧೦

तपता येन संघोरं धूम्रपाने कृतश्रमम् ।
तं दृष्ट्वा राघवो वीरः स्मयमानस्तदैव हि ॥ ११ ॥

ಘೋರ ತಪಸ್ಸು ಮಾಡುವ ಅವನು, ಕೇವಲ ಹೊಗೆಯನ್ನೇ ತಿನ್ನುವುದರಲ್ಲಿ ಪರಿಶ್ರಮವುಳ್ಳವನನ್ನು ನೋಡಿ, ವೀರನಾದ ರಾಮಚಂದ್ರದೇವರು, ನಿಶ್ಚಯವಾಗಿ ಆಗಲೇ ನಗುತ್ತ ಕೇಳಿದನು. ೧೧

वर्णाश्रमाणां धर्मश्च धर्माधर्मः प्रवर्तते ।
तेन रामेण संज्ञातं विप्रमृत्योर्हि लक्षणम् ॥ १२ ॥

ನೀನು ಯಾವ ವರ್ಣದವನು ? ಯಾವ ಆಶ್ರಮಧರ್ಮವನ್ನು ಆಚರಿಸುವಿ ? ಅವನು ಕೊಟ್ಟ ಉತ್ತರದಿಂದ ಬ್ರಾಹ್ಮಣ ಕುವರನ ಮರಣಕಾರಣವು ಆ ರಾಮದೇವರಿಗೆ ತಿಳಿಯಿತು. ೧೨

एवं सञ्चिन्त्य रामेण ह्येतद्धर्मं निशम्य च ।
तं घोरं तापसं हत्वा ततो रामो जगाम ह ॥ १३ ॥

ಹೀಗೆ ಯೋಚಿಸಿದ ರಾಮನು, ಅವನ ಧರ್ಮವನ್ನು ತಿಳಿದು, ಆ ಘೋರತಪಸ್ವಿಯನ್ನು ಕೂಡಲೇ ಸಂಹರಿಸಿ, ನಿರ್ಭಯವಾಗಿ ಹೊರಟನು. ೧೩

जगाम स्वपुरं रामः किञ्चिच्छङ्का समन्वितः ।
आगतः स्वपुरं तावत् चेतनां प्राप्तवान् द्विजाः ॥ १४ ॥

ಸ್ವಲ್ಪ ಶಂಕಾಯುಕ್ತನಾದವನಂತೆ ರಾಮನು, ತನ್ನ ಪಟ್ಟಣಕ್ಕೆ ಹೋದನು. ಅವನು

ಇದೇನೆಂದು (ಅವನು ಸಾಯುವುದೇನು ಇವನು ಬದುಕುವುದೇನು ?) ಕೇಳಿದನು. ೧೫

किमेतदिति सञ्चिन्त्य वसिष्ठो योगसत्तमः।
कथयामास रामाय वसिष्ठो द्विजसत्तमः ॥ १६ ॥

ಯೋಗಿಶ್ರೇಷ್ಠರಾದ ವಸಿಷ್ಠರೆಂಬ ಬ್ರಾಹ್ಮಣೋತ್ತಮರು ಇದೇನೆಂದು ಯೋಗ ದೃಷ್ಟಿಯಿಂದ ವಿಚಾರಿಸಿ ತಿಳಿದು ಹೇಳಿದರು. ೧೬

यस्त्वया निहतः पापः सलिङ्गी शूद्रतापसः।
तत्पापशान्तये राम कृष्णां पुण्यजलं व्रज ॥ १७ ॥

ಹೇ ರಾಮನೇ, ನಿನ್ನಿಂದ ಸಂಹರಿಸಲ್ಪಟ್ಟ ಆ ತಪಸ್ವಿಯು ಚಿಹ್ನ ಧರಿಸಿದ ಶೂದ್ರನು. ಆ ಪಾಪಶಾಂತಿಗಾಗಿ ಪವಿತ್ರ ನೀರುಳ್ಳ ಕೃಷ್ಣಾತೀರಕ್ಕೇ ನೀನು ಹೋಗು. ೧೭

इति श्रुत्वा मुनेर्वाक्यं रामो धर्मभृतां वरः।
जगाम सह्यजां पुण्यां ब्रह्मसत्रं यतोऽभवत् ॥ १८ ॥

ಧರ್ಮದಾರಿಗಳಲ್ಲಿ ಶ್ರೇಷ್ಠನಾದ ಆ ರಾಮನು ಮುನಿಗಳ ಈ ಮಾತನ್ನು ಕೇಳಿ ಸಹ್ಯಾದ್ರಿಯಲ್ಲಿ ಉಗಮವಾದ ಪವಿತ್ರ ನೀರುಳ್ಳ ಕೃಷ್ಣಾನದಿಗೆ ಬ್ರಹ್ಮದೇವರು ಎಲ್ಲಿ ಯಜ್ಞಮಾಡಿದರೋ ಅಲ್ಲಿಗೆ ಹೋದನು. ೧೮

कृष्णानद्यां धनुष्कोट्यां रामतीर्थं तदुच्यते।
महाकालात् महास्थानात् धनुषां पंचविंशति ॥ १९ ॥

ಕೃಷ್ಣಾನದಿಯಲ್ಲಿ ಧನುಷ್ಕೋಟಿಯಲ್ಲಿ ಅದಕ್ಕೆ ರಾಮತೀರ್ಥವೆಂದು ಹೆಸರು. ಮಹಾಕಾಲವೆಂಬ ಮಹಾಸ್ಥಾನದಿಂದ ಇಪ್ಪತ್ತೈದು ಧನುಸ್ಸಿನ ಅಂತರದಲ್ಲಿ ಇದೆ. ೧೯

स्नानार्थं पञ्चकुण्डानि रामश्चक्रे कुतूहलात्।
तस्मिन् तीर्थे महापुण्ये स्नात्वा रामो महायशाः ॥ २० ॥

ಶ್ರೀರಾಮನು ಕುತೂಹಲದಿಂದ ಸ್ನಾನಕ್ಕಾಗಿ ಐದು ಕುಂಡಗಳನ್ನು ಮಾಡಿದನು. ಮಹಾಕೀರ್ತಿಶಾಲಿಯಾದ ರಾಮನು ಪುಣ್ಯಕರವಾದ ಆ ಮಹಾತೀರ್ಥಗಳಲ್ಲಿ ಸ್ನಾನ ಮಾಡಿ. ೨೦

गोलक्षप्रदानं ...

कार्तिक्यां कृत्तिकायोगे स्नात्वा रामेशसन्निधौ ॥ २२ ॥

ಹನ್ನೆರಡು ವರ್ಷ ವ್ರತಮಾಡಿದ ಫಲವನ್ನು ಪಡೆಯುವನು. ಇದರಲ್ಲಿ ಸಂದೇಹ ವಿಲ್ಲ. ಯಾವ ಮನುಷ್ಯನು ಕೃತ್ತಿಕಾಯೋಗವಿದ್ದ ಕಾರ್ತಿಕ ಮಾಸದಲ್ಲಿ ರಾಮೇಶನ ಸನ್ನಿಧಿಯಲ್ಲಿ ಸ್ನಾನಮಾಡಿ, ೨೨

यः करोति नरः श्राद्धं भक्त्या पिण्डांश्च निर्वपेत् ।
प्रीणन्ति पितरस्तस्य सप्तसप्त च सप्त च ॥ २३ ॥

ಭಕ್ತಿಯಿಂದ ಶ್ರಾದ್ಧಮಾಡಿ, ಪಿಂಡಪ್ರದಾನ ಮಾಡುವನೋ, ಅವನ ಇಪ್ಪತ್ತೊಂದು ಪಿತೃಗಳು ಪ್ರೀತರಾಗುತ್ತಾರೆ. ೨೩

इति पुण्यतमं पुंसां रामतीर्थं मयोदितम् ।
यः श्रृणोति नरो भक्त्या स पुण्यं लभते गतिम् ॥ २४ ॥

ಹೀಗೆ ಮನುಷ್ಯರಿಗೆ ಪುಣ್ಯಕರವಾದ ರಾಮತೀರ್ಥದ ಮಹಿಮೆ ನಾನು ಹೇಳಿದ್ದೇನೆ. ಇದನ್ನು ಯಾವ ಮನುಷ್ಯನು ಭಕ್ತಿಯಿಂದ ಕೇಳುತ್ತಾನೋ ಅವನು ಪುಣ್ಯಗತಿಯನ್ನು ಹೊಂದುತ್ತಾನೆ. ೨೪

॥ इति श्रीस्कन्दपुराणे कृष्णामाहात्म्ये रामतीर्थवर्णनं नाम
एकादशोऽध्यायः ॥

❀ ❀ ❀

## ॥ अथ द्वादशोऽध्यायः ॥

स्कन्द उवाच –

ततो दण्डशतं पुण्यं जाह्नवीतीर्थमुत्तमम् ।
महापापक्षयकरं श्रुणुध्वं मुनिसत्तमाः ॥ १ ॥

ಷಣ್ಮುಖನು ಹೇಳುವನು –

मातेव वत्सला गङ्गा कदाचित् तं न मुञ्चति ।
तस्य पुत्रो महाविद्वान् भीमशर्मेति विश्रुतः ॥ ३ ॥

ತಾಯಿಯಂತೆ ಪ್ರೇಮವುಳ್ಳ ಭಾಗೀರಥಿಯು ಅವನನ್ನು ಯಾವಾಗಲೂ ಬಿಡುತ್ತಿರಲಿಲ್ಲ. ಅವನ ಮಗ ಮಹಾಜ್ಞಾನಿ. ಭೀಮಶರ್ಮಾ ಎಂದು ಪ್ರಖ್ಯಾತನಿದ್ದ. ೩

तर्ककर्कशधीर्नित्यं विप्राञ्जयति जल्पने ।
अहमेव क्षितौ विद्वान् न द्वितीयोऽस्ति कश्चन ॥ ४ ॥

ತರ್ಕಶಾಸ್ತ್ರದ ಅಭ್ಯಾಸದಿಂದ ಕಠೋರವಾದ ಬುದ್ಧಿಯುಳ್ಳ ಅವನು ವಾದದಲ್ಲಿ ಬ್ರಾಹ್ಮಣರನ್ನು ಗೆಲ್ಲುತ್ತಿದ್ದನು. ಭೂಮಿಯಲ್ಲಿ ನಾನೊಬ್ಬನೇ ಪಂಡಿತನು, ನನ್ನ ಸಮ ಇನ್ನೊಬ್ಬನಿಲ್ಲ. ೪

इति विप्रसभां गत्वा हसते वदते चिरम् ।
कदाचिद् द्विपदां वन्द्यं उपमन्युं जहास सः ॥ ५ ॥

ಹೀಗೆ ಬ್ರಾಹ್ಮಣರ ಸಭೆಗೆ ಹೋಗಿ ನಗುತ್ತ ಬಹಳ ಮಾತಾಡುತ್ತಿದ್ದನು. ಒಮ್ಮೆ ಮನುಷ್ಯರಿಂದ ವಂದ್ಯನಾದ ಉಪಮನ್ಯು ಎಂಬವನನ್ನು ಅವನು ಅಪಹಾಸ ಮಾಡಿದನು. ೫

शप्तस्तेनातिक्रुद्धेन जम्बुको भव जल्पनात् ।
इति श्रुत्वा मुनेर्वाक्यं भीमशर्मा सवेपथुः ॥ ६ ॥

ಅತ್ಯಂತ ಸಿಟ್ಟಿಗೆದ್ದ ಅವನು ಹೀಗೆ ಮಾತಾಡುವ ನೀನು ನರಿಯಾಗು ಎಂದು ಶಾಪ ಕೊಟ್ಟನು . ಆ ಮುನಿಯ ಶಾಪವಾಣಿಯನ್ನು ಕೇಳಿದ ಭೀಮಶರ್ಮನು ನಡಗುತ್ತ, ೬

प्रसाद्य तं मुनिश्रेष्ठं प्रोवाचेदं पुनः पुनः ।
धिःकृता ब्राह्मणाः नित्यं विद्यामदिरमत्तया ॥ ७ ॥

ಪುನಃ ಪುನಃ ಶ್ರೇಷ್ಠ ಮುನಿಯನ್ನು ಪ್ರಸನ್ನೀಕರಿಸಿಕೊಂಡು ಹೀಗೆಂದನು. ವಿದ್ಯೆ,

ಕ್ಷಮಿಸಿರಿ. ನಿಮ್ಮ ಆ ಘೋರವಾದ ತಪಸ್ಸು, ಸಾಮರ್ಥ್ಯ ಇವುಗಳನ್ನು ತಿಳಿಯಲಿಲ್ಲ. ೮

साधूनां चित्तवैक्लव्यात् सर्वं दहति सान्वयम् ।
दुर्जनानां स्वभावोऽयं परपीडाकरस्सदा ॥ ९ ॥

ಸಜ್ಜನರ ಚಿತ್ತಕ್ಷೋಭವು ಕುಲದಿಂದ ಕೂಡಿಕೊಂಡ ಎಲ್ಲವನ್ನು ಸುಡುತ್ತದೆ. ಯಾವಾಗಲೂ ಪರರನ್ನು ಪೀಡಿಸುವದು ದುರ್ಜನರ ಸ್ವಭಾವವು. ೯

दृश्यन्ते दुर्गुणास्तावत् तावद्गर्जन्ति पातकम् ।
यावन्नोपासितं सम्यक् साधोश्चरणपङ्कजम् ॥ १० ॥

ಎಲ್ಲಿಯವರೆಗೆ ನಾವು ಸಾಧುಗಳ ಚರಣಕಮಲಗಳನ್ನು ಆರಾಧಿ ಸುವದಿಲ್ಲವೋ. ಅಲ್ಲಿಯ ವರೆಗೆ ದುರ್ಗುಣಗಳು ಕಾಣುವವು, ಅಲ್ಲಿಯ ವರೆಗೆ ಪಾಪಗಳು ಗರ್ಜಿಸುವವು, ೧೦

दृष्टे स्पृष्टे यदा साधोः पादपङ्कजमञ्जसा ।
क्षीयन्ते तानि पापानि यान्ति कर्माणि पुण्यताम् ॥ ११ ॥

ಸಜ್ಜನರ ಚರಣಕಮಲವನ್ನು ನಾವು ಚನ್ನಾಗಿ ನೋಡಿದಲ್ಲಿ ಅಥವಾ ಸ್ಪರ್ಶಮಾಡಿದಲ್ಲಿ ಆ ಎಲ್ಲ ಪಾಪಗಳು ನಾಶವಾಗುವದಲ್ಲದೇ ದುಷ್ಕರ್ಮಗಳು ಪುಣ್ಯರೂಪಗಳಾಗುವವು. ೧೧

प्रणम्य दण्डवद्भूमौ विशापं कुरु मां मुने ।
इत्युक्तः कृपया सद्यो ह्युपमन्युरुवाच तम् ॥ १२. ॥

ಹೀಗೆ ಹೇಳುತ್ತ ಸಾಷ್ಟಾಂಗ ನಮಸ್ಕಾರ ಮಾಡಿ, ತಾಪದಿಂದ ಮುಕ್ತನನ್ನಾಗಿ ಮಾಡಿ, ಎಂದು ಹೇಳಿಕೊಂಡ ಉಪಮನ್ಯು ಎಂಬವರು ಕೂಡಲೇ ಕೃಪಾದಿಂದ ಅವನಿಗೆ ಅಂದರು. ೧೨

न मयोक्तं वृथा क्वापि सञ्जातं मुनिपुत्रक ।
सद्यस्त्वयानुतप्तेन प्रणम्याहं प्रसादितः ॥ १३ ॥

ಎಲೆ ಮುನಿಪುತ್ರನೇ! ನಾನು ಅಂದದ್ದು ಎಲ್ಲಿಯೂ ವ್ಯರ್ಥವಾಗಿಲ್ಲ. ಕೂಡಲೇ

ಹೋಗುವುದಿಲ್ಲ. ದೇವಾನುಗ್ರಹಪಾತ್ರರಾದ ಅಗಸ್ತ್ಯ ಎಂಬ ಮುನಿಗಳನ್ನು ನೀನು ಯಾವಾಗ ನೋಡುವಿಯೋ. ೧೪

तं प्रसादय विप्र त्वं स ते मोक्षं विधास्यति ।
इत्युक्तो मुनिना सद्यः गोमायुरभवत्क्षणात् ॥ १५ ॥

ಆಗ ಅವರನ್ನು ನೀನು ಪ್ರಸನ್ನೀಕರಿಸಿಕೋ. ಅವರು ನಿನಗೆ ಈ ಶಾಪದಿಂದ ಮುಕ್ತಿಯನ್ನುಂಟು ಮಾಡುವರು. ಹೀಗೆ ಆ ಮುನಿಗಳು ಹೇಳಿದಕೂಡಲೇ ಅವನು ಅದೇ ಕ್ಷಣದಲ್ಲಿ ನರಿಯಾದನು. ೧೫

संस्मरन् स्वकृतं पापं ब्रह्मत्वं विलयं गतम् ।
वनाद्वनं स बभ्राम पर्वतात् पर्वतान्तरं ॥ १६ ॥

ಬ್ರಾಹ್ಮಣ್ಯವನ್ನು ಕಳೆದುಕೊಂಡು ತಾನು ಮಾಡಿದ ಪಾಪವನ್ನು ಸ್ಮರಿಸುತ್ತ ವನದಿಂದ ವನಕ್ಕೆ ಪರ್ವತದಿಂದ ಪರ್ವತಕ್ಕೆ ತಿರುಗಿದನು. ೧೬

इत्थं हि भ्रमता तेन दृष्टोऽगस्त्यः कृपानिधिः ।
प्रणम्य शिरसा भक्त्या अगस्त्यं मुनिसत्तमम् ॥ १७ ॥

ಹೀಗೆ ತಿರುಗುವ ಅವನು ಕೃಪಾನಿಧಿಗಳಾದ ಅಗಸ್ತ್ಯರನ್ನು ನೋಡಿದನು. ಶ್ರೇಷ್ಠ ಮುನಿಗಳಾದ ಆ ಅಗಸ್ತ್ಯರನ್ನು ಭಕ್ತಿಯಿಂದ ಶಿರಸಾ ನಮಿಸಿ. ೧೭

उपमन्युप्रसादेन जातिस्मरणहेतुना ।
हसन् प्रोवाच गोमायुं कस्त्वं किं ते चिकीर्षितम् ॥ १८ ॥

ಉಪಮನ್ಯು ಎಂಬವರ ಅನುಗ್ರಹದಿಂದ ಜನ್ಮಾಂತರ ಸ್ಮರಣವಿರುವ ಆ ನರಿಯನ್ನು ನೋಡಿ ನಗುತ್ತ ಅಗಸ್ತ್ಯರು ನೀನು ಯಾರು ?ನೀನೇನು ಮಾಡಬಯಸುವೆ ? ಎಂದು ಅಂದರು. ೧೮

इत्याकर्ण्य मुनेर्वाक्यं अश्रुपूर्णाकुलेक्षणः ।
जम्बूको निजगादेदं स्ववृत्तान्तं निवेद्य च ॥ १९ ॥

ತಪಸ್ವಿಗೆ ನಿಧಿಯಾದ ಉಪಮನ್ಯು ಎಂಬುವರ ಕೋಪದಿಂದ ಈ ಶಾಪವು ನನಗೆ ದೊರೆಯಿತು. ಅವರ ವಾಕ್ಯಾಮೃತದಿಂದ ನನಗೆ ಶಾಪ ಹೋಗುವ ರೀತಿಯೂ ತಿಳಿದಿದೆ. ೨೦

दुःखप्राप्तं मया स्वामिन् इदानीं सुखमेधते ।
तव दर्शनसञ्जातात् साधोश्चरणदर्शनात् ॥ २१ ॥

ಸ್ವಾಮೀ, ನನಗೆ ಹಿಂದೆ ದುಃಖವಾಯಿತು. ಈಗ ಸಾಧುಗಳಾದ ನಿಮ್ಮ ಚರಣ ಸಂದರ್ಶನದಿಂದ ಆನಂದವೂ ಹೆಚ್ಚುತ್ತಿದೆ. ೨೧

तद्विमृश्यधियागस्त्यो जंबूकं प्राह सत्वरः ।
अस्ति प्राच्यां दिशि महान् सह्याद्रिः पर्वतोत्तमः ॥ २२ ॥

ಅಗಸ್ತ್ಯರು ಅದನ್ನು ಬುದ್ಧಿಯಿಂದ ವಿಮರ್ಶಿಸಿ ಕೂಡಲೇ ನರಿಗೆ ಅಂದರು. ಪೂರ್ವದಿಕ್ಕಿನಲ್ಲಿ ಶ್ರೇಷ್ಠ ಪರ್ವತವಾದ ದೊಡ್ಡ ಸಹ್ಯಾದ್ರಿ ಎಂಬ ಪರ್ವತವಿದೆ. ೨೨

वैकुण्ठस्य तनुः साक्षात् तस्मात् शैलात् विनिर्गता ।
कृष्णवेणीति विख्याता शापतापापहा स्मृता ॥ २३ ॥

ಆ ಪರ್ವತದಿಂದ ಹೊರಟ ಸಾಕ್ಷಾತ್ ಭಗವಂತನ ಮೂರ್ತಿಯಾದ ಶಾಪ ಮೊದಲಾದವುಗಳನ್ನು ದೂರಮಾಡುವ ಕೃಷ್ಣವೇಣೀ ಎಂಬ ಪ್ರಸಿದ್ಧವಾದ ನದಿ ಇರುತ್ತದೆ. ೨೩

तस्यां स्नात्वा च पीत्वा च शापान्मुक्तो भविष्यसि ।
तस्मात् त्वं गच्छ तत्रापः पीत्वा मुक्तो भवाचिरम् . २४ ॥

ಅದರಲ್ಲಿ ಸ್ನಾನ ಮಾಡಿ ಆ ಜಲವನ್ನು ಕುಡಿದು ನೀನು ಶಾಪದಿಂದ ಮುಕ್ತನಾಗುವಿ. ಆದ್ದರಿಂದ ನೀನು ಅಲ್ಲಿ ಹೋಗು. ಆ ನೀರನ್ನು ಕುಡಿದು ಬೇಗನೆ ಶಾಪಮುಕ್ತನಾಗು. ೨೪

इति वाक्यं मुनेः श्रुत्वा प्रणम्य च पुनः पुनः ।
आगत्य तृषितः कृष्णां पीत्वापः शुचितां हयात् ॥ २५ ॥

दाल्भ्य: स्नेहाकुल: कृष्णां समायात: सुधार्मिक: ।
तत: स विस्मयाविष्टो दृष्ट्वा कृष्णां महानदीम् ॥ २७ ॥

ಧಾರ್ಮಿಕರಾದ ದಾಲ್ಭ್ಯ ಎಂಬುವರು ಸ್ನೇಹದಿಂದ ವ್ಯಾಕುಲರಾಗಿ ಕೃಷ್ಣಾನದಿಗೆ ಬಂದರು. ಆಶ್ಚರ್ಯಯುಕ್ತರಾದ ಅವರು ಕೃಷ್ಣಾನದಿಯನ್ನು ನೋಡಿ. ೨೭

अहो कृष्णा महाधन्या धन्यैरेवावलोक्यते ।
पुन:पुनरुवाचेदं दृष्ट्वा पुत्रं सुवर्चसम् ॥ २८ ॥

ಆಮೇಲೆ, ಕೃಷ್ಣಾನದಿಯು ಮಹಾಧನ್ಯವಾದದ್ದು. ಭಾಗ್ಯಶಾಲಿಗಳೇ ಇದನ್ನು ನೋಡುತ್ತಾರೆ. ಎಂದು ಒಳ್ಳೆ ಕಾಂತಿಯಿಂದ ಯುಕ್ತನಾದ ಮಗನನ್ನು ನೋಡಿ ಮತ್ತೆ ಮತ್ತೆ ಹೀಗೆಂದನು. ೨೮

गते दिनशते विप्रा: गङ्गामातेव वत्सला ।
दाल्भ्यं दृष्टुं समायात: भक्त्या तेन सुसेविता ॥ २९ ॥

ಎಲೈ ಬ್ರಾಹ್ಮಣರೇ ! ನೂರು ದಿನ ಹೋಗುತ್ತಿರಲಾಗಿ ತಾಯಿಯಂತೇ ಸ್ನೇಹವುಳ್ಳ ಗಂಗಾದೇವಿಯು ದಾಲ್ಭ್ಯರನ್ನು ಕಾಣಬೇಕೆಂದು ಅವರ ಭಕ್ತಿವಶಳಾಗಿ ಬಂದಳು. ೨೯

रामकुण्डाद्दण्डशतं चाग्रे रामाश्रमाग्रत: ।
प्रसृतं तत्र तद्भक्त्या जाह्नवीस्रोतसांप्रतम् ॥ ३० ॥

ರಾಮಕುಂಡದಿಂದ ನೂರು ದಂಡವ ಮುಂದೆ ರಾಮಾಶ್ರಮದ ಎದುರಿಗೆ ಅವರ ಭಕ್ತಿವಶಳಾಗಿ ಗಂಗಾದೇವಿಯು ನೂರಾರು ವಿಭಾಗಗಳಿಂದ ವ್ಯಕ್ತಳಾದಳು. ೩೦

तत्र जातं महातीर्थं कृष्णायां जह्नुनिर्मितम् ।
भीमकुण्डमिति ख्यातं स्नानात् चांद्रायणं स्मृतम् ॥ ३१ ॥

ಕೃಷ್ಣಾದಲ್ಲಿ ಜಾಹ್ನವಿಯ ಆಗಮನದಿಂದ ನಿರ್ಮಿತವಾದ ಒಂದು ತೀರ್ಥ, ಅದಕ್ಕೆ ಭೀಮಕುಂಡವೆಂಧು ಹೆಸರು. ಸ್ನಾನ ಮಾಡಿದರೆ ಚಾಂದ್ರಾಯಣದ ಫಲವನ್ನು ಕೊಡುವುದು. ೩೧

ಕಾರ್ತಿಕದಲ್ಲಿ ರಾಮಸೇತುವಿನಲ್ಲಿ ಸ್ನಾನ ಮಾಡಿದರೆ ಏನು ಫಲವೋ, ಜಾಹ್ನವಿ ಸಂಗಮದಲ್ಲಿ ಸೋಮವಾರ ಶ್ರವಣಾ ನಕ್ಷತ್ರವಿದ್ದದಿನ ಸ್ನಾನ ಮಾಡಿದರೆ ಆ ಫಲ ಬರುವುದು. ಹೀಗೆ ಭೀಮೇಶ್ವರ ಎಂಬ ತೀರ್ಥವು ಜಾಹ್ನವೀ ಸಂಗಮದಿಂದ ಉಂಟಾಗಿದೆ. ೩೨–೩೩

य: श्रृणोति नरो भक्त्या स याति परमां गतिम्।
ब्रह्मसत्रान्तरे विप्रा: तीर्थं ब्रह्महृदं तत: ॥ ३४ ॥

ಯಾವ ಮನುಷ್ಯನು ಭಕ್ತಿಯಿಂದ ಕೇಳುವನೋ ಅವನು ಉತ್ತಮಗತಿಯನ್ನು ಹೊಂದುವನು. ಎಲೈ ಬ್ರಾಹ್ಮಣರೇ! ಬ್ರಹ್ಮಸತ್ರಾನಂತರದಲ್ಲಿ ಬ್ರಹ್ಮಹ್ರದ ಎಂಬ ತೀರ್ಥವಿದೆ. ೩೪

यत्र ब्रह्मा स्वयं देवै: पूजितो ब्रह्मणा स्वयम्।
तस्मिन् सत्रे ब्रह्मपात्रे होमे वृत्तेऽमृतप्रदे ॥ ३५ ॥

ಎಲ್ಲ ದೇವತೆಗಳಿಂದ ಪೂಜಿತನಾದ, ಬ್ರಹ್ಮನಿಂದಲೂ ಪೂಜಿತನಾದ ಸ್ವತಃ ಶ್ರೀಹರಿಯು, ಮೋಕ್ಷಪ್ರದವಾದ ಹೋಮವು ಆ ಬ್ರಹ್ಮಸತ್ರದಲ್ಲಿ ನಡೆದಿರಲು, ೩೫

विष्णुसत्रे वेदमन्त्रे गायत्र्या: प्राप्यते पदम्।
पूर्णाहुतौ प्रवृत्तायां विश्वेश: स्वयमुत्थित: ॥ ३६ ॥

ಆ ವಿಷ್ಣುಸತ್ರದಲ್ಲಿ ವೇದ ಮಂತ್ರಗಳಲ್ಲಿ ಶ್ರೇಷ್ಠವಾದ ಗಾಯತ್ರಿಯಿಂದ ಶ್ರೇಷ್ಠಸ್ಥಾನವು ಪ್ರಾಪ್ತವಾಗುವುದು. ಪೂರ್ಣಾಹುತಿಯು ನಡೆಯುತ್ತಿರಲು ಜಗತ್ತಿಗೆ ಒಡೆಯನಾದ ಶ್ರೀಹರಿಯು ಅಲ್ಲಿ ಆವಿರ್ಭೂತನಾದನು. ೩೬

गृहीत्वाऽमृतसंपूर्णं पात्रं तत्र मनोरमम्।
बालसूर्यप्रतीकाशं जांबूनदनिभं हरि: ॥ ३७ ॥

ಅಮೃತದಿಂದ ಪೂರ್ಣವಾದ ಮನೋಹರವೂ ಬಾಲಸೂರ್ಯನಂತೆ ಹೊಳಪುಳ್ಳ ಸುವರ್ಣಪಾತ್ರೆಯನ್ನು ಸ್ವೀಕರಿಸಿದ ಹರಿಯು, ೩೭

अर्पयामास गायत्रीसहितायाब्जयोनये।

किं करोमीति गायत्री मुखमेवावलोकयन् ॥ ३९ ॥

ಗಾಯತ್ರೀ ಮುಖವನ್ನು ನೋಡುತ್ತ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಬ್ರಹ್ಮ ದೇವರು ಆನಂದರೂಪಳಾದ ಕೃಷ್ಣೆಯನ್ನು ನೋಡಿ, ಏನು ಮಾಡಲಿ ?ಎಂದು ಕೇಳಿದರು. ೩೯

**सा चाह महती ब्रह्मन् ब्रह्माऽमृतमयः शिवः ।**
**सर्वोपनिषदां वेद्यः सर्वकर्मफलप्रदः ॥ ४० ॥**

ಆಗ ಮಹಾನುಭಾವಳಾದ ಆ ಗಾಯತ್ರಿಯು, ಪೂಜ್ಯರೇ! ಇವನು ಅಮೃತ ರೂಪಿಯಾದ ಶಿವನು. ಎಲ್ಲ ಉಪನಿಷತ್ತುಗಳಿಂದ ವೇದ್ಯನೂ, ಎಲ್ಲ ಕರ್ಮಗಳಿಗೂ ಫಲ ಕೊಡುವವನೂ ಇದ್ದಾನೆ. ೪೦

**पीयूषरूपी भगवान् कृष्णातीरे प्रतिष्ठितः ।**
**इत्युक्तं छंदसां मातुः समाकर्ण्य विधिर्मुदा ॥ ४१ ॥**

ಈ ಅಮೃತರೂಪಿಯಾದ ಭಗವಂತನನ್ನು ಕೃಷ್ಣಾತೀರದಲ್ಲಿ ಸ್ಥಾಪಿಸಿರಿ. ಹೀಗೆ ಎಲ್ಲ ಛಂದಸ್ಸುಗಳಿಗೆ ತಾಯಿಯಂತಿದ್ದ ಗಾಯತ್ರಿಯ ಮಾತುಗಳನ್ನು ಕೇಳಿ ಬ್ರಹ್ಮದೇವರು ಸಂತೋಷದಿಂದ. ೪೧

**समानीय ऋषीन् देवान् वेदान् साङ्गान् सहागमैः ।**
**अघोरं संपुटीकृत्य हुंकारेण सहायवान् ॥ ४२ ॥**

ದೇವತೆಗಳು, ಋಷಿಗಳು, ವೇದಾಭಿಮಾನಿ ದೇವತೆಗಳು, ವೇದಾವಯವ ಶಿಕ್ಷಾದ್ಯಭಿಮಾನಿಗಳು, ಆಗಮಾಭಿಮಾನಿಗಳು, ಅವರಿಂದ ಕೂಡಿ ಅಘೋರ ಎಂಬ ಮಂತ್ರವನ್ನು ಹುಂಕಾರದಿಂದ ಸಂಪುಟೀಕರಣಮಾಡಿ. ೪೨

**तं प्रतिष्ठापयामास ब्रह्माऽमृतमयं शिवम् ।**
**तत्र देवाः सगन्धर्वाः ऋषयः पितृभिः सह ॥ ४३ ॥**

ಅಮೃತರೂಪಿಯಾದ ಆ ಶಿವನನ್ನು ಬ್ರಹ್ಮದೇವರು ಪ್ರತಿಷ್ಠೆಮಾಡಿದರು. ಅಲ್ಲಿ ದೇವತೆಗಳು, ಗಂಧರ್ವರು, ಋಷಿಗಳು, ಪಿತೃಗಳಿಂದ ಕೂಡಿಕೊಂಡು, ೪೩

[illegible]

ಅವಭೃತ ಸಮಯದಲ್ಲಿ ಸರ್ವಸ್ವದಕ್ಷಿಣೆ ಜರುಗುತ್ತಿರಲು ಶಂಖ, ದುಂದುಭಿ ಮೊದಲಾದ ವಾದ್ಯಗಳ ಮಂಗಲ ಧ್ವನಿಯು ಆಗುತ್ತಿರಲು. ೪೫

तत्रोचुः मुनयः सर्वेऽभिषेकार्थं सरस्वतीम् ।
वंशाग्रेणानयामास पुण्यगर्भां सरस्वतीम् ॥ ४६ ॥

ಆಗ ಎಲ್ಲ ಮುನಿಗಳು ಅಭಿಷೇಕಕ್ಕಾಗಿ ಸರಸ್ವತಿಗೆ ಅಂದರು. ಬಿದಿರಿನ ಅಗ್ರ ಭಾಗದಿಂದ ಪುಣ್ಯಪ್ರದಳಾದ ಸರಸ್ವತಿಯನ್ನು ತರಿಸಿದರು. ೪೬

शालां प्रदक्षिणीकृत्य सङ्गता कृष्णया मुदा ।
तत्र देवाः सगंधर्वाः सिद्धाश्च परमर्षयः ॥ ४७ ॥

ಯಜ್ಞಶಾಲೆಯನ್ನು ಸುತ್ತುಹಾಕಿ ಅವಳು ಯಾವಾಗ ಕೃಪೆಯಿಂದ ಕೂಡಿ ಕೊಂಡಳೋ ಅಲ್ಲಿ ದೇವತೆಗಳು ಗಂಧರ್ವ, ಸಿದ್ಧ, ಋಷಿಗಳಿಂದ ಕೂಡಿಕೊಂಡು, ೪೭

ब्रह्माणं स्नापयांचक्रुः गायत्र्या सहितं द्विजाः ।
तस्मिन् अवभृते वृत्ते सुस्नाते सुविधौ तदा ॥ ४८ ॥

ಗಾಯತ್ರಿಯಿಂದ ಯುಕ್ತರಾದ ಬ್ರಹ್ಮದೇವರಿಗೆ ಬ್ರಾಹ್ಮಣರು ಅವಭೃತಸ್ನಾನವಾದ ಮೇಲೆ ಸ್ನಾನ ಮಾಡಿಸಿದರು. ಆ ಒಳ್ಳೆ ಸಮಯದಲ್ಲಿ, ೪೮

देवाश्च ऋषयः सर्वे सस्नुर्भक्त्या तु सङ्गमे ।
ब्रह्मा देवैः स ऋषिभिः अमृतेशमपूजयत् ॥ ४९ ॥

ಎಲ್ಲ ದೇವತೆಗಳೂ ಋಷಿಗಳೂ ಕೂಡಿ ಭಕ್ತಿಯಿಂದ ಸಂಗಮದಲ್ಲಿ ಸ್ನಾನಮಾಡಿದರು. ದೇವತೆಗಳು ಋಷಿಗಳಿಂದ ಕೂಡಿ ಬ್ರಹ್ಮದೇವರು ಅಮೃತೇಶನನ್ನು ಪೂಜಿಸಿದರು. ೪೯

प्रतीच्यां तत्र नैऋत्यां वायव्याममृतेश्वरात् ।
वसन्ति सर्वतीर्थानि सरिद्भिः सागरैः सह ॥ ५० ॥

ಅಮೃತೇಶ್ವರನ ಪಶ್ಚಿಮ, ನೈಋತ್ಯ, ವಾಯುವ್ಯ ಈ ದಿಕ್ಕುಗಳಲ್ಲಿ ಎಲ್ಲ

ಹೀಗೆ ಬ್ರಹ್ಮದೇವರು ಪಾಪಶಾಂತಿಗಾಗಿ ಮಾಡಿದರು. ೫೧

तेषु स्नात्वा ततो ब्रह्मा पूजयित्वा महेश्वरम् ।
चक्रे नामानि देवस्य सर्वाघौघप्रशान्तये ॥ ५२ ॥

ಅವುಗಳಲ್ಲಿ ಸ್ನಾನಮಾಡಿ ಬ್ರಹ್ಮದೇವರು ಮಹೇಶ್ವರನನ್ನು ಪೂಜಿಸಿ ಎಲ್ಲ ಪಾಪಶಾಂತಿಗಾಗಿ ದೇವನಿಗೆ ನಾಮಗಳನ್ನು ಮಾಡಿದರು (ಹೆಸರಿಟ್ಟರು). ೫೨

कृते ब्रह्मामृतानन्दः त्रेतायां अमृतेश्वरः ।
द्वापरे सत्यधर्मेशाः कलौ भद्रेश्वरः स्मृतः ॥ ५३ ॥

ಕೃತಯುಗದಲ್ಲಿ ಬ್ರಹ್ಮಾಮೃತಾನಂದ ಎಂತಲೂ, ತ್ರೇತಾಯುಗದಲ್ಲಿ ಅಮೃತೇಶ್ವರ ಎಂತಲೂ, ದ್ವಾಪರದಲ್ಲಿ ಸತ್ಯಧರ್ಮೇಶ ಎಂತಲೂ, ಕಲಿಯುಗದಲ್ಲಿ ಭದ್ರೇಶ್ವರ ಎಂತಲೂ ಪ್ರಸಿದ್ಧನಾದನು. ೫೩

॥ इति श्री स्कन्दपुराणे कृष्णामाहात्म्ये भीमकुण्डवर्णनं नाम द्वादशोऽध्यायः ॥

❀ ❀ ❀

## ॥ अथ त्रयोदशोऽध्यायः ॥

ऋषयः ऊचुः –

कथं चत्वारि नामानि देवस्यैवास्य नारद ।
एतद्धितार्थं नो ब्रूहि सर्वज्ञोऽसि मतो भवान् ॥ १ ॥

**ಋಷಿಗಳು ಅಂದರು –**

ಎಲೈ ನಾರದರೇ ! ತಾವು ಸರ್ವಜ್ಞರೆಂದು ಪ್ರಖ್ಯಾತರು, ಆದ್ದರಿಂದ ನಮ್ಮೆಲ್ಲರ ಹಿತಕ್ಕಾಗಿ ಒಬ್ಬ ದೇವನಿಗೆ ನಾಲ್ಕು ಹೆಸರುಗಳು ಹೇಗೆ ಬಂದವು ಎಂಬುದನ್ನು ಹೇಳಿರಿ. ೧

नारद उवाच –

तस्मात् ब्रह्मामृतानंदः सोऽभवत् स शिवः कृते।

**कण्टकासुरतः स्वस्थाः ह्यमराः सह वासवाः ॥ ३ ॥**

ಆದ್ದರಿಂದ ಕೃತಯುಗದಲ್ಲಿ ಈ ಶಿವನು ಬ್ರಹ್ಮಾಮೃತಾನಂದ ಎಂದು ಕರೆಯಲ್ಪಡುವನು. ಇಂದ್ರನಿಂದ ಕೂಡಿದ ದೇವತೆಗಳು ಕಂಟಕಾಸುರನಿಂದ ರಕ್ಷಿತರಾದರು. ೩

**रक्षितास्तं निहत्याजौ अमृतेशस्ततोऽभवत्।**
**लुप्तः कालवशाद्धर्मो द्वापरे तु द्विजोत्तमाः ॥ ४ ॥**

ಅವನನ್ನು ಸಂಹರಿಸಿ ದೇವತೆಗಳನ್ನು ರಕ್ಷಿಸಿದ್ದರಿಂದ ಅಮೃತೇಶ ಎಂದು ಹೆಸರು ಬಂತು. ಎಲೈ ಬ್ರಾಹ್ಮಣೋತ್ತಮರೆ! ದ್ವಾಪರದಲ್ಲಿ ಕಾಲವಶದಿಂದ ಧರ್ಮಲೋಪ ವಾಗಲು, ೪

**उद्धृतो यन्मुखाद्धर्मः ततो धर्मेश्वरः शिवः।**
**तत्र पांडोः सुताः विप्राः द्वादशाब्दं महाव्रतम् ॥ ५ ॥**

ಯಾವನ ಮುಖದಿಂದ ಧರ್ಮ ಉದ್ಧೃತವಾಯಿತೋ ಆದ್ದರಿಂದ ಆ ಶಿವನಿಗೆ ಧರ್ಮೇಶ್ವರನೆಂದು ಹೆಸರು. ಎಲೈ ಬ್ರಾಹ್ಮಣರೇ! ಇಲ್ಲಿ ಪಾಂಡವರು ಹನ್ನೆರಡು ವರ್ಷಗಳವರೆಗೆ ಮಹಾವ್ರತವನ್ನು ಮಾಡಿ. ೫

**सर्वं भद्रं समापुश्च भद्रेशाः तेजसः शिवः।**
**तस्मिन् ब्रह्मामृतानंदे सर्वयज्ञफलप्रदे ॥ ६ ॥**

ಎಲ್ಲ ಮಂಗಲವನ್ನು ಪಡೆದರು. ಆದ್ದರಿಂದ ಆ ಶಿವನಿಗೆ ಭದ್ರೇಶ ಎಂದು ಹೆಸರು. ಎಲ್ಲ ಯಜ್ಞಫಲವನ್ನು ಕೊಡುವ ಆ ಬ್ರಹ್ಮಾಮೃತಾನಂದದಲ್ಲಿ, ೬

**यैः कृतं सुकृतं तेषां कल्पान्तेऽपि न हीयते।**

**ऋषयः ऊचुः–**

**कथं पाण्डोः सुताः सर्वे धर्मशीलाः महाबलाः ॥ ७ ॥**

निवृत्ते राजसूये तु धर्मसूनोर्महात्मनः ॥ ८ ॥

ಹನ್ನೆರಡು ವರ್ಷ ಹಾಗೆ ವ್ರತಮಾಡಿದರು. ಎಲೈ ನಾರದರೆ! ಅದನ್ನು ನಮಗೆ ಹೇಳಿರಿ.

**ನಾರದರು ಅಂದರು–**

ಮಹಾತ್ಮನಾದ ಧರ್ಮರಾಜನ ರಾಜಸೂಯ ಯಾಗವು ಮುಗಿಯುತ್ತಿರಲಾಗಿ, ೮

अनिष्टानि समुत्तस्थुः त्रैलोक्यान्तकराणि च ।
तान् दृष्ट्वा सुमहोत्पातान् धर्मराजो युधिष्ठिरः ॥ ९ ॥

ಮೂರು ಲೋಕಗಳ ನಾಶವನ್ನು ಸೂಚಿಸುವ ದುರ್ನಿಮಿತ್ತಗಳು ಆಗಹತ್ತಿದವು. ಧರ್ಮಪ್ರಿಯನಾದ ಯುಧಿಷ್ಠಿರನು ಆ ಮಹಾ ಉತ್ಪಾತಗಳನ್ನು ನೋಡಿ., ೯

भ्रातृंश्चैव समानीय वेदव्यासमचिन्तयत् ।
तेन धर्मात्मना ध्यातः त्रिकालज्ञो महामुनिः ॥ १० ॥

ತಮ್ಮಂದಿರನ್ನೆಲ್ಲಾ ಕರೆದು ವೇದವ್ಯಾಸರನ್ನು ಚಿಂತಿಸಿದನು. ಆ ಧರ್ಮಾತ್ಮನಾದ ರಾಜನಿಂದ ಧ್ಯಾತರಾದ ಮೂರು ಕಾಲಗಳನ್ನು ತಿಳಿದ ಮಹಾಮುನಿಗಳು. ೧೦

कृपया परयोपेतः समायातस्तदन्तिकम् ।
तमर्चयित्वा विधिवत् वेदव्यासं महामुनिम् ॥ ११ ॥

ಮಹಾಕೃಪೆಯಿಂದ ಕೂಡಿದ ವ್ಯಾಸರು ಆವನ ಹತ್ತಿರ ಬಂದರು. ಮಹಾಮುನಿಗಳಾದ ವೇದವ್ಯಾಸರನ್ನು ವಿಧಿಪೂರ್ವಕವಾಗಿ ಪೂಜಿಸಿ. ೧೧

प्रणम्य परया भक्त्या पपृच्छेदं युधिष्ठिरः ।

युधिष्ठिर उवाच–

दिव्यभौम्यन्तरिक्षाणि ह्यरिष्टान्यद्भुतानि च ॥ १२ ॥

ಮಹಾಭಕ್ತಿಯಿಂದ ನಮಿಸಿ ಯುಧಿಷ್ಠಿರನು ಇದನ್ನು ಕೇಳಿದನು.

**ಯುಧಿಷ್ಠಿರನು ಅಂದನು**

ಹೆ ಮಹಾಮುನಿಗಳೇ ! ಏಕೆ ಯಾವಾಗಲೂ ರಾಷ್ಟದಲ್ಲಿ ಆಗಹತ್ತಿವೆ.

ವ್ಯಾಸರು ಅಂದರು

ಎಲೈ ಯುಧಿಷ್ಠರನೇ ! ಈ ಆಶ್ಚರ್ಯಕರ ನಿಮಿತ್ತಗಳು ರಾಷ್ಟ್ರಗಲ್ಲಿ ಆಗುವದನ್ನು ನೋಡು. ೧೩

तन्निमित्तं जगत्सर्वं नाशमेष्यत्यसंशयम् ।
एवमुक्तस्तु मुनिना धर्मराजो युधिष्ठिरः ॥ १४ ॥

ಅವುಗಳಿಂದ ತಿಳಿದು ಬರುವದೇನೆಂದರೆ, ಈ ಎಲ್ಲ ಜಗತ್ತು ನಿಶ್ಚಯವಾಗಿ ನಾಶ ಹೊಂದುವದು. ಹೀಗೆ ಮುನಿಗಳಿಂದ ಹೇಳಿಸಿಕೊಂಡ ಧರ್ಮರಾಜನು. ೧೪

प्रत्युवाच पुनर्व्यासं कथं शान्तिर्भविष्यति ।
तमुवाच मुनिः सम्यक् भूतभव्यभविष्यद् ॥१५ ॥

ವ್ಯಾಸರಿಗೆ ಮತ್ತೆ ಅಂದನು. ಸ್ವಾಮೀ ಹೇಗೆ ಶಾಂತಿಯಾಗುವುದು ? ಆಗ ಭೂತ ಭವಿಷ್ಯಜ್ಞಾನವುಳ್ಳ ವ್ಯಾಸರು ಅವನಿಗೆ ಅಂದರು. ೧೫

द्वादशाब्दव्रतं राजन् क्रोधलोभविवर्जितः ।
चरिष्यसे त्वं राजेन्द्र ततः शान्तिर्भविष्यति ॥ १६ ॥

ಲೋಭ ಮೊದಲಾದ ದೋಷಗಳನ್ನು ಬಿಟ್ಟು, ಹೇ ರಾಜಶ್ರೇಷ್ಠನೇ ! ನೀನು ಹನ್ನೆರಡು ವರ್ಷ ವ್ರತಮಾಡಿದರೆ ಶಾಂತಿಯಾಗುವದು. ೧೬

एवमुक्तस्तु मुनिना धर्मात्मा ज्ञानयोगिना ।
दुरोदरमिषं कृत्वा जगाम तपसे वनम् ॥ १७ ॥

ಜ್ಞಾನ ಯೋಗಿಗಳಾದ ವ್ಯಾಸರಿಂದ ಹೀಗೆ ಹೇಳಿಸಿಕೊಂಡ ಧರ್ಮರಾಜನು ದ್ಯೂತವನ್ನು ನಿಮಿತ್ತ ಮಾಡಿಕೊಂಡು ತಪಸ್ಸಿಗಾಗಿ ಅರಣ್ಯಕ್ಕೆ ಹೋದನು. ೧೭

पृथिव्यां सागरान्तानि सर्वतीर्थानि यानि तु ।
कृतवान् भ्रातृभिः सार्धं कुन्त्या मात्रा समन्वितः ॥ १८ ॥

वत्सरं चा वसद्राजा सह्याद्रिशिखरे शुभे ।
कुन्त्या कृष्णां समासाद्य स्नात्वा विश्वेशसन्निधौ ॥ २० ॥

ಮಂಗಲಕರವಾದ ಸಹ್ಯಾದ್ರಿಯ ಶಿಖರದಲ್ಲಿ ಒಂದು ವರ್ಷ ಕುಂತೀಸಮೇತನಾಗಿ ಕೃಷ್ಣಾನದಿಯನ್ನು ಹೊಂದಿ ವಿಶ್ವೇಶ್ವರನ ಸನ್ನಿಧಾನದಲ್ಲಿ ಸ್ನಾನಮಾಡಿ., ೨೦

स्वनाम्ना परमं लिङ्गं स्थापयामास मुक्तिदम् ।
व्रतदानादिकं किंचित् यदपूर्णं कृतं नृभिः ॥ २१ ॥

ತನ್ನ ಹೆಸರಿನ ಮುಕ್ತಿಕೊಡುವ ಒಂದು ಶ್ರೇಷ್ಠ ಲಿಂಗವನ್ನು ಸ್ಥಾಪಿಸಿದನು. ಮನುಷ್ಯರು ವ್ರತದಾನ ಮೊದಲಾದವುಗಳನ್ನು ಅಪೂರ್ಣವಾಗಿ ಮಾಡಿದ್ದರೆ, ೨೧

तत्सर्वं पूर्णतां याति कन्याराशिस्थिते गुरौ ।
वर्षं तत्र स्थितो राजा यावत् कन्यागते गुरौ ॥ २२ ॥

ಗುರುವು ಕನ್ಯಾರಾಶಿಯಲ್ಲಿದ್ದಾಗ ಅವೆಲ್ಲವೂ ಪೂರ್ಣವಾಗುತ್ತವೆ. ಗುರುವು ಕನ್ಯಾರಾಶಿಯಲ್ಲಿದ್ದಾಗ ಒಂದು ವರ್ಷ ಪೂರ್ತಿ ರಾಜನು ಅಲ್ಲಿದ್ದನು. ೨೨

द्वादशाब्दव्रतं पूर्णं ततो भद्रमवाप सः ।
युधिष्ठिरो महाराजः सर्वपुण्यभृतां वरः ॥ २३ ॥

ಹನ್ನೆರಡು ವರ್ಷಗಳ ವ್ರತವು ಪೂರ್ಣವಾಯಿತು. ಆ ಮೇಲೆ ಧರ್ಮರಾಜನು ಕ್ಷೇಮವನ್ನು ಪಡೆದನು. ೨೩

तस्मात् भद्रेश्वरं तीर्थं सर्वसिद्धिप्रदं नृणाम् ।
यः पश्येत नरो भक्त्या तस्य पुण्यं न हीयते ॥ २४ ॥

ಆದ್ದರಿಂದ ಭದ್ರೇಶ್ವರ ಎಂಬ ತೀರ್ಥವು ಮನುಷ್ಯರಿಗೆ ಎಲ್ಲ ಸಿದ್ಧಿಯನ್ನು ಕೊಡುವದು. ಯಾವ ಮನುಷ್ಯನು ಭಕ್ತಿಯಿಂದ ನೋಡುವನೋ ಆವನ ಪುಣ್ಯವು ನಾಶವಾಗಲಾರದು. ೨೪

विलोकयति भद्रेषं सोऽमृतत्वाय कल्पते ॥ २६ ॥

ಗುರುವಾರ ಅಮಾವಾಸ್ಯಾ ದಿವಸ ಬ್ರಹ್ಮಕುಂಡದಲ್ಲಿ ಸ್ನಾನಮಾಡಿ ಯಾವ ಮನುಷ್ಯನು ಭದ್ರೇಶನನ್ನು ನೋಡುವನೋ ಅವನು ಮೋಕ್ಷಯೋಗ್ಯ ಜ್ಞಾನಾದಿಗಳನ್ನು ಪಡೆಯುವನು. ೨೬

अमासोम समायोगे व्यतीपाते तथाऽयने ।
रुद्रकुण्डे नरः स्नात्वा तर्पयेत् पितृदेवताः ॥ २७ ॥

यः स याति पदं विष्णोः नात्र कार्या विचारणा ।
कन्याराशिस्थिते जीवे स्नात्वा भद्रेशसन्निधौ ॥ २८ ॥

ಅಮಾವಾಸ್ಯಾ, ಸೋಮವಾರ, ವ್ಯತೀಪಾತ, ದಕ್ಷಿಣಾಯನ ಅಥವಾ ಉತ್ತರಾಯಣಯೋಗ ವಿದ್ದಾಗ ರುದ್ರಕುಂಡದಲ್ಲಿ ಸ್ನಾನ ಮಾಡಿ ದೇವಪಿತೃತರ್ಪಣ ಯಾರು ಮಾಡುವನೋ ಅವನು ಜ್ಞಾನದ್ವಾರಾ ವಿಷ್ಣುಲೋಕಕ್ಕೆ ಹೋಗುವನು. ಇದರಲ್ಲಿ ವಿಚಾರವೇ ಇಲ್ಲ. ಗುರುವು ಕನ್ಯಾರಾಶಿಯಲ್ಲಿ ಇದ್ದಾಗ ಭದ್ರೇಶನ ಸನ್ನಿಧಿಯಲ್ಲಿ ಸ್ನಾನಮಾಡಿ, ೨೭-೨೮

मुण्डनं चोपवासं च कृत्वा श्राद्धं करोति यः ।
पितरस्तस्य तृप्यन्ति यावद्वर्षाणि विंशतिः ॥ २९ ॥

ಕ್ಷೌರ, ಉಪವಾಸ ಮಾಡಿ, ಶ್ರಾದ್ಧವನ್ನು ಯಾರು ಮಾಡುವರೋ, ಅವರ ಪಿತೃಗಳು, ಇಪ್ಪತ್ತು ವರ್ಷಗಳವರೆಗೆ ಅವರಿಗೆ ಸಂತುಷ್ಟರಾಗುತ್ತಾರೆ. ೨೯

तस्मात् सर्वप्रयत्नेन कन्याराशिगते गुौ
कृष्णवेणीं समासाद्य प्रायश्चित्तं चरेत् सुधीः ॥ ३० ॥

ಆದ್ದರಿಂದ ಗುರುವು ಕನ್ಯಾರಾಶಿಯಲ್ಲಿದ್ದಾಗ ಸರ್ವಪ್ರಯತ್ನದಿಂದ ಜ್ಞಾನಿಯಾದವನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ೩೦

वक्तव्यं हि कृपासिंधो कृष्णामाहाम्यमुत्तमम्  ॥ ३२ ॥

**ಋಷಿಗಳು ಅನ್ನುತ್ತಾರೆ**

ರುದ್ರಪುತ್ರನೂ ಸರ್ವಜ್ಞನೂ ಆದ ಹೇ ಷಣ್ಮುಖನೇ !ಸ್ವಲ್ಪ ನಾವು ಕೇಳಬೇಕೆಂದು ಇಚ್ಛಿಸುವೆವು. ದಯಾಸಮುದ್ರನೇ ! ಉತ್ತಮ ಕೃಷ್ಣಾಮಾಹಾತ್ಮ್ಯವನ್ನು ನಮಗೆ ಹೇಳು. ೩೨

ईदृशो महिमा कस्मात् कन्याराशिगते गुरौ ।
सर्वं विस्तार्य नो ब्रूहि सेतिहासं पुरातनम्  ॥ ३३ ॥

ಗುರುವು ಕನ್ಯಾರಾಶಿಯಲ್ಲಿದ್ದಾಗ ಇಂತಹ ಮಹಿಮೆ ಏಕೆ? ಇದೆಲ್ಲವನ್ನೂ ವಿಸ್ತಾರವಾಗಿ ಪ್ರಾಚೀನ ಇತಿಹಾಸದೊಡನೆ ನಮಗೆ ಹೇಳಿರಿ. ೩೩

**स्कन्द उवाच–**

श्रुणुध्वं मुनयः सर्वे इतिहासं पुरातनम् ।
ब्रह्मनारदसंवादं पापघ्नं विस्मयावहम्  ॥ ३४ ॥

**ಸ್ಕಂದನು ಹೇಳಿದನು.**

ಎಲೈ ಎಲ್ಲ ಮುನಿಗಳಿರಾ, ಪಾಪವನ್ನು ನಾಶಮಾಡುವ, ಆಶ್ಚರ್ಯಕರವಾದ ಬ್ರಹ್ಮನಾರದರ ಸಂವಾದರೂಪವಾದ ಪ್ರಾಚೀನ ಇತಿಹಾಸವನ್ನು ಕೇಳಿರಿ. ೩೪

दिवोदासे नृपे राज्यं प्रशासति यदा द्विजाः ।
ऋषयो देवताः सर्वाः काशीं त्यक्त्वा यदा गताः  ॥ ३५ ॥

ದಿವೋದಾಸನು ಯಾವಾಗ ರಾಜ್ಯವಾಳಹತ್ತಿದನೋ ಆಗ ಬ್ರಾಹ್ಮಣರು ಋಷಿಗಳು ಎಲ್ಲ ದೇವತೆಗಳು ಕಾಶಿಯನ್ನು ಬಿಟ್ಟು ಯಾವಾಗ ಹೋದರೊ, ೩೫

विश्वेशे मंदरं याते ऋषयश्च तपोधनाः ।
तीर्थयात्राप्रसङ्गेन दाक्षिणां दिशमादरात्  ॥ ३६ ॥

ಒಳ್ಳೇ ವ್ರತ ಉಳ್ಳ ಕೆಲವರು ಒಳ್ಳೇ ತೀರ್ಥಗಳನ್ನು ಸಂಚರಿಸುತ್ತ, ೩೭

जनस्थाने स्थिताः नित्यं तपः कर्तुं समुद्यताः ।
व्यासश्च याज्ञवल्क्यश्चमाण्डव्यः सुतपास्तथौ ॥ ३८ ॥

ಜನಸ್ಥಾನದಲ್ಲಿ ಇದ್ದುಕೊಂಡು ನಿತ್ಯವೂ ತಪಸ್ಸು ಮಾಡಲು ಹೊರಟರು. ವ್ಯಾಸ, ಯಾಜ್ಞವಲ್ಕ್ಯ, ಸಮೀಚೀನ ತಪಸ್ಸುಳ್ಳ ಮಾಂಡವ್ಯ, ೩೮

शौनको जौमिनिश्चैव मार्कण्डेयोऽथ देवलः ।
पराशरो भरद्वाजो वशिष्ठः कौशिकस्तथा ॥ ३९ ॥

कश्यपो जमदग्निश्च सहपुत्रश्च वीर्यवान् ।
दत्तात्रेयो महायोगी कपिलोऽन्ये च योगिनः ॥ ४० ॥

ಶೌನಕ, ಜೈಮಿನಿ, ಮಾರ್ಕಂಡೇಯ, ದೇವಲ, ಪರಾಶರ, ಭರದ್ವಾಜ, ವಶಿಷ್ಠ, ಕೌಶಿಕ, (ವಿಶ್ವಾಮಿತ್ರ), ಕಶ್ಯಪ, ಮಕ್ಕಳಿಂದ ಕೂಡಿಕೊಂಡ, ಸಾಮರ್ಥ್ಯವುಳ್ಳ ಜಮದಗ್ನಿ, ಮಹಾಯೋಗಿಯಾದ ದತ್ತಾತ್ರೇಯ, ಕಪಿಲ, ಇನ್ನು ಕೆಲವು ಯೋಗಿಗಳು, ೩೯–೪೦

तीर्थानि चैनसोघ्नानि पर्यटन्तोऽथ सह्यजाम् ।
कृष्णावेणीं समालोक्य विश्रंभं प्राप्नुयुर्मुदा ॥ ४१ ॥

ಪಾಪನಾಶಕವಾದ ತೀರ್ಥಗಳನ್ನು ಸಂಚರಿಸುತ್ತಾ ಸಹ್ಯಾದ್ರಿಯಲ್ಲಿ ಜನಿಸಿದ ಕೃಷ್ಣವೇಣಿಯನ್ನು ನೋಡಿ ಸಂತೋಷದಿಂದ ವಿಶ್ವಾಸವನ್ನು ಹೊಂದಿದರು. ೪೧

परस्परं भाषयन्तो (वर्णयन्तो) धन्येयं भो मुनीश्वराः ।
कृष्णातीरं समासाद्य आश्रमांश्चक्रुरुद्यताः ॥ ४२ ॥

ಎಲೈ ಮುನೀಶ್ವರರೇ! ಇವಳು ಧನ್ಯಳಾದವಳು ಎಂದು ಪರಸ್ಪರವಾಗಿ ವರ್ಣಿಸುತ್ತಾ ಕೃಷ್ಣಾತೀರವನ್ನು ಹೊಂದಿ ಆಶ್ರಮಗಳನ್ನು ರಚಿಸಲು ಉದ್ಯೋಗ ಮಾಡಿದರು. ೪೨

सह्याद्र्यंतिकमायाताः कृष्णां द्रष्टुं समुत्सुकाः ।
सर्वे मिलित्वा मुनयो जान्हवीं स्तोतुमुद्यताः ॥ ४३ ॥

ಶ್ರೇಷ್ಠ ಕಾರಣ. ೪೪

एकाग्रचित्ताः अभवन् योगमार्गेण योगिनः ।
नारायणो दयावांश्च आगत्य मुनयोन्तिकम् (मुनिसन्निधिम्) ॥ ४५ ॥

ಯೋಗಿಗಳು ಯೋಗಮಾರ್ಗವನ್ನು ಆಶ್ರಯಿಸಿ ನಾರಾಯಣನನ್ನು ಧ್ಯಾನ ಮಾಡಹತ್ತಿದರು. ದಯಾಮಯನಾದ ನಾರಾಯಣನು ಮುನಿಗಳ ಹತ್ತಿರ ಬಂದು, ೪೫

वृणीध्वं मुनयो यूयं वरान्वै मनसेप्सितान् ।
देवानामपि यल्लोके दुर्लभान् प्रददामि वः ॥ ४६ ॥

ಎಲೈ ಮುನಿಗಳಿರಾ ! ಮನಸ್ಸಿಗೆ ಬಂದ ವರಗಳನ್ನು ಕೇಳಿರಿ. ದೇವಲೋಕದಲ್ಲಿ ದುರ್ಲಭವಾದವುಗಳನ್ನೂ ನಿಮಗೆ ಕೊಡುವೆನು. ೪೬.

योगिनः उचुः–

भवच्चरणयुग्मस्य दर्शनात् कृतकृत्यताम् ।
वयं प्राप्ताः तथापीश परोपकृतये गुरो ॥ ४७ ॥

**ಯೋಗಿಗಳು ಅಂದರು**

ನಿಮ್ಮ ಚರಣಯುಗಲ ದರ್ಶನದಿಂದ ನಾವು ಕೃತಕೃತ್ಯರಾಗಿದ್ದೇವೆ. ಆದರೂ ಹೇ ಸ್ವಾಮೀ ! ಎಲೈ ಗುರುವೆ ಪರೋಪಕಾರಕ್ಕಾಗಿ, ೪೭

प्रार्थयामो वरं कंचित् सेवधिः सर्वकर्मणाम् ।
त्वत्पदाम्बुजसंभूता भित्वा ब्रह्माण्डमुद्गता ॥ ४८ ॥

ಒಂದು ವರವನ್ನು ಬೇಡುತ್ತೇವೆ. ಎಲ್ಲ ಕರ್ಮಗಳಿಗೂ ನಿಧಿಯಂತೆ ಇರುವ ನಿನ್ನ ಚರಣಾಂಬುಜದಿಂದ ಬ್ರಹ್ಮಾಂಡವನ್ನು ಭೇದಿಸಿ ಹೊರಟ, ೪೮

ब्रह्मणोन्तिकमासाद्य ततो राज्ञाऽवतारिता ।
सदाशिवजटोद्भूता गंगा त्रिपथगामिनी ॥ ४९ ॥

ಗಂಗಾದೇವಿಯು ಬ್ರಹ್ಮದೇವರ ಹತ್ತರ ಬಂದಳು. ಭಗೀರಥನು ತನ್ನ ಪಿತೃಗಳ

कन्यागते देवगुरौ मूढान् सन्तारयिष्यति ।

नारायण उवाच–

श्रुणुध्वं मुनयः सर्वे भवतां काङ्क्षितं मया ॥ ५१ ॥
कर्तव्यं सर्वथा नित्यं एकाग्रेण युगे युगे ।
तदा स्मृता जान्हवी च त्रैलोक्यगुरुणांजसा ॥ ५२ ॥

ದೇವಗುರುವು ಕನ್ಯಾರಾಶಿಗೆ ಬಂದಾಗ ಮೂರ್ಖರನ್ನು ಉದ್ಧಾರ ಮಾಡುವಳು.

ನಾರಾಯಣನು ಅಂದನು.

ಎಲೈ ಮುನಿಗಳಿರಾ! ಕೇಳಿರಿ. ನಿಮ್ಮ ಇಚ್ಛೆಯನ್ನು ನಾನು ನಿಶ್ಚಯವಾಗಿಯೂ ಪ್ರತಿಯುಗದಲ್ಲಿಯೂ ಪೂರ್ಣಗೊಳಿಸುವೆ. ಹೀಗೆ ಹೇಳಿ ಮೂರು ಲೋಕಕ್ಕೂ ಗುರುವಾದ ಆ ನಾರಾಯಣನು ಭಾಗೀರಥಿಯನ್ನು ಸ್ಮರಿಸಿದನು. ೫೧–೫೨

समायाता विष्णुपदी हरेराज्ञाकरी तदा ।
गुरौ कन्यागते यामि ह्यवश्यं वचसा तव ॥ ५३ ॥

ಭಗವಂತನ ಆಜ್ಞೆಯಂತೆ ವರ್ತಿಸುವ ಭಾಗೀರಥಿಯು ಆಗ ಬಂದು ಅಂದಳು. ನಿನ್ನ ಅಪ್ಪಣೆಯಂತೆ ಗುರುವು ಕನ್ಯಾರಾಶಿಗೆ ಬಂದಾಗ ಅವಶ್ಯವಾಗಿ ಬರುವೆನು. ೫೩

नियमश्चकृतो मात्रा यावद्भूरविवायवः ।
तावद्यास्यामि भो स्वामिन् द्वादशाब्दे तु सद्गुरो ॥ ५४ ॥

ಭೂಮಿ, ಸೂರ್ಯ, ಗಾಳಿ ಇರುವವರೆಗೆ ಹನ್ನೆರಡು ವರ್ಷಕ್ಕೆ ಒಮ್ಮೆ, ಸಜ್ಜನರಿಗೆ ಗುರುವಾದ ಹೇ ಸ್ವಾಮೀ! ನಾನು ಬರುವೆ. ಈ ನಿಯಮವನ್ನು ಗಂಗಾತಾಯಿಯೇ ಮಾಡಿದಳು. ೫೪

इति श्रुत्वाऽथ मुनयः संतोषं लेभिरे ततः ।
अन्तर्धानं गतो देवः जाह्नवी यत्र संस्थिता ॥ ५५ ॥

यावत्सागर उच्चत्वं वीची संदोलिताऽभवत्।
व्यासादयस्तदा चक्रुः आश्रमान् तपसे तदा ॥ ५७ ॥

ಸಮುದ್ರ ಪರ್ಯಂತರವಾಗಿ ತರಂಗಗಳಿಂದ ಚಂಚಲಳಾಗಿ ಹೋದಳು. ವ್ಯಾಸರೇ ಮೊದಲಾದವರು ಆಗ ತಪಸ್ಸಿಗಾಗಿ ಆಶ್ರಮಗಳನ್ನು, ೫೭

उभयोस्तटयोः कृष्णवेणायाः पापशान्तये।
तस्यां स्नानं जपो होमः श्राद्धं पिण्डप्रपातनम् ॥ ५८ ॥

ಕೃಷ್ಣವೇಣಿಯ ಎರಡೂ ದಂಡೆಗಳಲ್ಲಿ ಪಾಪಶಾಂತಿಗಾಗಿ ಮಾಡಿದರು. ಆ ನದಿಯಲ್ಲಿ ಸ್ನಾನ, ಜಪ, ಹೋಮ, ಮಾಡಿ ಶ್ರಾದ್ಧಪಿಂಡ ಹಾಕುವದು, ೫೮

प्रसङ्गेन कृतं यद्धि तदानन्त्याय कल्पते।
मुण्डनं चोपवासं च हिरण्यश्राद्धमत्र ये ॥ ५९ ॥

ಪ್ರಾಸಂಗಿಕವಾಗಿ ಮಾಡಿದರೂ ಮಹಾಫಲಕ್ಕೆ ಕಾರಣವಾಗುವದು. ಕ್ಷೌರ, ಉಪವಾಸ, ಹಿರಣ್ಯಶ್ರಾದ್ಧ, ಇಲ್ಲಿ ಯಾವ ಮನುಷ್ಯರು, ೫೯

करिष्यन्ति नरा भक्त्या पितृनुद्धारयन्ति ते।
कन्यागते गुरौ यस्तु तीर्थश्राद्धं करोति वै ॥ ६० ॥

ಭಕ್ತಿಯಿಂದ ಮಾಡುವರೋ ಅವರು ಪಿತೃಗಳನ್ನು ಉದ್ಧಾರ ಮಾಡುವರು. ಗುರುವು ಕನ್ಯಾರಾಶಿಗೆ ಬಂದಾಗ ಯಾರು ತೀರ್ಥಶ್ರಾದ್ಧ ಮಾಡುವರೋ, ೬೦

पितरो द्वादशाब्दं तु तृप्तिं यान्ति न चान्यथा।
आयुरारोग्यमैश्वर्यं पुत्रपौत्रा तु सन्ततिः ॥ ६१ ॥

ಅವರ ಪಿತೃಗಳು ಹನ್ನೆರಡು ವರ್ಷ ತೃಪ್ತಿಯನ್ನು ಹೊಂದುತ್ತಾರೆ. ಇಲ್ಲವಾದರೆ ಇಲ್ಲಿ ಆಯುಷ್ಯ, ಆರೋಗ್ಯ, ಐಶ್ವರ್ಯ, ಮಕ್ಕಳ ಮೊಮ್ಮಕ್ಕಳ ಸಂತತಿ. ೬೧

वंशश्च क्षीयते तस्य तीर्थश्राद्धं विमुक्तिदम्।
न करोति यदा मूढः पितरस्तस्य दुःखिताः ॥ ६४ ॥

ಅವನ ವಂಶವು ನಾಶ ಹೊಂದುವದು. ತೀರ್ಥಶ್ರಾದ್ಧವು ಪಾಪಮುಕ್ತಿಯನ್ನು ಕೊಡುವಂತಹದು. ಯಾವ ಮೂರ್ಖನು ಅದನ್ನು ಮಾಡುವದಿಲ್ಲವೋ ಅವರ ಪಿತೃಗಳು ದುಃಖಿತರಾಗುತ್ತಾರೆ. ೬೪

तस्मात् कन्यागते कार्यं तीर्थश्राद्धं प्रयत्नतः।
श्रुत्वा युधिष्ठिरो राजा धर्मपुत्रो महायशाः ॥ ६५ ॥

ಆದ್ದರಿಂದ ಕನ್ಯಾಗತದಲ್ಲಿ ಪ್ರಯತ್ನಪುರಸ್ಸರವಾಗಿ ತೀರ್ಥಶ್ರಾದ್ಧ ಮಾಡಬೇಕು. ಧರ್ಮ ಪುತ್ರನೂ ಮಹಾಕೀರ್ತಿ ಉಳ್ಳವನೂ ರಾಜನೂ ಆದ ಯುಧಿಷ್ಠಿರನು ಇದೆಲ್ಲವನ್ನು ಕೇಳಿ, ೬೫

संवत्सरं स्थितः श्राद्धमागमे निर्गमे तथा।
कुर्वन् तदा समापेदे राज्यं चापि सुदुर्लभम् ॥ ६६ ॥

ಒಂದು ವರ್ಷ ಇದ್ದು ಗಂಗಾಗಮ, ನಿರ್ಗಮ ಎರಡರಲ್ಲಿಯೂ ಶ್ರಾದ್ಧವನ್ನು ಮಾಡಿ ಅತ್ಯಂತ ದುರ್ಲಭವಾದ ರಾಜ್ಯವನ್ನು ಪಡೆದನು. ೬೬

कन्यागते गुरौ विप्राः स्नात्वा भद्रेशसन्निधौ।
यो ददाति द्विजाग्र्येभ्यो वृत्तिमात्रां वसुन्धराम् ॥ ६७ ॥

ಎಲೈ ಬ್ರಾಹ್ಮಣರೇ ! ಗುರುವು ಕನ್ಯಾರಾಶಿಗೆ ಬಂದಾಗ ಸ್ನಾನ ಮಾಡಿ ಭದ್ರೇಶನ ಸನ್ನಿಧಾನದಲ್ಲಿ ಉತ್ತಮ ಬ್ರಾಹ್ಮಣರಿಗೆ ಜೀವನೋಪಯುಕ್ತವಾದ ಭೂಮಿಯನ್ನು ಯಾರು ಕೊಡುವರೋ, ೬೭

मध्यक्षेत्रां सुकृष्णां च यवगोधूमशालिनीम्।
सर्वपापविशुद्धात्मा सर्वभोगसमन्वितः ॥ ६८ ॥

तदन्ते सागरान्तायां राजा भवति धार्मिकः ।
ज्ञानध्यानसमायुक्तः तदन्ते शिवमाप्नुयात् ॥ ६९ ॥

ಕೊನೆಗೆ ಸಮುದ್ರ ಪರ್ಯಂತವಾದ ಭೂಮಿಗೆ ರಾಜರಾಗುವನು. ಧಾರ್ಮಿಕನೂ ಜ್ಞಾನಧ್ಯಾನ ಯುಕ್ತನೂ ಆಗಿ ಕೊನೆಗೆ ಮಂಗಲವನ್ನು ಪಡೆಯುವನು. ಅವನಿಗೆ ಪಿತೃಗಳು ಸಂತುಷ್ಟರಾಗುವರು. ಪ್ರಾಚೀನ ಋಷಿಗಳೂ, ೬೯

प्रीणन्ति पितरस्तस्य ऋषयोऽपि सनातनाः ।
देवताश्चापि तुष्टा स्युः कृष्णायां श्राद्धपिण्डतः ॥ ७० ॥

ದೇವತೆಗಳೂ ಕೂಡ ಕೃಷ್ಣಾದಲ್ಲಿ ಶ್ರಾದ್ಧಮಾಡಿ ಪಿಂಡ ಹಾಕುವದರಿಂದ ಸಂತುಷ್ಟ ರಾಗುವರು. ೭೦

ये कृष्णवेण्यां मनुजाः प्रयान्ति कन्यागते देवगुरौ प्रयत्नात् ।
ते चायुरारोग्य महाविभूतिं सधर्मसिद्धिं लभते मनुष्यः ॥ ७१ ॥

ಗುರುವು ಕನ್ಯಾರಾಶಿಯಲ್ಲಿದ್ದಾಗ ಯಾವ ಮನುಷ್ಯರು ಪ್ರಯತ್ನ ಪೂರ್ವಕವಾಗಿ ಕೃಷ್ಣಾವೇಣೀ ನದಿಗೆ ಹೋಗುವರೋ ಅವರೆಲ್ಲರೂ ಆಯುಷ್ಯ, ಆರೋಗ್ಯ, ಐಶ್ವರ್ಯ, ಧರ್ಮಸಿದ್ಧಿ ಇವುಗಳನ್ನು ಹೊಂದುತ್ತಾರೆ. ೭೧

भद्रेश्वरे पापहरे यस्तु प्राणान् परित्यजेत् ।
सर्वपापविशुद्धात्मा मोदते दिवि दैवतैः ॥ ७२ ॥

ಪಾಪನಾಶಕವಾದ ಭದ್ರೇಶ್ವರ ಸನ್ನಿಧಾನದಲ್ಲಿ ಯಾವನು ಪ್ರಾಣತ್ಯಾಗ ಮಾಡುವನೋ, ಅವನು ಎಲ್ಲ ಪಾಪಗಳಿಂದ ರಹಿತನಾಗಿ, ಶುದ್ಧಾಂತಃಕರಣ ಉಳ್ಳವನಾಗಿ, ದೇವತೆಗಳಿಂದ ಕೂಡಿ ಸ್ವರ್ಗದಲ್ಲಿ ಸಂತೋಷಪಡುವನು. ೭೨

प्राणप्रयाणपाथेयं संसारव्याधिभेषजम् ।
शरणं सर्वजन्तूनां कृष्णातीरं कलौ द्विजाः ॥ ७३ ॥

ಹೊಂದುವನು. ೭೪

॥ इति श्रीस्कन्दपुराणे कृष्णामाहात्म्ये भद्रेश्वरवर्णनं नाम त्रयोदशोऽध्याय: ॥



## ॥ अथ चतुर्दशोऽध्याय: ॥

नारद उवाच–

ततो दण्डद्विसाहस्रे सह्यजा दक्षिणे तटे ।
सङ्गता पावनी गंगा तत्र तीर्थं महाफलम् ॥ १ ॥

ನಾರದರು ಅಂದರು

ಸಹ್ಯ ಪರ್ವತದಿಂದ ಹೊರಟ ಕೃಷ್ಣಾನದಿಗೆ ಎರಡು ಸಾವಿರ ದಂಡದ ಅಂತರದಲ್ಲಿ ಪವಿತ್ರ ಗಂಗಾನದಿಯು ಕೂಡಿದೆ. ಅಲ್ಲಿಯ ತೀರ್ಥವು ಮಹಾಫಲಪ್ರದವು. ೧

तत्र स्नानं च दानं च तर्पणं श्राद्धमेव च ।
य: करोति नरो भक्त्या सर्वान् कामान् समश्नुते ॥ २ ॥

ಅಲ್ಲಿ ಸ್ನಾನದಾನಗಳನ್ನು ತರ್ಪಣ ಶ್ರಾದ್ಧಮೊದಲಾದವುಗಳನ್ನು ಯಾವ ಮನುಷ್ಯನು ಭಕ್ತಿಯಿಂದ ಮಾಡುವನೋ ಅವನು ಎಲ್ಲ ಇಷ್ಟವನ್ನು ಪಡೆಯುತ್ತಾನೆ. ೨

ततो दण्डद्विसाहस्रे तीर्थानां तीर्थमुत्तमम् ।
तत्रोभयतटं तीर्थं गोष्पदं नाम धर्मदम् ॥ ३ ॥

ಆ ಮೇಲೆ ಎರಡುಸಾವಿರ ದಂಡದ ಅಂತರದಲ್ಲಿ ಎಲ್ಲ ತೀರ್ಥಗಳಲ್ಲಿ ಶ್ರೇಷ್ಠವಾದ ತೀರ್ಥವಿದೆ. ಅಲ್ಲಿ ಎರಡೂ ತಟಕ್ಕೆ ಸಂಭಂಧಪಟ್ಟ ಗೋಷ್ಪದ ಎಂಬ ಹೆಸರಿನ ಧರ್ಮಪ್ರದವಾದ ತೀರ್ಥವಿದೆ. ೩

ऋषय ऊचु: –

गोष्पदं नाम तत्तीर्थं कथं जातं मुनीश्वर ।

नारद उवाच –

आसीत्स्वायंभुवे कल्पे वासुकिर्नाम सर्पराट्।
तस्य भार्या महाभागा नाम्ना सत्यवती सती ॥ ५ ॥

ನಾರದರು ಅಂದರು –

ಸ್ವಾಯಂಭುವಕಲ್ಪದಲ್ಲಿ ವಾಸುಕಿ ಎಂಬ ಸರ್ಪರಾಜನಿದ್ದನು. ಅವನ ಹೆಂಡತಿ ಮಹಾಭಾಗ್ಯವತಿಯಾದ ಪತಿವ್ರತೆಯಾದ ಸತ್ಯವತಿ ಎಂಬುವವಳಿದ್ದಳು. ೫

तस्याः पुत्रशतं चासीत् सुरूपं च महाबलम्।
सुतपस्त्वादि नामाढ्यं दिव्यकुण्डलभूषितम् ॥ ६ ॥

ಆಕೆಗೆ ಒಳ್ಳೇ ರೂಪ, ಬಲ ಉಳ್ಳ, ದಿವ್ಯ ಕುಂಡಲಾಲಂಕೃತರಾದ, ಸುತಪನೇ ಮೊದಲಾದ ಹೆಸರುಳ್ಳ ನೂರು ಮಕ್ಕಳಿದ್ದರು. ೬

दिव्यमाल्याम्बरधरं दिव्यकेयूरभूषितम्।
तत्कुमारशतं नित्यं सेवते हाटकेश्वरम् ॥ ७ ॥

ದೇವತಾಯೋಗ್ಯವಾದ ಮಾಲೆ, ಬಟ್ಟೆ ಇವುಗಳನ್ನು ಧರಿಸಿದ, ದೇವತಾಯೋಗ್ಯ ವಾದ ಕೇಯೂರಗಳಿಂದ ಅಲಂಕೃತರಾದ, ಆ ನೂರು ಮಂದಿ ಮಕ್ಕಳು ನಿತ್ಯದಲ್ಲಿಯೂ ಹಾಟಕೇಶ್ವರನನ್ನು ಸೇವಿಸುತ್ತಿದ್ದರು. ೭

देवीं दृष्ट्वा कुमारास्ते कदाचित् स्नातुमागताम्।
निमज्जन्तीं सखीभिस्तां बभूवुर्हृच्छयाकुलाः ॥ ८ ॥

ಒಂದು ದಿನ ಸಖಿಯರಿಂದ ಕೂಡಿ ಸ್ನಾನಕ್ಕೆ ಬಂದ, ಸ್ನಾನಮಾಡುವ ಪಾರ್ವತೀ ದೇವಿಯನ್ನು ನೋಡಿ ಕಾಮವಿಕಾರಯುಕ್ತರಾದರು. ೮

नंदी प्रोवाच तान् दृष्ट्वा वाचा धिःकारयद्रुषा।
दृष्ट्वा देवीं जगद्धात्रीं रुद्रस्य सहधर्मिणीम् ॥ ९ ॥

ಧಿಃಕ್ಕಾರವಿರಲಿ. ೧೦

तद्वाक्यादनुतप्तास्ते नन्दिनं शरणं ययुः।
तेषां दीनं वचः श्रुत्वा नन्दी प्रोवाच तान्प्रति ॥ ११ ॥

ಆ ವಾಕ್ಯದಿಂದ ಪಶ್ಚಾತ್ತಾಪ ಉಳ್ಳ ಅವರು, ನಂದಿಯನ್ನೇ ಶರಣು ಹೊಂದಿದರು. ಅವರ ದೀನ ಮಾತುಗಳನ್ನು ಕೇಳಿದ ನಂದಿಯು ಅವರನ್ನು ಕುರಿತು ಅಂದನು. ೧೧

विद्यां ब्रह्मप्रसादाद्वः पिता दिव्याद्गवां कुलात्।
आनयिष्यति शुध्यर्थं स्वर्णदारां सरस्वतीम् ॥ १२ ॥

ನಿಮ್ಮ ತಂದೆಯು, ಬ್ರಹ್ಮದೇವರ ಅನುಗ್ರಹದಿಂದ ದಿವ್ಯವಾದ ಗೋಸಮು ದಾಯದಿಂದ, ವಿದ್ಯಾರೂಪಳಾದ ಸುವರ್ಣದಂತೆ ಧಾರೆ ಉಳ್ಳ ಸರಸ್ವತಿಯನ್ನು, ನಿಮ್ಮ ಶುದ್ಧಿಗಾಗಿ ತರುವರು. ೧೨

दिवोलोकाद्रसालोकं सह्यजा गर्भतस्तलम्।
एत्य ब्रह्मरसा पूर्णा जीवितं वः प्रदास्यति ॥ १३ ॥

ದ್ಯುಲೋಕದಿಂದ ರಸಾತಲಕ್ಕೆ, ಕೃಷ್ಣಾಗರ್ಭದಿಂದ ರಸಾತಲಕ್ಕೆ ಹೋಗುವ ಬ್ರಹ್ಮನ ಅನುಗ್ರಹಪಾತ್ರಳಾದ ಅವಳು ನಿಮಗೆ ಜೀವನವನ್ನು ಕೊಡುವಳು. ೧೩

इत्युक्ता नागपुत्रास्ते नन्दिना धर्मनन्दिना।
मृतप्राया बभूवुस्ते, सद्यो निष्प्रभतां गताः ॥ १४ ॥

ಧರ್ಮದಿಂದ ಸಂತೋಷಪಡುವ ಆ ನಂದಿಯಿಂದ ಹೀಗೆ ಹೇಳಿಸಿಕೊಂಡ ಆ ನಾಗರಾಜನ ಮಕ್ಕಳು ಕೂಡಲೆ ಕಾಂತಿರಹಿತರೂ ಮೃತಪ್ರಾಯರೂ ಆದರು. ೧೪

ताम् दृष्ट्वा वासुकिः पुत्रान् अश्रुपूर्णाकुलेक्षणः।
उवाच किं कृतं पुत्रा येनाहं दुःखितो भृशम् ॥ १५ ॥

ವಾಸುಕಿಯು ಆ ಮಕ್ಕಳನ್ನು ನೋಡಿ, ಕಣ್ಣೀರಿನಿಂದ ಕೂಡಿದವನಾಗಿ, ಎಲೈ ಮಕ್ಕಳಿರಾ! ಏನು ಮಾಡಿದಿರಿ? ಇದರಿಂದ ನಾನು ಮಹಾ ದುಃಖಿತನಾದೆ. ಎಂದು ಅಂದನು. ೧೫

इत्युक्त्वा भृशसन्तप्तो हाटकेशं गतः सुधीः।

नमस्तेस्तु महादेव नमः पन्नगभूषण।
नमस्तेस्तु महारुद्र मृत्युंजय नमोस्तु ते ॥ १७ ॥

**ವಾಸುಕಿಯು ಅಂದನು –**

ಸರ್ಪ ಭೂಷಣವಾಗಿ ಉಳ್ಳ ಮಹಾರುದ್ರನೇ ! ಮೃತ್ಯುವನ್ನು ಗೆದ್ದ ಮಹಾದೇವನೇ ! ನಿನಗೆ ನಮಸ್ಕಾರವು. ೧೭

नमस्ते नीलकण्ठाय नमस्ते भक्तवत्सल।
नमः पीयूषगौराय मृत्युंजय नमोस्तु ते ॥ १८ ॥

ಭಕ್ತವತ್ಸಲನೇ, ನೀಲಕಂಠನೇ, ಅಮೃತದಂತೆ ಶುಭ್ರನೇ, ಮೃತ್ಯುಂಜಯನೇ ನಿನ್ನಗೋಸುಗ ನಮಸ್ಕಾರವು. ೧೮

नमस्ते शिवरूपाय नमस्ते कृत्तिवाससे।
नमस्ते चंद्रशिरसे मृत्युंजय नमोस्तु ते ॥ १९ ॥

ಶಿವರೂಪನೂ, ಚರ್ಮವನ್ನು ಧರಿಸಿದವನೂ, ಚಂದ್ರನನ್ನು ತಲೆಯ ಮೇಲೆ ಇಟ್ಟುಕೊಂಡ ಮೃತ್ಯುಂಜಯನೆ ! ನಿನ್ನಗೋಸುಗ ನಮಸ್ಕಾರವು. ೧೯

नमस्ते ब्रह्मरूपाय नमस्ते शिवरूपिणे।
नमस्ते रुद्ररूपाय मृत्युंजय नमोस्तु ते ॥ २० ॥

ಬ್ರಹ್ಮರೂಪನೂ, ಶಿವರೂಪನೂ ರುದ್ರರೂಪನೂ ಆದ ಮೃತ್ಯುಂಜಯನೇ ! ನಿನ್ನಗೋಸುಗ ನಮಸ್ಕಾರವು. ೨೦

इति स्तोत्रं समुच्चार्य प्रणम्य च पुनः पुनः।
त्रायस्व पार्वतीनाथ दीनोद्धार नमोस्तु ते ॥ २१ ॥

ಹೀಗೆ ಸ್ತೋತ್ರವನ್ನು ಭಕ್ತಿಯಿಂದ ಹೇಳಿ ಮತ್ತೆ ಮತ್ತೆ ನಮಸ್ಕರಿಸಿ ಹೇ ಪಾರ್ವತೀಪತೇ, ದೀನೋದ್ಧಾರನೇ ! ರಕ್ಷಿಸು, ನಿನ್ನಗೋಸುಗ ನಮಸ್ಕಾರವು. ೨೧

प्रणम्य परया भक्त्या प्रोवाचेद सदाशिवम् ॥ २३ ॥

ಹೀಗೆ ಕೃಪಾಪೂರ್ಣನಾದ ರುದ್ರನಿಂದ ಹೇಳಿಸಿಕೊಂಡ ವಾಸುಕಿಯು ಮಹಾ ಭಕ್ತಿಯಿಂದ ನಮಿಸಿ ಸದಾಶಿವನಿಗೆ ಹೀಗೆ ಅಂದನು. ೨೩

शिक्षिता नन्दिवाक्येन मृता ये च स्वकर्मणा।
ते जीवन्तु प्रसादात्ते मत्पुत्राः सकलाः प्रभो ॥ २४ ॥

ನಂದೀಶ್ವರನ ವಾಕ್ಯದಿಂದ ಶಿಕ್ಷೆಗೊಳಗಾಗಿ, ತಮ್ಮ ಕರ್ಮದಿಂದ ಮರಣ ಹೊಂದಿದ, ಎಲ್ಲ ನನ್ನ ಮಕ್ಕಳು, ಪ್ರಭುವೇ! ನಿನ್ನ ಅನುಗ್ರಹದಿಂದ ಬದುಕಲಿ. ೨೪

ज्ञानिनो बलिनः शान्ता दान्ताः धर्मावलोकिनः।
त्वद्भक्ताः सूनृता स्वर्ग्याः त्रयः सन्तु वरा मम ॥ २५ ॥

ಅವರು ಜ್ಞಾನಿಗಳೂ, ಬಲಾಢ್ಯರೂ, ಇಂದ್ರಿಯನಿಗ್ರಹ ಉಳ್ಳವರೂ, ಭಗವನ್ನಿಷ್ಠ ಬುದ್ಧಿ ಉಳ್ಳವರೂ, ಧರ್ಮದರ್ಶಿಗಳೂ, ನಿನ್ನ ಭಕ್ತರೂ, ಒಳ್ಳೇ ಮಾತಾಡುವವರೂ, ಸ್ವರ್ಗಯೋಗ್ಯರೂ ಆಗಲಿ, ಹೀಗೆ ಮೂರು ವರಗಳಿರಲಿ. ೨೫

इति प्रसादितस्तेन भगवान् नीललोहितः।
विमृश्य पूर्वकर्माणि ततो वासुकिमब्रवीत् ॥ २६ ॥

ಹೀಗೆ ಅವನಿಂದ ಪ್ರಸನ್ನೀಕರಿಸಲ್ಪಟ್ಟ ಶಂಕರನು ಅವರ ಪೂರ್ವಕರ್ಮಗಳನ್ನೆಲ್ಲಾ ವಿಮರ್ಶಿಸಿ ಆಮೇಲೆ ವಾಸುಕಿಯನ್ನು ಕುರಿತು ಅಂದನು. ೨೬

गच्छ त्वं ब्रह्मसदनं समाराधय वेधसम्।
गंधर्वपितृदेवाद्यैः ऋषिभिः संशितव्रतैः ॥ २७ ॥

ನೀನು ಬ್ರಹ್ಮದೇವರ ಮನೆಗೆ ಹೋಗಿ ಗಂಧರ್ವ ಪಿತೃಗಳು ದೇವತೆಗಳೇ ಮೊದಲಾದ ಪ್ರಶಂಸನೀಯ ವ್ರತ ಉಳ್ಳ ಋಷಿಗಳಿಂದ ಸೇವಿತನಾದ ಬ್ರಹ್ಮದೇವರನ್ನು ಆರಾಧಿಸು. ೨೭

सेव्यमानं पयस्विन्या घटोध्नीभिश्च धेनुभिः।
गावः कामदुघाः सन्ति तत्रामृतपयस्विनीः ॥ २८ ॥

ಸುವರ್ಣದಂತೆ ವರ್ಣಉಳ್ಳ ಆ ಎಲ್ಲ ಆಕಳುಗಳನ್ನು ಕೃಷ್ಣಾಕ್ಕೆ ತಗೆದುಕೊಂಡು ಬಾ. ೨೯

पावनी सङ्गमात्पुण्यात् पूर्वे दण्डसहस्रके।
ताः क्षरन्त्यमृतां दिव्यां स्वर्णदारां सरस्वतीम् ॥ ३० ॥

ಪುಣ್ಯತಮವಾದ ಸಂಗಮಕ್ಕಿಂತ ಸಾವಿರ ದಂಡಗಳಷ್ಟು ಮೊದಲು ಸುವರ್ಣದಂತೆ ಧಾರೆ ಉಳ್ಳ ಅಮೃತರೂಪಳಾದ ಸರಸ್ವತಿಯನ್ನೇ ಅವು ಸುರಿಸುತ್ತವೆ. ೩೦

तामानय तलं शीघ्रं पुत्रान् संजीवयाऽधुना।
इत्युक्तो देवराजेन नागराजो विधेः सभाम् ॥ ३१ ॥

ಅವುಗಳನ್ನು ತಲಕ್ಕೆ ತೆಗೆದುಕೊಂಡು ಹೋಗಿ ಬೇಗನೇ ಈಗ ಮಕ್ಕಳನ್ನು ಬದುಕಿಸು. ಹೀಗೆ ದೇವರಾಜರಾದ ರುದ್ರದೇವರಿಂದ ಹೇಳಿಸಿಕೊಂಡ ನಾಗರಾಜನು ಬ್ರಹ್ಮದೇವರ ಸಭೆಗೆ, ೩೧

गत्वा निवेद्य तत्सर्वं ब्रह्मणे पुण्यकर्मणे।
प्रेषिताः ब्रह्मणा सर्वाः गावोऽमृतमयाः शुभाः ॥ ३२ ॥

ಹೋಗಿ ಪುಣ್ಯಕರ ವ್ಯಾಪಾರ ಉಳ್ಳ ಬ್ರಹ್ಮದೇವರಿಗೆ ಅದೆಲ್ಲವನ್ನೂ ಹೇಳಿದನು. ಆಗ ಆ ಬ್ರಹ್ಮದೇವರು ಅಮೃತವನ್ನೇ ಕರೆಯುವ ಮಂಗಲಕರವಾದ ಆ ಎಲ್ಲ ಆಕಳುಗಳನ್ನು ಕಳಿಸಿಕೊಟ್ಟರು. ೩೨

समानीय च कृष्णां ताः समाराधयदीश्वरम्।
यत्र तद्गोष्पदं तीर्थं नाम्ना सर्वोत्तमं स्मृतम् ॥ ३३ ॥

ಆ ಎಲ್ಲ ಆಕಳುಗಳನ್ನು ಕೃಷ್ಣಾತಟಕ್ಕೆ ತಗೆದುಕೊಂಡು ಹೋಗಿ, ಎಲ್ಲಿ ಈಶ್ವರನನ್ನು ಆರಾಧಿಸಿದನೋ ಅದು, ಗೋಷ್ಪದತೀರ್ಥ ಎಂಬ ಹೆಸರಿನಿಂದ ಸರ್ವಶ್ರೇಷ್ಠವೆಂದು ಖ್ಯಾತವಾಯಿತು. ೩೩

तत्रोऽभयतरं तीर्थं मृतसंजीवनं परम्।
यत्राऽसौ नागराजेन सुवर्णेशः प्रपूजितः ॥ ३४ ॥

ದೂರಮಾಡುವುದು ಇದೆ. ಸ್ವರ್ಗದಿಂದ ನಾಗರಾಜನಿಂದ ಕೃಷ್ಣಗೆ ತಂದಿಟ್ಟ ಆ ಗೋವುಗಳು,
೩೫

ताः क्षरन्त्यमृतं दिव्यं कृष्णातीरे ह्यहर्निशम्।
रसातलगतेनाशु कुमारास्तेन जीविताः ॥ ३६ ॥

ದೇವಯೋಗ್ಯವಾದ ಅಮೃತವನ್ನು ಕೃಷ್ಣಾತೀರದಲ್ಲಿ ಹಗಲು ರಾತ್ರಿ ಅವು ಕರೆಯುತ್ತವೆ. ಅದನ್ನು ರಸಾತಲಕ್ಕೆ ಒಯ್ದಾಗ ಆ ಎಲ್ಲ ಹುಡುಗರು ಬದುಕಿದರು. ೩೬

महाकायाः महासत्वाः प्रज्ञावंतो महाबलाः।
दान्ताश्च शुचयोऽलुब्धाः धर्मनिष्ठाः जितेन्द्रियाः ॥ ३७ ॥

ಮಹಾಶರೀರ, ಮಹಾಸಾಮರ್ಥ್ಯ, ಬುದ್ಧಿ, ಬಲ, ಇಂದ್ರಿಯನಿಗ್ರಹ, ಲೋಭ ರಾಹಿತ್ಯ, ಶುಚಿತ್ವ, ಧರ್ಮನಿಷ್ಠತೆ, ಇತ್ಯಾದಿ ಗುಣ ಉಳ್ಳವರಾಗಿ, ೩೭

समुत्तस्थुः ततो नागाः महाभागा महौजसः।
प्रहर्षमतुलं प्राप तेषां माता तथा पिता ॥ ३८ ॥

ಮಹಾ ಭಾಗ್ಯಶಾಲಿಗಳೂ ಮಹಾ ಪರಾಕ್ರಮಿಗಳೂ ಆದ ಆ ನಾಗರು ಎದ್ದರು. ಅವರ ತಂದೆ ತಾಯಿಗಳು ಅಸದೃಶ ಆನಂದವನ್ನು ಹೊಂದಿದರು. ೩೮

इत्थं महोत्सवे वृत्ते नागराजालये शुभे।
तुष्टुवुः नागगन्धर्वाः कृष्णां नागपतेस्तनुम् ॥ ३९ ॥

ನಾಗರಾಜನ ಮನೆಯಲ್ಲಿ ಈರೀತಿ ಮಂಗಲಕರವಾದ ಉತ್ಸವವು ನಡೆಯುತ್ತಿರಲು ಅನೇಕ ನಾಗರು ಗಂಧರ್ವರು ನಾಗಪತಿಯಂತೆ ಶರೀರವುಳ್ಳ ಕೃಷ್ಣಾದೇವಿಯನ್ನು ಸ್ತೋತ್ರ ಮಾಡಿದರು. ೩೯

च्यवनाश्रमतः पश्चात् पवनाश्रमपूर्वतः।
गोष्पदं परमं तीर्थं त्रिषु लोकेषु विश्रुतम् ॥ ४० ॥

इष्टापूर्तं कृतं यैस्तु यैः कृतं द्विजतर्पणम्।
विशंति स्वर्णधारायां धन्यैरेवावलोक्यते ॥ ४२ ॥

ಯಾರು ಇಷ್ಟಾಪೂರ್ತ ಬ್ರಾಹ್ಮಣತರ್ಪಣ ಮಾಡಿಸುವವರೋ ಅವರು ಸ್ವರ್ಣಧಾರೆಯಲ್ಲಿ ಪ್ರವೇಶಿಸುತ್ತಾರೆ. ಈ ತೀರ್ಥದ ದರ್ಶನವು ಯೋಗ್ಯರಾದವರಿಗೆ ಮಾತ್ರ ಕಾಣುತ್ತದೆ. ೪೨

हिरण्येन तु यः श्राद्धं कुरुते गोष्पदे नरः।
पितृंस्तस्योपतिष्ठेरन् क्षीरं सर्पिर्मधूदकम् ॥ ४३ ॥

ಗೋಷ್ಪದ ಎಂಬ ತೀರ್ಥದಲ್ಲಿ ಯಾರು ಹಿರಣ್ಯಶ್ರಾದ್ಧ ಮಾಡುವರೋ ಅವರ ಪಿತೃಗಳಿಗೆ ಕ್ಷೀರ, ತುಪ್ಪ, ಜೇನು, ನೀರು ಮೋದಲಾದವುಗಳು ದೊರೆಯುತ್ತವೆ. ೪೩

कार्तिक्यां गोष्पदे तीर्थे गोदानं यः प्रयच्छति।
तस्य वंशे द्विजश्रेष्ठ गोकुलं पुष्कलं भवेत् ॥ ४४ ॥

ಕಾರ್ತಿಕದಲ್ಲಿ ಗೋಷ್ಪದತೀರ್ಥದಲ್ಲಿ ಯಾರು ಗೋದಾನವನ್ನು ಮಾಡುವರೋ, ಹೇ ಬ್ರಾಹ್ಮಣೋತ್ತಮ! ಅವನ ವಂಶದಲ್ಲಿ ಅನೇಕ ಆಕಳುಗಳ ಸಮುದಾಯವು ಲಭ್ಯವಾಗುವದು. ೪೪

गवादिकं तु यो दद्यात् तीर्थश्रेष्ठे तु गोष्पदे।
गोहत्यादिकृतं पापं तत्क्षणादेव नश्यति ॥ ४५ ॥

ಶ್ರೇಷ್ಠ ತೀರ್ಥವಾದ ಗೋಷ್ಪದ ಎಂಬಲ್ಲಿ ಯಾರು ಆಕಳು ಮೊದಲಾದಿಗಳನ್ನು ಕೊಡುವರೋ ಅವರ ಗೋಹತ್ಯಾದಿ ಪಾಪಗಳು ಕೂಡಲೇ ನಾಶಹೊಂದುವವು. ೪೫

दीपोत्सवं तु कार्तिक्यां सुवर्णेशं करोति यः।
आसप्तमकुले तस्य दारिद्र्यं नैव जायते ॥ ४६ ॥

ಸುವರ್ಣೇಶನಿಗೆ ಕಾರ್ತಿಕ ಮಾಸದಲ್ಲಿ ಯಾರು ದೀಪೋತ್ಸವ ಮಾಡಿಸುವರೋ ಅವನ ಕುಲದಲ್ಲಿ ಏಳು ಕುಲದವರೆಗೆ ದಾರಿದ್ರ್ಯ ಉಂಟಾಗುವದಿಲ್ಲ. ೪೬

कार्तिक्यां कृत्तिकायोगे तत्सर्वं चाक्षयं भवेत् ॥ ४८ ॥

ಕಾರ್ತಿಕ, ಕೃತ್ತಿಕಾ ಯೋಗವಿದ್ದಲ್ಲಿ ಗೋಷ್ಪದ ಎಂಬ ತೀರ್ಥದಲ್ಲಿ ಏನಾದರೂ ಕೊಟ್ಟರೆ, ಏನಾದರೂ ಹೋಮ ಮಾಡಿದರೆ ಅಥವಾ ಜಪಮಾಡಿದರೆ, ಅದೆಲ್ಲವೂ ಅಕ್ಷಯವಾಗುತ್ತದೆ. ೪೮

इत्येतत्कथितं विप्राः गोष्पदं तीर्थमुत्तमम् ।
यः श्रृणोति नरो भक्त्या स पुण्यां लभते गतिम् ॥ ४९ ॥

ಹೀಗೆ ಎಲೈ ಬ್ರಾಹ್ಮಣಗಳಿರಾ! ಉತ್ತಮವಾದ ಗೋಷ್ಪದತೀರ್ಥದ ಮಹಿಮೆಯನ್ನು ಹೇಳಿದ್ದೇನೆ. ಯಾವ ಮನುಷ್ಯನು ಭಕ್ತಿಯಿಂದ ಕೇಳುವನೋ ಅವನು ಪುಣ್ಯತಮವಾದ ಗತಿಯನ್ನು ಹೊಂದುತ್ತಾನೆ. ೪೯

॥ इति श्रीस्कन्दपुराणे कृष्णामाहात्म्ये गोष्पदतीर्थवर्णनं नाम चतुर्दशोऽध्यायः ॥

❀ ❀ ❀

## ॥अथ पञ्चदशोऽध्यायः ॥

नारद उवाच –

अतः परं प्रवक्ष्यामि तीर्थं पापप्रणाशनम् ।
सहस्रधनुषां विप्राश्चन्द्रिकासङ्गमो महान् ॥ १ ॥

ನಾರದರು ಅನ್ನುತ್ತಾರೆ –

ಇನ್ನು ಮೇಲೆ ಪಾಪನಾಶಕರವಾದ ತೀರ್ಥದ ಬಗ್ಗೆ ಹೇಳುವೆ. ಸಾವಿರ ಧನುಷ್ಯದ ಅಂತರದಲ್ಲಿ ಮಹತ್ತರವಾದ ಚಂದ್ರಿಕಾ ಸಂಗಮ ಎಂಬ ತೀರ್ಥವಿದೆ. ೧

अत्रैवोदाहरन्तीमं इतिहासं पुरातनम् ।
पापविघ्नक्षयकरं श्रृणुध्वं मुनिपुङ्गवाः ॥ २ ॥

ದೇವತೆಗಳೂ ನೋಡುತ್ತಿರುವಂತೆ ಚಂದ್ರನು ಗಹಗಹಿಸಿ ನಕ್ಕನು. ೩

तततो गणपतिः क्रुद्धः चन्द्रमाह रुषान्वितः ।
स्खलिते हसितं मूढ सतां नैवोपयुज्यते ॥ ४ ॥

ಆಮೇಲೆ ಸಿಟ್ಟಿಗೆದ್ದ ಗಣಪತಿಯು ಚಂದ್ರನಿಗೆ, ಹೇ ಮೂರ್ಖನೇ! ಎಡವಿದಾಗ ನಗುವದು ಸಜ್ಜನರಿಗೆ ಯೋಗ್ಯವಾದುದಲ್ಲ. ೪

शुक्लपक्षचतुर्थ्यां तु यस्त्वां पश्यति चन्द्रमः ।
मिथ्याभिशापसंयुक्तः सोस्तु मद्वचनात् विधो ॥ ५ ॥

ಎಲೈ ಚಂದ್ರನೇ! ಶುಕ್ಲಪಕ್ಷ ಚತುರ್ಥಿ ದಿವಸ ಯಾರು ನಿನ್ನನ್ನು ನೋಡುವರೋ ನನ್ನ ಮಾತಿನಿಂದ ಅವರು ಅಪವಾದಕ್ಕೆ ಒಳಗಾಗಲಿ. ೫

इति शप्तं चंद्रमसं श्रुत्वा स चतुराननः ।
चन्द्रान्तिकमुपागत्याब्रवीत् किं ते कृतं विधो ॥ ६ ॥

ಹೀಗೆ ಶಾಪಪಡೆದ ಚಂದ್ರಮನನ್ನು ಕೇಳಿ ಬ್ರಹ್ಮದೇವನು ಚಂದ್ರನ ಹತ್ತಿರ ಬಂದು ನೀನು ಹೀಗೇಕೆ ಮಾಡಿದೆ? ಎಂದು ಅಂದನು. ೬

वृथैव हसितं देवे तं प्रसादय विघ्नपम् ।
मया सह समागत्य नोचेत् शान्तिः कथं भवेत् ॥ ७ ॥

ದೇವನಾದ ಗಣೇಶನನ್ನು ವ್ಯರ್ಥವಾಗಿ ಅಪಹಾಸ ಮಾಡಿದೆ. ನನ್ನಿಂದ ಕೂಡಿ ಕೊಂಡು ವಿಘ್ನರಾಜನನ್ನು ಪ್ರಸನ್ನೀಕರಿಸಿಕೊ. ಇಲ್ಲವಾದರೆ ನಿನಗೆ ಶಾಂತಿ ಹೇಗೆ ಉಂಟಾದೀತು? ೭

ततश्चन्द्रेण सहितः ब्रह्मा कैलासमागमत् ।
गणाध्यक्षं प्रणम्यासु तमीडे विश्वशान्तये ॥ ८ ॥

ಆಮೇಲೆ ಚಂದ್ರನಿಂದ ಕೂಡಿಕೊಂಡ ಬ್ರಹ್ಮನು ಕೈಲಾಸಕ್ಕೆ ಹೋದನು. ಗಣಾಧ್ಯಕ್ಷನನ್ನು ನಮಿಸಿ (ಅಯೋಗ್ಯಮೋಹನಾರ್ಥ) ಜಗತ್ತಿನ ಶಾಂತಿಗಾಗಿ ಅವನನ್ನು ಸ್ತುತಿಸಿದನು. ೮

ವಿಘ್ನನಾಶಕರನಾದ ನಿನಗೆ ನಮಸ್ಕಾರವು. ೯

नमो नमः कारणकारणाय नमो नमो मङ्गलमङ्गलात्मने ।
नमो नमो ब्रह्मविदां मनीषिणां उपासनीयाय नमो नमस्ते ॥ १

ಕಾರಣಕ್ಕೂ ಕಾರಣನಾದ, ಮಂಗಲಗಳಿಗೂ ಮಂಗಲಪ್ರದನ
ಬ್ರಹ್ಮಜ್ಞಾನಿಗಳಾದ ಜ್ಞಾನಿಗಳಿಂದ ಉಪಾಸ್ಯನಾದ, ನಿನಗೆ ನಮಸ್ಕಾರವು. ೧೦

इति स्तुतो विघ्ननाशो ब्रह्मणा विश्वयोनिना ।
प्रोवाच परया प्रीत्या स्तुत्या सन्तुष्टमानसः ॥ १

ಹೀಗೆ ಜಗಜ್ಜನಕರಾದ ಬ್ರಹ್ಮದೇವರಿಂದ ಸ್ತೋತ್ರಿತನಾದ ವಿಘ್ನರಾ
ಸ್ತೋತ್ರದಿಂದ ಸಂತುಷ್ಟನಾಗಿ ಅತ್ಯಂತ ಪ್ರೀತಿಯಿಂದ ಅಂದನು. ೧೧

गजानन उवाच –

न मयोक्तं वचो मिथ्या चन्द्रं प्रति ऋचांपते ।
वृथोपहसितं तेन स्वामिन् किं करवाणि भो ॥ १

ಗಣೇಶನು ಅಂದನು –

ವೇದಗಳಿಗೆ ಒಡೆಯನಾದ ಹೆ ಬ್ರಹ್ಮನೇ ! ಚಂದ್ರನಿಗೆ ನಾನು ಹೇಳಿದ ಮ
ಸುಳ್ಳಾಗಲಾರದು. ಸ್ವಾಮಿ ! ಅವನು ವ್ಯರ್ಥವಾಗಿ ಅಪಹಾಸ ಮಾಡಿದನು. ನಾನ
ಮಾಡಲಿ ?೧೨

ब्रह्म उवाच –

दृष्टमात्रोपि शापोयं भवितेति सचंद्रमाः ।
शप्तस्त्वयेति तद्वाक्यं क्षमस्व करुणानिधे ॥ १

ಬ್ರಹ್ಮನು ಅಂದನು –

ನಿನ್ನನ್ನು ನೋಡಿದವನು ಅಪವಾದಕ್ಕೆ ಒಳಗಾಗಲಿ ಎಂದು ಂ ನಿಗೆ ಶ

ಭಾದ್ರಪದ ಶುಕ್ಲ ಚತುರ್ಥಿಯ ದಿನ ಯಾರು ನನ್ನನ್ನು ಸ್ತೋತ್ರಮಾಡುತ್ತ ಪೂಜಿಸುವರೋ ಅವರಿಗೆ ಅಪವಾದ ಬರುವದು ಬೇಡ. ಅವತ್ತಿನ ದಿನ ಚಂದ್ರನನ್ನು ನೋಡಕೂಡದು. ಹಾಗೇ ಆಗಲಿ ಎಂದು ಹೇಳಿ ಹೋದನು. ಆಮೇಲೆ ಚಂದ್ರನನ್ನು ಕುರಿತು ಬ್ರಹ್ಮದೇವರು, ನಿಶ್ಚಯವಾಗಿ ಹೀಗೆಂದರು. ೧೪–೧೫

**शुध्यर्थं याहि चन्द्र त्वं कृष्णां गङ्गोत्तरे तटे ।**
**तत्र तप्त्वा तपस्तीव्रं शापान्मुक्तो भविष्यसि ॥ १६ ॥**

ಗಂಗೆಯ ಉತ್ತರಕ್ಕಿರುವ ಕೃಷ್ಣಾನದಿಗೆ, ಚಂದ್ರನೇ ! ನೀನು ಶುದ್ಧಿಗಾಗಿ ಹೋಗು. ಅಲ್ಲಿ ತೀವ್ರ ತಪಸ್ಸನ್ನು ಮಾಡಿ ಶಾಪದಿಂದ ಮುಕ್ತನಾಗುವಿ. ೧೬

**ओमित्युक्त्वा ततश्चन्द्रः प्रणम्य चतुराननम् ।**
**नत्वा गणाधिपं शीघ्रं जगाम तपसे वनम् ॥ १७ ॥**

ಹಾಗೇ ಆಗಲಿ ಎಂದು ಚಂದ್ರನು ಬ್ರಹ್ಮನನ್ನು ನಮಿಸಿ ಗಣಾಧಿಪನನ್ನು ನಮಿಸಿ ಬೇಗನೇ ತಪಸ್ಸು ಮಾಡಬೇಕೆಂದು ವನಕ್ಕೆ ಹೋದನು. ೧೭

**सह्याद्रिशिखरे रम्ये यावद्वर्षाणि षोडश ।**
**जपन् पंचाक्षरीं विद्यां नित्यं सिद्धेशसन्निधौ ॥ १८ ॥**

ರಮಣೀಯವಾದ ಸಹ್ಯಪರ್ವತದ ಶಿಖರದಲ್ಲಿ ಹದಿನಾರು ವರ್ಷಗಳವರೆಗೆ ಐದು ಅಕ್ಷರವುಳ್ಳ ಮಂತ್ರವನ್ನು ನಿತ್ಯದಲ್ಲಿ ಸಿದ್ಧೇಶನ ಸನ್ನಿಧಾನದಲ್ಲಿ ಜಪಿಸುತ್ತ, ೧೮

**तस्य प्रसन्नो भगवान् सिद्धेशो नीललोहितः ।**
**मृगाङ्कं स्थापयाञ्चक्रे पद्महस्तेन शंकरः ॥ १९ ॥**

ವಿರಾಜಿಸಿದನು. ಆ ಸ್ಥಾನದಿಂದ ಚಂದ್ರಿಕಾ ಎಂಬ ಮಹಾನದಿಯು ಹೊರಟಿತು. ೨೦

सर्वपापहरा पुण्या सङ्गता कृष्णगङ्गया ।
सिद्धेशा यान्ति मध्याह्ने स्नानार्थं मोक्षकामुकाः ॥ २१ ॥

ಎಲ್ಲ ಪಾಪಗಳನ್ನು ಕಳೆಯುವ ಪುಣ್ಯಕರವಾದ ಆ ನದಿಯು ಕೃಷ್ಣಾ ಎಂಬ ಗಂಗೆಯಿಂದ ಕೂಡಿಕೊಂಡಿತು. ಮೋಕ್ಷ ಬಯಸುವ ಸಿದ್ದೇಶರು ಅಲ್ಲಿ, ಮಧ್ಯಾಹ್ನದಲ್ಲಿ ಉತ್ಸುಕರಾಗಿ ಸ್ನಾನಮಾಡಲು ಹೋಗುತ್ತಾರೆ. ೨೧

चन्द्रिकासङ्गमे पुण्ये स्नानं दानं करोति यः ।
सहिरण्यं द्विजश्रेष्ठाः अमृतत्वं स गच्छति ॥ २२ ॥

ಪುಣ್ಯಕರವಾದ ಚಂದ್ರಿಕಾಸಂಗಮದಲ್ಲಿ, ಯಾರು ಸ್ನಾನ, ದಾನ, ಹಿರಣ್ಯಶ್ರಾದ್ಧ ಮೊದಲಾದವುಗಳನ್ನು ಮಾಡುವರೋ ಅವರು ಮೋಕ್ಷಕ್ಕೆ ಹೋಗುವರು. ೨೨

चन्द्रिकासङ्गमे सोमश्रवणे योऽर्चयेत्पितॄन् ।
सक्तुभिः निर्वपेत् पिण्डान् तारयेत् सप्तसप्तकम् ॥ २३ ॥

ಸೋಮವಾರ ಶ್ರವಣ ನಕ್ಷತ್ರ, ಇದ್ದಾಗ ಚಂದ್ರಿಕಾಸಂಗಮದಲ್ಲಿ ಯಾರು ಪಿತೃಗಳನ್ನು ಪೂಜಿಸುವರೋ, ಹಿಟ್ಟಿನಿಂದ ಪಿಂಡಗಳನ್ನು ಮಾಡಿ ಶ್ರಾದ್ಧ ಮಾಡುವರೋ, ಅವರು ಇಪ್ಪತ್ತೊಂದು ಪಿತೃಗಳನ್ನು ದಾಟಿಸುವರು. ೨೩

इत्येतत् कथितं विप्राः चन्द्रिकातीर्थमुत्तमम् ।
यः श्रृणोति नरो भक्त्या स पुण्यां लभते गतिम् ॥ २४ ॥

ಹೀಗೆ ಎಲೈ ಬ್ರಾಹ್ಮಣಗಳಿರಾ ! ಉತ್ತಮ ಚಂದ್ರಿಕಾತೀರ್ಥದ ಬಗ್ಗೆ ಹೇಳಿದ್ದೇನೆ. ಯಾವ ಮನುಷ್ಯ ಭಕ್ತಿಯಿಂದ ಕೇಳುವನೋ, ಅವನು ಪುಣ್ಯಗತಿಯನ್ನು ಹೊಂದುವನು. ೨೪

त्रिसहस्र तु धनुषा निर्जना नाम सा नदी ॥ १ ॥

**ನಾರದರು ಅಂದರು –**

ಇನ್ನೊಂದು ಮಹತ್ತರವಾದ ಕೃಷ್ಣಾಸಂಗಮದ ಬಗ್ಗೆ ಹೇಳುತ್ತೇನೆ. ಮೂರು ಸಾವಿರ ಧನುಸ್ಸಿನ ಅಂತರದ ಮೇಲೆ ನಿರ್ಜನಾ ಎಂಬ ಹೆಸರಿನ ನದಿ ಇದೆ. ೧

निर्जना नाम शबरी सह्यजादक्षिणे तटे ।
तपश्चचार तन्वङ्गी दुश्चरं बहुलाः समाः ॥ २ ॥

ಸಹ್ಯಾದ್ರಿಯಲ್ಲಿ ಜನಿಸಿದ ಕೃಷ್ಣಾದಂಡೆಯ ಮೇಲೆ ನಿರ್ಜನಾ ಎಂಬ ಶಬರಿಯು ಬಹಳಷ್ಟು ವರ್ಷಗಳವರಗೆ ಘೋರ ತಪಸ್ಸನ್ನು ಮಾಡಿದಳು. ೨

तस्याः प्रसन्नो भगवान् देवदेवः त्रिलोचनः ।
स्वयमेव महादेवस्तापसीमिदमब्रवीत् ॥ ३ ॥

ಆಕೆಗೆ ದೇವದೇವನಾದ ಮೂರು ಕಣ್ಣುಗಳುಳ್ಳ ಶಂಕರನು ಸ್ವಯಂ ಪ್ರಸನ್ನನಾಗಿ ಆ ತಪಸ್ವಿನಿಯನ್ನು ಕುರಿತು ಅಂದನು. ೩

वरं वरय कल्याणि देवानामपि दुर्लभम् ।
इत्युक्ता देवदेवेन तं प्रोवाच स तापसी ॥ ४ ॥

ದೇವತೆಗಳಿಗೂ ದುರ್ಲಭವಾದ ವರವನ್ನು, ಹೇ ಕಲ್ಯಾಣಿಯೇ !ನೀನು ಕೇಳಿಕೋ, ಹೀಗೆ ದೇವನಿಂದ ಹೇಳಿಸಿಕೊಂಡು ಆ ತಪಸ್ವಿನಿಯು ಅವನಿಗೆ ಅಂದಳು. ೪

देवदेव महादेव प्रणतार्तिविनाशन ।
आश्रमे मे महाभाग खदिरीयज्ञसाधना ॥ ५ ॥

ನಮಸ್ಕರಿಸುವವರ ದುಃಖ ದೂರ ಮಾಡುವ, ದೇವದೇವನಾದ ರುದ್ರನೇ! ಮಹಾಭಾಗ್ಯಶಾಲಿಯೇ! ನನ್ನ ಆಶ್ರಮದಲ್ಲಿ ಯಜ್ಞಸಾಧನವಾದ ಖದಿರ ಎಂಬ ವೃಕ್ಷವಿಶೇಷವಿದೆ. ೫

अस्याः प्रसादादहं शंभो द्रवीभूता त्वदग्रतः ।

तथेति सरितं चक्रे दृष्टिपातान्महेश्वरः ॥ ७ ॥

ರುದ್ರದೇವನು ಹೀಗೆ ಆಕೆಯ ವಿಜ್ಞಾಪನೆಯನ್ನು ಕೇಳಿ "ಹಾಗೇ ಆಗಲಿ" ಎಂದು ಹೇಳಿ ದೃಷ್ಟಿಪಾತದಿಂದ ಶಿವನು ಅವಳನ್ನು ನದಿಯನ್ನಾಗಿ ಮಾಡಿದನು. ೭

शबरीखदिरीमूलप्रसृताऽअमृतरूपिणी ।
निर्जनेति समाख्याता सङ्गता कृष्णगङ्गया ॥ ८ ॥

ಖದಿರೀಮೂಲದಿಂದ ಶಬರಿಯೇ ಜಲರೂಪಳಾಗಿ ಹೊರಟಳು. ನಿರ್ಜನಾ ಎಂಬ ಹೆಸರಿನಿಂದ ವಿಖ್ಯಾತಳಾಗಿ ಕೃಷ್ಣಾನದಿಗೆ ಕೂಡಿಕೊಂಡಳು. ೮

दक्षिणे सह्यजातीरे निर्जनासङ्गमे द्विजाः ।
यः करोति नरः श्राद्धं पितरस्तस्य सोमपाः ॥ ९ ॥

ಎಲೈ ಬ್ರಾಹ್ಮಣರೇ ! ದಕ್ಷಿಣಕ್ಕಿರುವ ಕೃಷ್ಣಾ ಮತ್ತು ನಿರ್ಜನಾ ಎಂಬ ನದಿಗಳ ಸಂಗಮದಲ್ಲಿ ಯಾವ ಮನುಷ್ಯನು ಪಿತೃಗಳ ಶ್ರಾದ್ಧ ಮಾಡುವನೋ ಅವನ ಪಿತೃಗಳು ಅಮೃತಪಾನ ಮಾಡುತ್ತಾರೆ. ೯

कन्यागते सुरगुरौ यः श्राद्धजलदो भवेत् ।
प्रीणन्ति पितरस्तस्य यावत्कन्यागतो गुरुः ॥ १० ॥

ಗುರುವು ಕನ್ಯಾರಾಶಿಗೆ ಬಂದಾಗ ಯಾರು ಶ್ರಾದ್ಧಜಲ ಕೊಡುವರೋ ಅವನ ಪಿತೃಗಳು ಗುರುವು ಕನ್ಯಾರಾಶಿಯಲ್ಲಿರುವವರಗೆ ಅವನಿಗೆ ಪ್ರೀತರಾಗುತ್ತಾರೆ. ೧೦

यः सोमश्रवणे स्नायात् खदिरीसंगमे नरः ।
आसप्तमे कुले तस्य न कश्चित् याचको भवेत् ॥ ११ ॥

ಯಾವ ಮನುಷ್ಯನು ಖದಿರೀಸಂಗಮದಲ್ಲಿ ಶ್ರವಣ ನಕ್ಷತ್ರವಿದ್ದ ಸೋಮವಾರ ಸ್ನಾನಮಾಡುವನೋ ಅವನ ಕುಲದಲ್ಲಿ ಏಳು ತಲೆಯವರೆಗೆ ಯಾವನೂ ಯಾಚಕನಾಗಲಾರ, ಅರ್ಥಾತ್ ಸಮೃದ್ಧರಾಗುವರು. ೧೧

ततो दण्डसहस्रे तु सह्यजादक्षिणे तटे ।
गोपपतं तीर्थं सर्वकिल्बिषनाशनम् ॥ १२ ॥

तस्मिन् तीर्थे महापुण्ये सर्वसिद्धिप्रदे नृणाम्।
प्रातः शुक्लतिलैः स्नात्वा गणेशं यः समर्चयेत् ॥ १४ ॥

ಮನುಷ್ಯರಿಗೆ ಸರ್ವಸಿದ್ಧಿಯನ್ನು ಕೊಡುವ ಪುಣ್ಯತಮವಾದ ಆ ತೀರ್ಥದಲ್ಲಿ ಮುಂಜಾನೆ ಬಿಳೀ ಎಳ್ಳುಗಳಿಂದ ಸ್ನಾನಮಾಡಿ ಗಣೇಶನನ್ನು ಯಾರು ಪೂಜಿಸುವರೋ, ೧೪

अविघ्नं जायते तस्य सर्वकार्येषु सर्वदा।
माघशुक्लचतुर्थ्यां यः प्रातः स्नात्वा गणेश्वरम् ॥ १५ ॥

ಅವನ ಎಲ್ಲ ಕಾರ್ಯಗಳು ಯಾವಾಗಲೂ ನಿರ್ವಿಘ್ನವಾಗಿ ಜರುಗುವವು. ಯಾರು ಮಾಘ ಶುಕ್ಲ ಚತುರ್ಥೀ ದಿನದಲ್ಲಿ ಪ್ರಾತಃಸ್ನಾನ ಮಾಡಿ ಗಣೇಶ್ವರನನ್ನು, ೧೫

अर्चयेत् शतपत्रैश्च दूर्वामिश्रैश्च तण्डुलैः।
षडक्षरेण मन्त्रेण सिद्धिः संवत्सरात् भवेत् ॥ १६ ॥

ಕಮಲಗಳಿಂದ ಹಾಗೂ ಕರಿಕೆಯಿಂದ ಕೂಡಿದ ಅಕ್ಕಿಗಳಿಂದ ಷಡಕ್ಷರ ಮಂತ್ರ ಹೇಳಿ ಪೂಜಿಸುವರೋ ಅವರಿಗೆ ಒಂದು ವರ್ಷದಲ್ಲಿಯೇ ಸಿದ್ಧಿಯಾಗುವದು. ೧೬

मोदकैः पूरयेत् पात्रं सहस्रेण शतेन च।
चतुर्थ्यामुपवासी यः तस्याभीष्टं भवेत् ध्रुवम् ॥ १७ ॥

ಚತುರ್ಥೀ ದಿನ ಉಪವಾಸ ಮಾಡಿ ಯಾರು ಸಾವಿರ ನೂರು ಕಡಬುಗಳಿಂದ ಪಾತ್ರೆಯನ್ನು ತುಂಬುವರೋ ಅವರ ಅಭೀಷ್ಟವು ನಿಶ್ಚಯವಾಗಿ ಈಡೇರುವುದು. ೧೭

माघशुक्लचतुर्थ्यां यः उपवासी तु मोदकान्।
अष्टोत्तरशतं हुत्वा सर्वान् कामान् समश्नुते ॥ १८ ॥

ಯಾರು ಮಾಘ ಶುಕ್ಲ ಚತುರ್ಥೀ ದಿನ ಉಪವಾಸ ಮಾಡಿ ನೂರಾ ಎಂಟು ಮೋದಕಗಳನ್ನು ಹೋಮ ಮಾಡುವರೋ, ಅವರು ಎಲ್ಲ ಇಚ್ಛೆಗಳನ್ನು ಅನುಭವಿಸುವರು. ೧೮

यः प्रयाति नरो भक्त्या गणेशं तीर्थमुत्तमम् ।
निर्विघ्नेन भवेत्तस्य सिद्धिः सर्वक्रियादिषु ॥ २० ॥

ಯಾವ ಮನುಷ್ಯನು ಗಣೇಶತೀರ್ಥಕ್ಕೆ ಭಕ್ತಿಯಿಂದ ಹೋಗುವನೋ ಎಲ್ಲ ಕೆಲಸಗಳಲ್ಲಿ ನಿರ್ವಿಘ್ನವಾಗಿ ಅವನಿಗೆ ಸಿದ್ಧಿಯಾಗುವದು. ೨೦

क्रोशमात्रं ततो विप्राः कोटितीर्थमनुत्तमम् ।
यस्य संस्मरणादेव सर्वपापैः प्रमुच्यते ॥ २१ ॥

ಎಲೈ ಬ್ರಾಹ್ಮಣರೇ! ಆದರಿಂದ ಒಂದು ಹರದಾರಿಯಲ್ಲಿ ಅಸದೃಶವಾದ ಕೋಟಿತೀರ್ಥ ಎಂಬುದು ಇರುವದು. ಈ ತೀರ್ಥವನ್ನು ಸ್ಮರಿಸಿದರೆ, ಸಾಕು, ಎಲ್ಲ ಪಾಪಗಳಿಂದ ಮುಕ್ತನಾಗುವನು. ೨೧

ऋषय ऊचुः –

कथं कोटीश्वरं तीर्थं किं पुण्यं केन हेतुना ।
पुराणे प्रोच्यते सद्भिः तन्नस्त्वं ब्रूहि नारद ॥ २२ ॥

ಋಷಿಗಳು ಅಂದರು–

ಕೋಟೀಶ್ವರ ಎಂಬ ತೀರ್ಥವು ಹೇಗೆ ಆಯಿತು? ಯಾವ ಕಾರಣಕ್ಕಾಗಿ ಪುಣ್ಯಕರವಾದುದು? ಪುರಾಣದಲ್ಲಿ ಸಜ್ಜನರು ಏನು ಹೇಳಿದ್ದಾರೆ? ನೀವು, ಹೇ ನಾರದರೇ! ಆದನ್ನು ನಮಗೆ ಹೇಳಿರಿ. ೨೨

नारद उवाच –

भार्गवान्वयसंभूतो रामो नाम महायशाः ।
भर्गशिष्यो महातेजाः ब्रह्मचारिव्रते स्थितः ॥ २२ ॥

ನಾರದರು ಅಂದರು–

ಭಾರ್ಗವರ ವಂಶದಲ್ಲಿ ಅವತರಿಸಿದ ರಾಮನೆಂಬ ಮಹಾಕೀರ್ತಿಶಾಲಿಯು

त्रिःसप्तकृत्वस्त्ववधीत् क्षत्रजातं दुरासदम्।
निर्जिता सकला पृथ्वी सशैलवनकानना ॥ २५ ॥

ದುಃಖದಿಂದ ಎದುರಿಸಲು ಯೋಗ್ಯವಾದ ಕ್ಷತ್ರಿಯ ಸಮುದಾಯವನ್ನು ಇಪ್ಪತ್ತೊಂದು ಸಲ ಸಂಹರಿಸಿದನು. ಪರ್ವತ, ವನ ಮೊದಲಾದವುಗಳಿಂದ ಕೂಡಿದ ಎಲ್ಲ ಭೂಮಿಯನ್ನು ಗೆದ್ದನು. ೨೫

कश्यपायार्पयामास यज्ञान्ते सुमहायशाः।
दत्ते सर्वस्वदानेऽपि कृते धर्मे ह्यदांभिके ॥ २६ ॥

ಯಜ್ಞದ ಕೊನೆಗೆ ಮಹಾಕೀರ್ತಿವುಳ್ಳ ಪರಶುರಾಮದೇವರು ಕಶ್ಯಪನಿಗೆ ಈ ಭೂಮಿಯನ್ನೂ ಕೊಟ್ಟರು. ಸರ್ವಸ್ವ ದಾನ ಕೊಟ್ಟರೂ ಡಂಭಾದಿರಹಿತ ಧರ್ಮ ಮಾಡಿದರೂ. ೨೬

तथापि न निवृत्तिः स्यात् मनसः क्षत्रघातकात्।
क्षत्रहत्याभिभूतः सन् रेणुकेयो महातपाः ॥ २७ ॥

ಕ್ಷತ್ರಿಯರನ್ನು ಸಂಹರಿಸಿದ ಅವರ ಮನಸ್ಸಿಗೆ ಶಾಂತಿ ದೊರೆಯಲಿಲ್ಲ. ಮಹಾತಪಸ್ವಿಯಾದ ರೇಣುಕಾಪುತ್ರರಾದ ರಾಮದೇವರು ಕ್ಷತ್ರಿಯಹತ್ಯೆಯಿಂದ ಲಿಪ್ತನಾದವನಂತೆ, ೨೭

पप्रच्छ मुनिशार्दूलमगस्त्यं जपतां वरम्।
किं मुने मम नाद्यापि निवृत्तिः परमा हृदि ॥ २८ ॥

ತಪಸ್ವಿಗಳಲ್ಲಿ ಶ್ರೇಷ್ಠರೂ ಮನನಶೀಲರೂ ಆದ ಅಗಸ್ತ್ಯರನ್ನು ಕುರಿತು ಏನು ಮುನಿಗಳೇ ! ನನ್ನ ಹೃದಯದಲ್ಲಿ ಇನ್ನೂ ಸಮಾಧಾನವಿಲ್ಲ. ೨೮

कृते महति धर्मेऽपि व्रतेषु चरितेष्वपि।
तद्ब्रूहि मुनिशार्दूल पुण्यक्षेत्रं तपोवनम् ॥ २९ ॥

विमृश्य परया बुद्ध्या रामं प्रोवाच चोत्तरम्।
सह्याद्रिशिखरोत्पन्ना श्रीशैलोत्संगगामिनी ॥ ३१ ॥

ಉತ್ತಮ ಬುದ್ಧಿಯಿಂದ ವಿಚಾರಮಾಡಿ ರಾಮನಿಗೆ ಉತ್ತರ ಹೇಳಿದರು. ಸಹ್ಯಾದ್ರಿಶಿಖರದಿಂದ ಹೊರಟು ಶ್ರೀಶೈಲ ಸಮೀಪದಲ್ಲಿ ಹರಿಯುವ, ೩೧

वैकुण्ठस्य तनुः साक्षात् याहि कृष्णां निवृत्तये।

स्विष्टेषु पूर्तेषु कृतेषु सत्यं ज्ञानेन यत्पुण्यफलं प्रदिष्टम्।
नालं विशुद्धौ सततं हि पुंसां यत्कृष्णगङ्गाम्बुनिषेवणात् स्यात् ॥ ३२ ॥

ಸಾಕ್ಷಾತ್ ಕೃಷ್ಣಾರೂಪಳಾದ ಕೃಷ್ಣಾಕ್ಕೆ ಶಾಂತಿಗಾಗಿ ಹೋಗು. ಇಷ್ಟಾಪೂರ್ತಿಗಳನ್ನು ಸರಿಯಾಗಿ ಮಾಡಿದಾಗ, ಸತ್ಯ ಜ್ಞಾನ ಇವುಗಳಿಂದ ಯಾವ ಪೂರ್ಣಫಲ ಹೇಳಲಾಗಿದೆಯೋ ಅದಕ್ಕಿಂತ ಹೆಚ್ಚು ಕೃಷ್ಣಾಜಲ ಸೇವನೆಯಿಂದ ಶುದ್ಧಿಯಾಗುವದು. ೩೨

गच्छ कृष्णां ततो राम क्षत्रहत्यापनुत्तये।
कुरु तत्र महापुण्यं कर्तव्यं सुमहत्तपः ॥ ३३ ॥

ಆದ್ದರಿಂದ ಹೇ ರಾಮ! ನೀನು ಕ್ಷತ್ರಿಯಹತ್ಯಾಜನಿತವಾದ ಪಾಪನಾಶಕ್ಕಾಗಿ ಕೃಷ್ಣಾನದಿಗೆ ಹೋಗು. ಅಲ್ಲಿ ಮಹಾಪುಣ್ಯವನ್ನು ಮಹತ್ತರವಾದ ತಪಸ್ಸನ್ನು ಮಾಡು. ೩೩

ददस्व सर्वदानानि चान्नदानं द्विजातिषु।
इत्याकर्ण्य मुनेर्वाक्यं जामदग्न्यः प्रतापवान् ॥ ३४ ॥

ಎಲ್ಲ ದಾನಗಳನ್ನು ಕೊಡು. ಬ್ರಾಹ್ಮಣರಿಗೆ ಅನ್ನದಾನ ಮಾಡು. ಹೀಗೆ ಮುನಿಗಳ ವಾಕ್ಯವನ್ನು ಕೇಳಿ ಪ್ರತಾಪಶಾಲಿಯಾದ ಜಾಮದಗ್ನ್ಯರು, ೩೪

जगाम परया भक्त्या ब्राह्मणैः सह सह्यजाम्।
अगस्त्येन समेतस्तु नागतीर्थं यतो महत् ॥ ३५ ॥

गौतमस्याश्रमे पुण्ये गौतमेश्वरसन्निधौ ।
अगस्त्यो मुनिशार्दूलः तत्र तेपे महत्तपः ॥ ३७ ॥

ಗೌತಮರ ಪುಣ್ಯತಮವಾದ ಆಶ್ರಮದಲ್ಲಿ ಗೌತಮೇಶ್ವರನ ಸನ್ನಿಧಾನದಲ್ಲಿ ಮುನಿಶ್ರೇಷ್ಠರಾದ ಅಗಸ್ತ್ಯರು ಮಹಾತಪಸ್ಸನ್ನು ಮಾಡಿದರು. ೩೭

तत्रागस्त्येश्वरो देव ह्यगस्त्येन सुपूजितः ।
तत्र स्नात्वा रेणुकेयः सन्तर्प्य पितृदेवताः ॥ ३८ ॥

ಅಗಸ್ತ್ಯರಿಂದ ಭಕ್ತಿಯಿಂದ ಪೂಜಿತನಾದ ಅಗಸ್ತ್ಯೇಶ್ವರನು ಅಲ್ಲಿ ಇದ್ದಾನೆ. ಅಲ್ಲಿ ಸ್ನಾನಮಾಡಿ ರೇಣುಕಾಪುತ್ರನಾದ ರಾಮನು ಪಿತೃದೇವತೆಗಳನ್ನು ತೃಪ್ತಿಪಡಿಸಿ, ೩೮

तपश्चचार विपुलं सह्यजादक्षिणे तटे ।
निराहारो जितश्वासो नित्यं त्रिषवणाप्लुतः ॥ ३९ ॥

ಕೃಷ್ಣಾ ದಕ್ಷಿಣ ತಟದಲ್ಲಿ ವಿಪುಲವಾದ ತಪಸ್ಸು ಮಾಡಿದನು. ನಿರಾಹಾರನಾಗಿ ಶ್ವಾಸಜಯಮಾಡಿ, ನಿತ್ಯದಲ್ಲಿಯೂ ಮೂರು ಸಾರೆ ಸ್ನಾನ ಮಾಡಿ, ೩೯

शतरुद्रेण मन्त्रेण प्रणवाद्यन्तकेन च ।
अगस्त्येनोपदिष्टेन समाराधयदीश्वरम् ॥ ४० ॥

ಆದ್ಯಂತದಲ್ಲಿ ಪ್ರಣವ ಹಾಕಿ ಅಗಸ್ತ್ಯರು ಹೇಳಿಕೊಟ್ಟ ಶತರುದ್ರ ಎಂಬ ಮಂತ್ರದಿಂದ ಈಶ್ವರನನ್ನು ಆರಾಧಿಸಿದನು. ೪೦

कोटिक्षत्रवधात् पापात् मुक्तोऽसौ सह्यजातटे ।
तावच्चचार सुमहत्तपस्तीव्रं शरच्छतम् ॥ ४१ ॥

ಕೃಷ್ಣಾತಟದಲ್ಲಿ ಕೋಟಿಕ್ಷತ್ರಿಯರ ವಧ ಮಾಡಿದ ಪಾಪದಿಂದ ಮುಕ್ತನಾಗುವ ವರೆಗೆ ನೂರು ವರ್ಷ ಮಹಾತೀವ್ರ ತಪಸ್ಸನ್ನು ಮಾಡಿದನು. ೪೧

शंकर उवाच –

कोटिक्षत्रवधाज्जातं यत्पापं तु दुरत्ययम् ।
तत्सर्वं भस्मसान्नीतं चिरं कृष्णाम्बुसेवनात् ॥ ४३ ॥

**ಶಿವನು ಅಂದನು –**

ಲೋಕದೃಷ್ಟಿಯಿಂದ, ಕೋಟಿ ಕ್ಷತ್ರಿಯರ ವಧದಿಂದ ಉಂಟಾದ, ದಾಟಲು ಅಸಾಧ್ಯವಾದ, ಆ ಪಾಪವೆಲ್ಲವೂ ಕೃಷ್ಣಾಜಲ ಸೇವನೆಯಿಂದ ಭಸ್ಮವಾಗಿ ಹೋಯಿತು. ೪೩.

किमन्यदिच्छसे वत्स यदभीष्टं वृणुष्व मे ।
इत्युक्तो देवदेवेन जामदग्न्यो महायशाः ॥ ४४ ॥

ಹೇ ವತ್ಸ !ಮತ್ತೇನು ಇಚ್ಛಿಸುವಿ ?ನಿನ್ನ ಅಭೀಷ್ಟವೇನು ?ಅದನ್ನು ಕೇಳಿಕೋ. ಹೀಗೆ ದೇವದೇವನಾದ ಶಂಕರನಿಂದ ಹೇಳಿಸಿಕೊಂಡ ಮಹಾಕೀರ್ತಿಯುಳ್ಳ ಪರಶುರಾಮನು, ೪೪

प्रणम्य देवमीशानं प्रोवाचेदं सुविस्मितः ।

राम उवाच –

अहो कृपानिधे रुद्र किमभीष्टमतःपरम् ॥ ४५ ॥

यदहं कोटिहत्यायाः मोचितः त्वत्प्रसादतः ।
यदि प्रसन्नो भगवान् भवानीवल्लभो मम ॥ ४६ ॥

ರುದ್ರನನ್ನು ಲೋಕದೃಷ್ಟಿಯಿಂದ ನಮಿಸಿ, ಈ ಮಾತನ್ನು ಆಶ್ಚರ್ಯದಿಂದ ಅಂದನು.

**ರಾಮನು ಅಂದನು –**

तिष्ठ नित्यं महादेव यावदाभूतसंप्लवम्।
इति प्रसादितो देवो जामदग्न्येन धीमता ॥ ४८ ॥

ಪ್ರಲಯದವರೆಗೆ ನಿತ್ಯದಲ್ಲಿಯೂ ನೀನು ಇರು. ಹೀಗೆ ಬುದ್ಧಿಮಂತರಾದ ಪರಶುರಾಮನಿಂದ ಪ್ರಸನ್ನೀಕರಿಸಿಕೊಂಡ ರುದ್ರನು, ೪೮

अगस्त्येशसमीपे वै कृष्णायां न्यवसच्चिरम्।
ततस्तस्मिन् महापुण्ये कोटितीर्थे महायशाः ॥ ४९ ॥

ಅಗಸ್ತ್ಯೇಶನ ಸಮೀಪದಲ್ಲಿ ಕೃಷ್ಣಾದಲ್ಲಿ ಬಹುಕಾಲ ವಾಸಮಾಡಿದನು. ಆಮೇಲೆ ಆ ಪುಣ್ಯಕರವಾದ ಕೋಟಿತೀರ್ಥದಲ್ಲಿ ಮಹಾಕೀರ್ತಿಉಳ್ಳ, ೪೯

रामश्चकार धर्मात्मा भूमिदानं महाफलम्।
कोटितीर्थे महापुण्ये सह्यजादक्षिणे तटे ॥ ५० ॥

ಧರ್ಮಾತ್ಮನಾದ ರಾಮನು ಮಹಾಫಲ ಕೊಡುವ ಭೂಮಿದಾನವನ್ನು ಮಾಡಿದನು. ಮಹಾಪುಣ್ಯಕರವಾದ ಕೃಷ್ಣಾ ದಕ್ಷಿಣ ದಡದಲ್ಲಿರುವ ಕೋಟಿತೀರ್ಥದಲ್ಲಿ, ೫೦

उपोष्य रजनीं एकां गां च दद्यात् पयस्विनीम्।
विप्राय वेदविदुषे गोसहस्रफलं लभेत् ॥ ५१ ॥

ಒಂದು ರಾತ್ರಿ ಉಪೋಷಣ ಮಾಡಿ, ಹಿಂಡುವ ಆಕಳನ್ನು ವೇದಜ್ಞಾನಿಯಾದ ಬ್ರಾಹ್ಮಣನಿಗೆ ಕೊಟ್ಟರೆ, ಸಾವಿರ ಗೋ ದಾನ ಫಲ ಬರುವದು. ೫೧

माघकृष्णचतुर्दश्यां स्नात्वा कोटीश्वरं शिवम्।
घृतेन स्नापयेद्यस्तु सुगन्धेनानुलेपयेत् ॥ ५२ ॥

ಮಾಘ ಕೃಷ್ಣ ಚತುರ್ದಶೀ ದಿವಸ ಸ್ನಾನಮಾಡಿ ಕೋಟೇಶ್ವರನೆಂಬ ಶಿವನನ್ನು ತುಪ್ಪದಿಂದ ಯಾರು ಸ್ನಾನಮಾಡಿಸಿ ಸುಗಂಧದಿಂದ ಲೇಪನ ಮಾಡುವರೋ, ೫೨

अर्चयेत् बिल्वपत्रैस्तु सरुद्रस्यालयं व्रजेत्।
माघे तु शुक्लपञ्चम्यां स्नात्वा नागह्रदेऽर्चयेत् ॥ ५३ ॥

ಇವುಗಳಿಂದ ಪೂಜಿಸುವನೋ ಅವನು ರುದ್ರಲೋಕಕ್ಕೆ ಹೋಗುವನು. ೫೫

यः सोमश्रवणे स्नात्वा तर्पयेत् पितृदेवताः ।
कोटीशमर्चयेत् भक्त्या सर्वपापैः प्रमुच्यते ॥ ५६ ॥

ಯಾವನು ಸೋಮವಾರ ಶ್ರವಣ ನಕ್ಷತ್ರವಿದ್ದಾಗ ಸ್ನಾನಮಾಡಿ ಪಿತೃದೇವತೆಗಳನ್ನು ತರ್ಪಣದಿಂದ ಸಂತೋಷಪಡಿಸಿ ಭಕ್ತಿಯಿಂದ ಕೋಟೀಶನನ್ನು ಪೂಜಿಸುವನೋ ಅವನು ಎಲ್ಲ ಪಾಪದಿಂದ ಮುಕ್ತನಾಗುವನು. ೫೬

ब्रह्मचर्येण यस्तिष्ठेत् यावत् कन्यागते गुरुः ।
सर्वपापविशुद्धात्मा रुद्रलोकं स गच्छति ॥ ५७ ॥

ಗುರು ಕನ್ಯಾಗತದಲ್ಲಿರುವವರೆಗೆ ಬ್ರಹ್ಮಚರ್ಯದಿಂದ ಯಾರು ಇರುವರೋ ಸಮಸ್ತ ಪಾಪರಹಿತರಾಗಿ ಅವರು ರುದ್ರಲೋಕಕ್ಕೆ ಹೋಗುವರು. ೫೭

कृच्छ्रैस्तु वत्सरं विप्रा यः क्षिपेद् रामसन्निधौ ।
निर्धूतकल्मषो भूत्वा स गच्छेत् वैष्णवं पदम् ॥ ५८ ॥

ರಾಮನ ಸನ್ನಿಧಾನದಲ್ಲಿ ಒಂದು ವರ್ಷ, ಎಲೈ ಬ್ರಾಹ್ಮಣರೇ ! ಕೃಚ್ಛ್ರದಿಂದ ಯಾರು ಜೀವಿಸುವರೋ ಅವರು ಪಾಪರಹಿತರಾಗಿ ವಿಷ್ಣುಲೋಕಕ್ಕೆ ಹೋಗುವರು. ೫೮

इति कोटीश्वरं तीर्थं सर्वपापप्रणाशनम् ।
मया वः कथितं विप्राः श्रवणात् सर्वकामदम् ॥ ५९ ॥

ಹೀಗೆ ಕೋಟೀಶ್ವರ ಎಂಬ ಎಲ್ಲ ಪಾಪ ನಾಶ ಮಾಡುವ ತೀರ್ಥದ ಬಗ್ಗೆ ಹೇ ಬ್ರಾಹ್ಮಣರೇ ! ನಾನು ಹೇಳಿದೆ. ಇದು ಕೇಳುವದರಿಂದ ಎಲ್ಲರ ಇಚ್ಛೆಯನ್ನು ಪೂರಯಿಸುವದು. ೫೯

॥ इति श्रीस्कान्दे कृष्णामाहात्म्ये कोटितीर्थवर्णनं नाम षोडशोऽध्यायः ॥

❀ ❀ ❀

ततः परं महातीर्थं कृष्णाद्वीपे द्विजोत्तमाः ।
द्विगुणे द्वे सहस्रे तु धनुषां शकुनं महत् ॥ १ ॥

ಸ್ಕಂದನು ಅನ್ನುತ್ತಾನೆ –

ಎಲೈ ಬ್ರಾಹ್ಮಣರೇ ! ಆಮೇಲೆ ಕೃಷ್ಣಾದ್ವೀಪದಲ್ಲಿ ನಾಲ್ಕು ಸಾವಿರ ಧನುಸ್ಸಿನ ಅಂತರದಲ್ಲಿ 'ಶಕುನ' ಎಂಬ ಹೆಸರಿನ ಮಹಾತೀರ್ಥವಿದೆ. ೧

पुरा रथन्तरे कल्पे निचूलस्वामिनं प्रति ।
आजगाम महावर्ष्मा पक्षीभूत्वा सुरेश्वरः ॥ २ ॥

ಹಿಂದಕ್ಕೆ ರಥಂತರ ಎಂಬ ಕಲ್ಪದಲ್ಲಿ ನಿಚೂಲ ಎಂಬ ಸ್ವಾಮಿಯನ್ನು ಕುರಿತು ಇಂದ್ರನು ದೊಡ್ಡ ಪಕ್ಷಿಯ ರೂಪ ತಾಳಿ ಬಂದನು. ೨

जिज्ञासुस्तमृषिं श्रेष्ठं वदान्यं सत्यवादिनम् ।
तपस्विनं महाभागं नरमांसमयाचत ॥ ३ ॥

ಸತ್ಯವಾದಿಯೂ, ದಾನಶೀಲನೂ, ಆ ಶ್ರೇಷ್ಠ ಋಷಿ ಮಹಾಭಾಗ್ಯವಂತನೂ, ತಪಸ್ವಿಯೂ ಆದ ಅವನನ್ನು ಪರೀಕ್ಷಿಸಬೇಕೆಂದು ನರಮಾಂಸವನ್ನು ಕೇಳಿದನು. ೩

तं दृष्ट्वा प्रहसन् विप्रः प्रोवाचेदं सुविस्मितः ।
गृध्र ते नरमांसेन स्वयं त्वं किं न पश्यसि ॥ ४ ॥

ಆ ಪಕ್ಷಿಯನ್ನು ನೋಡಿ ಆಶ್ಚರ್ಯಯುಕ್ತನಾಗಿ ನಗುತ್ತ ಆ ಬ್ರಾಹ್ಮಣನು ಎಲೈ ಪಕ್ಷಿಯೇ ನಿನಗೆ ನರ ಮಾಂಸದಿಂದ ಏನು ಪ್ರಯೋಜನ ? ನೀನೇ ಏಕೆ ನೋಡಲಾರಿ ? ಎಂದು ಅಂದನು. ೪

अनेन किं वितर्केण देयं यद्याचितं त्वया ।
इति श्रुत्वा निजान् पुत्रान् आहूयेदं वचोऽब्रवीत् ॥ ५ ॥

ನಿಚೂಲನು ಅಂದನು –

ಮನುಷ್ಯರಲ್ಲಿ ನೀವು ಮಹಾ ಪುಣ್ಯವಂತರು. ನನ್ನ ಆಶ್ರಮಕ್ಕೆ ಬಂದ ಅತಿಥಿಯು ವಿಮುಖನಾಗಿ ಹೋಗುವದು ಬೇಡ. ಆದ್ದರಿಂದ ನಿಮ್ಮ ಮಾಂಸಗಳನ್ನು ಕೊಡಿರಿ. ೬

इत्युक्तवन्तं पितरं प्रोचुः पुत्राः परं वचः।
यदिदं भगवन् सारं यदिदं धर्मसाधनम् ॥ ७ ॥

ಹೀಗೆ ಹೇಳಿದ ತಂದೆಯನ್ನು ಕುರಿತು ಮಕ್ಕಳು ಅಂದರು– ಪೂಜ್ಯರೇ! ಈ ಶರೀರವು ಶ್ರೇಷ್ಠವೂ ಧರ್ಮ ಸಾಧನವೂ ಆಗಿದೆ. ೭

स्वर्गमोक्षाय यत्पात्रं वृथा तद्दीयते कथम्।
इति तेषां समेतानां आकर्ण्य परमं वचः ॥ ८ ॥

ಸ್ವರ್ಗಕ್ಕೂ ಮೋಕ್ಷಕ್ಕೂ ಸಾಧನವಾದ ಇದನ್ನು ಹೇಗೆ ವ್ಯರ್ಥವಾಗಿ ಕೊಡಲು ಶಕ್ಯ, ಹೀಗೆ ಆ ಎಲ್ಲರ ಮಾತನ್ನು ಕೇಳಿ. ೮

शशाप स मुनिः क्रोधात् तान् कलेवरलोलुपान्।
पक्षित्वं यात मे वाक्यं अकुर्वाणाः सुखप्रदम् ॥ ९ ॥

ಆ ಮುನಿಯು ಸಿಟ್ಟಿನಿಂದ ಶರೀರಲೋಲುಪರಾದ ಅವರನ್ನು ಕುರಿತು ಸುಖಕರವಾದ ನನ್ನ ಮಾತನ್ನು ಕೇಳದ ನೀವೆಲ್ಲರೂ ಪಕ್ಷಿಗಳಾಗಿರಿ ಎಂದು ಶಾಪ ಕೊಟ್ಟನು. ೯

ममाशुश्रूषणात्सद्यः स्मृतिं नैवोपलप्स्यथ।
इत्युक्त्वा तान् अतिथये स्वमांसं दातुमुद्यतः ॥ १० ॥

ನನ್ನ ಸೇವೆ ಮಾಡದದ್ದ ಮೂಲಕ ನಿಮಗೆ ಸ್ಮರಣವೇ ಇರುವದಿಲ್ಲ. ಹೀಗೆ ಹೇಳಿ ಆ ಅತಿಥಿಗೆ ತನ್ನ ಮಾಂಸವನ್ನು ಕೊಡಲು ಹೊರಟನು. ೧೦

इत्याकर्ण्य प्रियं वाक्यं दृष्ट्वा पुत्रान् तथाविधान्   ॥ १२ ॥

ಪಕ್ಷಿರೂಪದಿಂದ ಬಂದಿದ್ದೇನೆ. ಅದ್ದರಿಂದ ಸಾಹಸವನ್ನು ಮಾಡಬೇಡ. ಹೀಗೆ ಪ್ರಿಯವಾದ ವಾಕ್ಯವನ್ನು ಕೇಳಿ, ಪಕ್ಷಿಗಳಾದ ಮಕ್ಕಳನ್ನು ನೋಡಿ, ೧೨

शशाप तमपि क्रोधात् शकुनित्वं शरच्छतम् ।
भूत्वाऽगस्त्यं समासाद्य विमुक्तः स्वर्गमेष्यसि   ॥ १३ ॥

ಅವನಿಗೂ ಕ್ರೋಧದಿಂದ ನೀನು ನೂರು ವರ್ಷಗಳವರೆಗೆ ಪಕ್ಷಿಯಾಗಿ ಅಗಸ್ತ್ಯರನ್ನು ಹೊಂದಿ ಶಾಪವಿಮುಕ್ತನಾಗಿ ಸ್ವರ್ಗಕ್ಕೆ ಹೋಗುವಿ ಎಂದು ಶಾಪಕೊಟ್ಟನು. ೧೩

इत्युक्तः शकुनिर्भूत्वा विचचार स देवराट् ।
चरता कर्हिचित् तेन दृष्टोऽगस्त्यो महामुनिः   ॥ १४ ॥

ಹೀಗೆ ಹೇಳಿದ ನಂತರ ಆ ದೇವರಾಜನು ಪಕ್ಷಿಯಾಗಿ ಸಂಚರಿಸಿದನು. ಹೀಗೆ ಸಂಚರಿಸುವ ಅವನು ಒಮ್ಮೆ ಮಹಾಮುನಿಗಳಾದ ಋಷಿಗಳನ್ನು ಕಂಡನು. ೧೪

शकुनिस्तं प्रणम्याह पश्य मे चेष्टितं मुने ।
क्व देवराजत्वमकुंठसत्वं क्व कीटभक्ष्यं हि शकुन्तवर्ष्म   ॥ १५ ॥

ಆ ಪಕ್ಷಿಯು ಅವರನ್ನು ನಮಿಸಿ, ಹೇ ಋಷಿಯೇ !ನನ್ನ ವ್ಯಾಪಾರವನ್ನು ನೋಡು. ಅಕುಂಠಿತವಾದ ಸತ್ವವುಳ್ಳ ಇಂದ್ರತ್ವವು ಎಲ್ಲಿ, ಕೀಟಗಳನ್ನು ತಿನ್ನುವ ಈ ಪಕ್ಷಿ ಶರೀರವೆಲ್ಲಿ. ೧೫

इत्थं हि रूपाणि विकुर्वतां सता भवन्ति सन्तो न हि कोपनिष्ठुराः ।
निचुलस्वामिनः कोपान्मुञ्च मां त्वं महामुने   ॥ १६ ॥

ಹೀಗೆ ರೂಪಗಳನ್ನು ವಿಕೃತವನ್ನಾಗಿ ಮಾಡುವವರಿಗೆ ಸಜ್ಜನರು ಕೋಪದಿಂದ ನಿಷ್ಠುರಾಗುವುದಿಲ್ಲ. ನಿಚುಲ ಎಂಬ ಸ್ವಾಮಿಯ ಸಿಟ್ಟಿನಿಂದ ಹೇ ಮಹಾಮುನಿಗಳೇ ! ನನ್ನನ್ನು ಬಿಡಿಸಿರಿ. ೧೬

ಎಂದು ಅಂದರು. ೧೭–೧೮

इत्युक्तो मुनिना शक्रो ह्यगस्त्येन महात्मना।
जगाम सह्यजातीरं उत्तरं सर्वपापहम्  ॥ १

ಮಹಾತ್ಮರಾದ ಅಗಸ್ತ್ಯ ಮುನಿಗಳಿಂದ ಹೀಗೆ ಹೇಳಿಸಿಕೊಂಡ ಇಂದ್ರನು
ಪಾಪವನ್ನೂ ನಾಶ ಮಾಡುವ ಕೃಷ್ಣಾ ನದಿಯ ಉತ್ತರ ತೀರಕ್ಕೆ ಹೋದನು. ೧೯

तत्र तप्त्वा तपस्तीव्रं व्रतस्थः शकुनिः स्वयम्।
कृष्णाद्वीपं समासाद्य ध्यानयोगपरायणः  ॥ २

ಅಲ್ಲಿ ಆ ಪಕ್ಷಿಯು ಸ್ವಯಂ ವ್ರತಮಾಡುತ್ತ ತೀವ್ರ ತಪಸ್ಸನ್ನು ಮಾಡುತ್ತ ಕೃ
ದ್ವೀಪಕ್ಕೆ ಬಂದು ಧ್ಯಾನಯೋಗದಲ್ಲಿ ಆಸಕ್ತವಾಯಿತು. ೨೦

तस्य प्रसन्नो भगवान् शिवः कृष्णांबुसेवनात्।
उवाच परमप्रीत्या ब्रूहि शक्र तवेप्सितम्  ॥ २

ಕೃಷ್ಣಾಜಲ ಸೇವನೆಯಿಂದ ಭಗವಾನ್ ಶಿವನು ಅವನಿಗೆ ಪ್ರಸನ್ನನಾಗಿ, ಹೇ ಇಂ
ನಿನ್ನ ಇಷ್ಟವೇನು ಹೇಳು ? ಎಂದು ಪ್ರೀತನಾಗಿ ಅಂದನು. ೨೧

शकुनिः तं प्रणम्येशं प्रोवाच मुदनिर्भरः।
यदि प्रसन्नो भगवान् मन्नाम्ना तीर्थमुत्तमम्  ॥ २

ಆನಂದದಿಂದ ಯುಕ್ತವಾದ ಆ ಪಕ್ಷಿಯು, ನಮಸ್ಕರಿಸಿ ಶಂಕರನಿಗೆ ಅಂದಿ
ಭಗವಂತನೇ ! ನೀನು ಪ್ರಸನ್ನನಾಗಿದ್ದರೆ, ಈ ಉತ್ತಮ ತೀರ್ಥವು ನನ್ನ ಹೆಸರಿನಿಂದ,

भूयात् त्वं च महादेव द्वीपे तिष्ठ सुपुण्यदे।
तथेत्युक्त्वा महादेवः कृष्णाद्वीपे सुपुण्यदे  ॥ २

ಪ್ರಸಿದ್ಧವಾಗಲಿ. ನೀನಾದರೂ ಪುಣ್ಯಪ್ರದವಾದ ಈ ದ್ವೀಪದಲ್ಲಿ, ಮಹಾದೇವ
ಇರು. ಎಂದು ಕೇಳಲು ಹಾಗೇ ಆಗಲಿ ಎಂದು ಹೇಳಿದ ಶಿವನು, ಪುಣ್ಯತಮವ

यस्य संस्पर्शनादेव सर्वपापैः प्रमुच्यते।
माधवस्यासिते पक्षे चतुर्दश्यामुपोषितः ॥ २५ ॥

ಯಾವ ತೀರ್ಥದ ಸ್ಪರ್ಶ ಮಾತ್ರದಿಂದಲೇ ಎಲ್ಲ ಪಾಪಗಳಿಂದ ಮುಕ್ತನಾಗುವನು. ವೈಶಾಖ ಕೃಷ್ಣಪಕ್ಷ ಚತುರ್ದಶೀ ದಿವಸ ಉಪೋಷಣಮಾಡಿ. ೨೫

स्नापयेत् शकुनेशं तु घृतप्रस्थेन सत्तमः।
चन्दनेन सुगन्धेन कुंकुमेनापि चार्चयेत् ॥ २६ ॥

तण्डुलैः शातपत्रैश्च बिल्वपत्रैर्विशेषतः।
अर्चयित्वा महेशानं गुग्गुलं सघृतं दहेत् ॥ २७ ॥

ಶಕುನೇಶನನ್ನು, ಘೃತಪ್ರಸ್ಥದಿಂದ ಸ್ನಾನ ಮಾಡಿಸುವನೋ, ಶ್ರೇಷ್ಠನಾದ ಅವನು ಸುಗಂಧ ವುಳ್ಳ ಚಂದನದಿಂದ ಹಾಗೂ ಕುಂಕುಮದಿಂದ ಅರ್ಚಿಸುವನೋ, ಅಕ್ಕಿ, ಕಮಲ, ಬಿಲ್ವಪತ್ರಗಳಿಂದ ವಿಶೇಷವಾಗಿ ರುದ್ರನನ್ನು ಪೂಜಿಸಿ ತುಪ್ಪದಿಂದ ಕೂಡಿದ ಗುಗ್ಗುಳವನ್ನು ಸುಡಬೇಕು. ೨೬-೨೭

प्रातः स्नात्वा त्वमावास्यां ब्राह्मणान् भोचयेत्तु यः।
स याति रूद्रसालोक्यं यावदाभूतसंप्लवम् ॥ २८ ॥

ಅಮಾವಾಸ್ಯಾ ದಿನ ಪ್ರಾತಃಸ್ನಾನ ಮಾಡಿ ಯಾರು ಬ್ರಾಹ್ಮಣರನ್ನು ಭೋಜನ ಮಾಡಿಸುವರೋ, ಅವರು ಒಂದು ಕಲ್ಪದವರೆಗೆ ರುದ್ರಸಾಲೋಕ್ಯವನ್ನು ಹೊಂದುವರು. ೨೮

यः सोमश्रवणे स्नात्वा शकुनेशं समर्चयेत्।
ब्राह्मणान् मोचयेद्यस्तु सर्वपापैः प्रमुच्यते ॥ २९ ॥

ಯಾರು ಸೋಮವಾರ ಶ್ರವಣ ನಕ್ಷತ್ರ ಇದ್ದಾಗ ಸ್ನಾನಮಾಡಿ ಶಕುನೇಶನನ್ನು ಚನ್ನಾಗಿ ಪೂಜಿಸುವನೋ, ಬ್ರಾಹ್ಮಣ ಭೋಜನ ಮಾಡಿಸುವನೋ, ಅವನು ಎಲ್ಲ ಪಾಪಗಳಿಂದ ಮುಕ್ತನಾಗುವನು. ೨೯

सप्तदशोऽध्यायः ॥



## ॥ अथ अष्टादशोऽध्यायः ॥

स्कन्द उवाच –

अतःपरं महातीर्थं त्रिषु लोकेषु विश्रुतम् ।
देवर्षिपितृभिर्जुष्टं दर्शनात् सर्वपापहम् ॥

ಸ್ಕಂದನು ಅನ್ನುತ್ತಾನೆ.

ಇನ್ನು ಮೇಲೆ ಮೂರು ಲೋಕದಲ್ಲಿ ಪ್ರಖ್ಯಾತವಾದುದೂ ದೇವಋಷಿ
ಗಳಿಂದ ಸೇವಿತವಾದುದೂ ದರ್ಶನದಿಂದಲೇ ಪಾಪ ಕಳೆಯುವಂತಹದೂ
ಮಹಾತೀರ್ಥವು. ೧

संयोगः कृष्णवेण्योर्यो योजनान्ते द्विजोत्तमाः ।
येनेयं कृष्णवेणी तु त्रिषु लोकेषु गीयते ॥

ಎಲೈ ಬ್ರಾಹ್ಮಣೋತ್ತಮರೇ ! ನಾಲ್ಕು ಹರದಾರಿಯ ಕೊನೆಗೆ ಕೃಷ್ಣಾ ಮ
ವೇಣೀ ಇವುಗಳು ಕೂಡುವವು. ಯಾವುದರಿಂದ ಮೂರು ಲೋಕದಲ್ಲಿ ಕೃಷ್ಣವೇ
ಎಂದು ಪ್ರಸಿದ್ಧಳಾಗಿದ್ದಾಳೆ. ೨

कृष्णा च या जगच्छान्त्यै ब्रह्मणा निर्मिता पुरा ।
वेणा प्राक् कृष्णया युक्ता महतीं ख्यातिमाप सा ॥

ಬ್ರಹ್ಮದೇವರಿಂದ ಜಗತ್ತಿನ ಶಾಂತಿಗಾಗಿ ಕೃಷ್ಣಾ ಹಿಂದಕ್ಕೆ ನಿರ್ಮಿತಳಾದಳು. ವೇ
ಎಂಬುವಳು ಮೊದಲು ಕೃಷ್ಣಾದಿಂದ ಯುಕ್ತಳಾಗಿ ಮಹಾಖ್ಯಾತಿಯನ್ನು ಪಡೆದಳು.

तत्प्रयागसमं तीर्थं भुक्तिमुक्तिफलप्रदम् ।
महापापक्षयकरं कलौ कन्यागते गुरौ ॥

ಅದು ಪ್ರಯಾಗಕ್ಕೆ ಸಮಾನವಾದ ತೀರ್ಥ. ಭುಕ್ತಿಮುಕ್ತಿ ಎರಡನ್ನೂ ಕೊ

ऋषयः ऊचुः –

स्वामिन् सर्वज्ञ ते स्कन्द पृच्छामो विविधाः कथाः ।
याः श्रुत्वा मनुजो लोके गतिं यास्यति सद्गुरो ॥ ६ ॥

**ಋಷಿಗಳು ಅನ್ನುತ್ತಾರೆ**

ಸರ್ವಜ್ಞನಾದ ಹೇ ಸ್ವಾಮೀ ! ಷಣ್ಮುಖನೇ ! ಗುರುವೇ ! ಮನುಜನು ಯಾವ ಕಥೆಗಳನ್ನು ಕೇಳಿ ಸದ್ಗತಿಯನ್ನು ಹೊಂದುವರೋ ಅಂತಹ ಅನೇಕ ಕಥನಗಳನ್ನು ಕೇಳಿದ್ದೇವೆ. ೬

कृष्णा विष्णुतनुः साक्षात् वेणा देवो महेश्वरः ।
उभयोः सङ्गमो यत्र मुक्तिस्तत्र न संशयः ॥ ७ ॥

ಕೃಷ್ಣಾ ನದಿಯು ಸಾಕ್ಷಾತ್ ಶ್ರೀವಿಷ್ಣುವಿನ ರೂಪ, ವೇಣಾ ಮಹೇಶ್ವರನ ರೂಪ, ಇವೆರಡರ ಸಂಗಮವು ಎಲ್ಲಿದೆಯೋ ಅಲ್ಲಿ ನಿಃಸಂದೇಹವಾಗಿ ಮುಕ್ತಿ ದೊರೆಯುವದು. ೭

एतद्विस्तार्य नो ब्रूहि सर्वज्ञोऽसि महामते ।
को मुक्तः सङ्गमे ह्यस्मिन् दुर्धरादघसङ्गतः ॥ ८ ॥

ಹೇ ಮಹಾಬುದ್ಧಿ ಉಳ್ಳವನೆ! ಇದನ್ನು ವಿಸ್ತಾರ ಮಾಡಿ ಹೇಳು. ನೀನು ಸರ್ವಜ್ಞನಿರುವಿ. ದಾಟಲು ಅಸಾಧ್ಯವಾದ ಪಾಪಸಂಚಯದಿಂದ ಈ ಸಂಗಮದಲ್ಲಿ ಯಾರು ಮುಕ್ತರಾಗಿದ್ದಾರೆ ?೮

स्कन्द उवाच –

श्रृणुध्वं मुनयः सर्वे कथां पौराणिकीं शुभाम् ।
नन्दिग्रामे पुरा कश्चिद्देवशर्मेति विश्रुतः ॥ ९ ॥

**ಸ್ಕಂದನು ಅಂದನು**

ಎಲೆ, ಎಲ ಮು ಗಳೇ ! ಪ್ರಾಚೀನವಾದ ಎ ಪೌರಾಣಿ ಕಥೆ ನು ೧.

ब्रह्मद्रोहकरो नित्यं कृतघ्नः कामुकोऽबुधः ।
नित्यं धूर्तक्रियासक्तः परस्त्रीलंपटः सदा ॥ ११

ನಿತ್ಯದಲ್ಲಿ ಬ್ರಹ್ಮದ್ರೋಹ ಮಾಡುವವನೂ, ಕೃತಘ್ನನೂ, ಕಾಮುಕನು ಅಜ್ಞಾನಿಯೂ, ನಿತ್ಯದಲ್ಲಿ ಜೂಜಾಡುವವನೂ, ಯಾವಾಗಲೂ ಪರಸ್ತ್ರೀಲಂಪಟನ ಆಗಿದ್ದನು. ೧೧

सुहृद्भिः बोधितो नित्यं साधुभिः पुण्यगौरवात् ।
नैवाकरोत्स तद्वाक्यं दुर्वृत्तः पापनिष्ठुरः ॥ १२

ಸಜ್ಜನರಿಂದಲೂ ಗೆಳೆಯರಿಂದಲೂ ಪುಣ್ಯ ಗೌರವದಿಂದ ನಿತ್ಯದಲ್ಲಿ ಹೇಳಿ ಕೊಂಡರೂ ಪಾಪದಿಂದ ನಿಷ್ಠುರನೂ ದುರ್ವ್ಯಾಪಾರಿಯೂ ಆದ ಅವನು ಆ ವಾಕ್ಯವನ ಕೇಳಿ ಆ ಚರಿಸಲಿಲ್ಲ. ೧೨

एवं समगमत् कालो दुर्वृत्तस्य सुदुर्मतेः ।
कदाचित् दैवयोगेन वसिष्ठं स ददर्श ह ॥ १३

ಹೀಗೆ ದುರಾಚಾರಿಯೂ ದುರ್ಬುದ್ಧಿ ಉಳ್ಳವನೂ ಆದ ಅವನ ಕಾಲವು ಹೀ ಹೋಯಿತು. ಒಮ್ಮೆ ದೈವಯೋಗದಿಂದ ವಶಿಷ್ಠರನ್ನು ಅವನು ನೋಡಿದನು. ೧೩

वसिष्ठोऽपि च तं ज्ञात्वा असकृत्तं विनिन्द्य च ।
किमिदं कुरुषे मूढ द्विज त्वं नाशितं कुले ॥ १४

ವಶಿಷ್ಠರಾದರೂ ಅವನನ್ನು ತಿಳಿದು ಮತ್ತೆ ಮತ್ತೆ ನಿಂದಿಸಿ, ಹೆ ಮೂರ್ಖನೆ ಇದನ್ನೇನು ಮಾಡುವಿ. ನಿನ್ನ ಕುಲದಲ್ಲಿ ಬ್ರಾಹ್ಮಣ್ಯವನ್ನು ನಾಶ ಮಾಡಿದೆ. ೧೪

सर्वेषां प्राणिनां मध्ये मानुष्यमतिदुर्लभम् ।
ततोऽपि दुर्लभं जन्म ब्राह्मणानां सतां कुले ॥ १५

ಎಲ್ಲ ಪ್ರಾಣಿಗಳ ಮಧ್ಯದಲ್ಲಿ ಮನುಷ್ಯ ಜನ್ಮವು ದುರ್ಲಭವಾದುದು ಆದರಲ್ಲಿಯೂ ಸಜ್ಜನ ಬ್ರಾಹ್ಮಣರಲ್ಲಿ ಜನ್ಮವು ದುರ್ಲಭವಾದುದು. ೧೫

क्षणशः सुखमायाति कामलब्धेन चेतसा ।

एवं ज्ञात्वाऽनिशं धीमान् पुण्यं कर्म समाचरेत्।
अनिवृत्य कृतं कर्म प्रायश्चित्तादिना द्विज ॥ १७ ॥

ಹೀಗೆ ಬುದ್ಧಿವಂತನಾದವನು ನಿತ್ಯ ತಿಳಿದು ಪುಣ್ಯಕರ್ಮವನ್ನು ಆಚರಿಸಬೇಕು. ಮಾಡಿದ ಕರ್ಮ ಕೆಟ್ಟೆಂದು ತಿಳಿದು ಪ್ರಾಯಶ್ಚಿತ್ತಾದಿಗಳನ್ನು ಮಾಡದಿದ್ದಲ್ಲಿ ಹೇ ಬ್ರಾಹ್ಮಣನೇ ! ೧೭

श्वपचत्वं समायाति ब्रह्मराक्षसजन्म च।
वसिष्ठस्य तदा वाक्यं श्रुत्वा प्रोवाच मन्दधीः ॥ १८ ॥

ಶ್ವಪಚನಾಗುವನು, ಮತ್ತು ಬ್ರಹ್ಮರಾಕ್ಷಸ ಜನ್ಮತಾಳುವನು. ವಸಿಷ್ಠರ ಮಾತನ್ನು ಕೇಳಿದಾಗ ಮಂದಬುದ್ಧಿ ಉಳ್ಳ ಅವನು, ೧೮

यज्ञशर्मोवाच –

त्राहि मां कृपया स्वामिन् निरयाद्दुःसहाद्गुरो।
कस्त्राता नरके मग्नं शरणागतवत्सल ॥ १९ ॥

**ಯಜ್ಞಶರ್ಮನು ಅಂದನು –**

ಹೇ ಸ್ವಾಮಿ, ಗುರುಗಳೇ ! ದಯೆಯಿಂದ ದುಃಸಹವಾದ ನರಕದಿಂದ ನನ್ನನ್ನು ರಕ್ಷಿಸಿರಿ. ಶರಣಾಗತರಲ್ಲಿ ಸ್ನೇಹ ಉಳ್ಳವರೇ, ನರಕದಲ್ಲಿ ಬಿದ್ದ ನನ್ನನ್ನು ರಕ್ಷಿಸುವವರು ಯಾರು ? ೧೯

न केनापीदृशं वाक्यं भाषितं मुनिसत्तम।

वसिष्ठ उवाच –

साधु साधु महाप्राज्ञ श्रुणुष्वावहितो भव ॥ २० ॥

ಹೇ ಮುನಿಶ್ರೇಷ್ಠರೇ ! ಯಾರೂ ಇಂತಹ ಮಾತನ್ನು ಆಡಿರಲಿಲ್ಲ.

**ವಶಿಷ್ಠರು ಅಂದರು**

ಹೇ ಮಹಾಬುದ್ಧಿ ಉಳ್ಳವನೇ ! ಒಳ್ಳೇದಾಯಿತು. ಏಕಾಗ್ರನಾಗಿ ಕೇಳು. ೨೦

एवं श्रुत्वा वसिष्ठस्य वाक्यं पीयूषसन्निभम् ॥ २२

ಆ ಮಹತ್ತರ ಪುಣ್ಯದಿಂದ ಶಾಶ್ವತವಾದ ಗತಿಯನ್ನು ಹೊಂದುವಿ. ಹೀ
ಅಮೃತದಂತಿರುವ ವಶಿಷ್ಠರ ಮಾತನ್ನು ಕೇಳಿ, ೨೨

सङ्गमे कृष्णवेण्यास्तु यज्ञशर्मा गतस्तदा ।
ददर्श कृष्णवेणां तां प्रणम्य परया मुदा ॥ २३

ಯಜ್ಞಶರ್ಮನು ಕೃಷ್ಣಾ ಮತ್ತು ವೇಣಾ ಇವುಗಳ ಸಂಗಮಕ್ಕೆ ಹೋಗಿ ಬಹ
ಸಂತೋಷದಿಂದ ನಮಸ್ಕರಿಸಿ, ನೋಡಿ, ೨೩

स्नात्वा दत्वा च हुत्वा च सङ्गमेशं प्रपूज्य च ।
किंचित् कालं तत्र वसन् तपः स कृतवान् द्विजः ॥ २४

ಸ್ನಾನಮಾಡಿ, ದಾನಮಾಡಿ, ಹೋಮಮಾಡಿ, ಸಂಗಮೇಶನನ್ನು ಪೂಜಿಸಿ ಕೆಲ
ಕಾಲ ಅಲ್ಲಿದ್ದು ಆ ಬ್ರಾಹ್ಮಣನು ತಪಸ್ಸನ್ನು ಮಾಡಿದನು. ೨೪

विमानमाकाशगतं विलोक्य किमेतदित्येव विचिन्त्य चेतसा ।
श्रीविष्णुभक्तावपि देवरूपिणौ चतुर्भुजौ हेमपिशङ्गवाससौ ॥ २५ ॥

आगम्य सहसा तौ तं निन्यतुर्देवसन्निधौ ।
किंकिणीजालसंयुक्ते विमाने तं निधाय च ॥ २६

ಆಕಾಶದಲ್ಲಿ ಬಂದ ವಿಮಾನವನ್ನು ನೊಡಿ ಇದೇನೆಂದು ಮನಸ್ಸಿನಿಂ
ಯೋಚಿಸುವಾಗ ನಾಲ್ಕು ಕೈ, ಸುವರ್ಣದಂತೆ ಪೀತವಾದ ವಸ್ತ್ರವುಳ್ಳ ದೇವರೂಪಿಗಳಾ
ಶ್ರೀವಿಷ್ಣುವಿನ ಭಕ್ತರು ಬಂದು ಒಮ್ಮೆಲೇ ಅವನನ್ನು ದೇವರ ಸನ್ನಿಧಾನಕ್ಕೆ ಕರೆದುಕೊಂಡ
ಕಿರುಗಂಟೆಗಳ ಸಾಲುಗಳಿಂದ ಕೂಡಿದ ವಿಮಾನದಲ್ಲಿ ಕೂಡಿಸಿಕೊಂಡು ಹೋದರು
೨೫–೨೬

वैकुंठभवनं प्राप्तः कृष्णवेण्याः प्रसादतः ।

ಎಲ್ಲ ಮಹಾ ಬಲಾಢ್ಯರಾದ ದೇವತೆಗಳು, ಸಪ್ತರ್ಷಿಗಳು, ಸಿದ್ಧರು, ಪಿತೃಗಳು ಎಲ್ಲಿ ತೃಪ್ತರಾದರೋ ಆ ತೀರ್ಥವು ಭೂಮಿಯಲ್ಲಿ ಪ್ರಖ್ಯಾತವಾದುದು. ೨೮

**तस्मात् सर्वप्रयत्नेन कृष्णवेणीसमागमः ।**
**सेव्यते सततं सद्भिः स्वर्गमोक्षार्थसाधनः ॥ २९ ॥**

ಆದ್ದರಿಂದ ಸರ್ವಪ್ರಯತ್ನದಿಂದ ಸ್ವರ್ಗ ಮೋಕ್ಷಕ್ಕೆ ಸಾಧನವಾದ ಕೃಷ್ಣವೇಣೀ ಸಮಾಗಮವು ಸಜ್ಜನರಿಂದ ಯಾವಾಗಲೂ ಸೇವಿಸಲ್ಪಡುವದು. ೨೯

**सर्वपापाक्षयकरं सर्वसिद्धिकरं नृणाम् ।**
**अमासोमसमायोगे कृष्णवेण्योस्तु सङ्गमे ॥ ३० ॥**

ಎಲ್ಲ ಪಾಪವನ್ನು ದೂರಮಾಡುವ ಮನುಷ್ಯರಿಗೆ, ಎಲ್ಲ ಸಿದ್ಧಿಯನ್ನು ಉಂಟುಮಾಡುವ ತೀರ್ಥವು, ಅಮಾವಾಸ್ಯ ಹಾಗೂ ಸೋಮವಾರ ಇವುಗಳ ಯೋಗವಿದ್ದಾಗ ಕೃಷ್ಣವೇಣೀ ಸಂಗಮದಲ್ಲಿ. ೩೦

**सवत्सां कपिलां दत्वा गोसहस्रफलं लभेत् ।**
**यः सोमश्रवणे स्नात्वा सङ्गमेशं समर्चयेत् ॥ ३१ ॥**
**महाफलैकादशभिः तस्य वंशो न हीयते ।**
**सङ्गमे कृष्णवेणायाः राहुग्रस्ते दिवाकरे ॥ ३२ ॥**

ಕರುವು ಉಳ್ಳ ಕಪ್ಪು ಆಕಳನ್ನು ಕೊಟ್ಟವನು ಸಾವಿರ ಗೋ ಕೊಟ್ಟ ಫಲವನ್ನು ಹೊಂದುವನು. ಯಾರು ಸೋಮವಾರ ಶ್ರವಣಾನಕ್ಷತ್ರ ಯೋಗವಿದ್ದಾಗ ಸ್ನಾನಮಾಡಿ ಸಂಗಮೇಶ್ವರನನ್ನು ಮಹಾಫಲಪ್ರದವಾದ ಏಕಾದಶ ರುದ್ರದಿಂದ ಪೂಜಿಸುವರೋ ಅವರ ವಂಶವು ನಾಶವಾಗುವದಿಲ್ಲ. ಕೃಷ್ಣವೇಣೀ ಸಂಗಮದಲ್ಲಿ ಸೂರ್ಯಗ್ರಹಣವಿದ್ದಾಗ, ೩೧–೩೨

**यो ददाति द्विजातिभ्यो वृत्तिमात्रां वसुन्धराम् ।**
**मध्यक्षेत्रां सुकृष्णां च यवगोधूमशालिनीम् ॥ ३३ ॥**

ಯಾರು ಬ್ರಾಹ್ಮಣರಿಗೆ ಜೀವನೋಪಾಯವಾದ ಭೂಮಿಯನ್ನು ಯವ,

ರಾಜನಾಗುವನು. ೩೪

ज्ञानध्यानसमायुक्तः तदन्ते शिवमश्नुते ।
इत्येषः कथितो विप्राः कृष्णवेणीसमागमः ।
सर्वपापक्षयकरः श्रवणात् सर्वसिद्धिदः ॥ ३५ ॥

ಜ್ಞಾನ, ಧ್ಯಾನಗಳಿಂದ ಕೂಡಿ ಕೊನೆಗೆ ಕಲ್ಯಾಣವನ್ನು ಪಡೆಯುವನು. ಹೀಗೆ ಬ್ರಾಹ್ಮಣರೇ! ಎಲ್ಲ ಪಾಪವನ್ನು ನಾಶಮಾಡುವ, ಕೇಳೋಣದರಿಂದ ಎಲ್ಲ ಸಿದ್ಧಿಯನ್ನು ಕೊಡುವ ಕೃಷ್ಣವೇಣೀ ಸಮಾಗಮವು ಹೇಳಲಾಗಿದೆ. ೩೫

॥ इति श्रीस्कन्दपुराणे कृष्णामाहात्म्ये कृष्णवेणासमागमो नाम अष्टादशोऽध्यायः ॥

❀ ❀ ❀

## ॥ अथ एकोनविंशोऽध्यायः ॥

ऋषयः ऊचुः-

ಋಷಿಗಳು ಅಂದರು –

चन्द्रचूडात्मज स्कन्द ब्रूहि रम्यां कथां च नः.
न तृप्तिमधिगच्छामो यथा पीयूषपानतः ॥ १ ॥

ಶಿವಪುತ್ರನಾದ ಸ್ಕಂದನೇ! ನಮಗೆ ರಮಣೀಯವಾದ ಕಥೆಯನ್ನು ಹೇಳು. ಅಮೃತಪಾನದಂತೆ ನಾವು ತೃಪ್ತಿಯನ್ನು ಹೊಂದಿಲ್ಲ. ೧

स्कन्द उवाच –

ಸ್ಕಂದನು ಹೇಳಿದನು –

ಮಧ್ಯದೇಶದಲ್ಲಿ ವೇದವೇದಾಂತ ಪಾರಂಗತನಾದ ಒಬ್ಬ ಬ್ರಾಹ್ಮಣನಿದ್ದನು. ಆವನು ಧನಿಕನೂ ಅನೇಕ ಮಕ್ಕಳುಳ್ಳವನೂ ಬ್ರಹ್ಮಜ್ಞನೂ ಅತಿಥಿಪ್ರಿಯನೂ ಆಗಿದ್ದನು. ೩

श्रुत्वा कीर्तिं सुविपुलां औदार्यं पाकशासनः ।
विहङ्गरूपमास्थाय मुनेराश्रममागमत् ॥ ४ ॥

ಇಂದ್ರನು ಅವನ ವಿಪುಲವಾದ ಕೀರ್ತಿ ಔದಾರ್ಯ ಇವುಗಳನ್ನು ಕೇಳಿ ಪಕ್ಷಿಯ ರೂಪವನ್ನುತಾಳಿ ಮುನಿಯ ಆಶ್ರಮಕ್ಕೆ ಬಂದನು. ೪

नृवाचा तं वदत्पक्षी आतिथ्यं मे विधीयताम् ।
मह्यं नरामिषं शीघ्रं दीयतां द्विजसत्तम ॥ ५ ॥

ಮನುಷ್ಯರ ಮಾತಿನಿಂದ, ಎಲೈ ಬ್ರಾಹ್ಮಣೋತ್ತಮನೇ ! ನನಗೆ ಆತಿಥ್ಯವನ್ನು ಮಾಡಿರಿ. ಶೀಘ್ರದಲ್ಲಿಯೇ ನನಗೆ ಮನುಷ್ಯಮಾಂಸವನ್ನು ಕೊಡಿರಿ. ೫

तद्वाक्यं सहसा श्रुत्वा पुत्रान् प्रोवाच विस्मितः ।
हे पुत्राः पश्यत चिरं अतिथिं गृहमागतम् ॥ ६ ॥

ಆ ಪಕ್ಷಿಯ ಮಾತನ್ನು ಕೇಳಿ ಒಮ್ಮೆಲೆ ಆಶ್ಚರ್ಯಯುಕ್ತನಾಗಿ ಆ ಬ್ರಾಹ್ಮಣನು ಎಲೈ ಮಕ್ಕಳಿರಾ ! ಬಹಳ ದಿನಗಳ ಮೇಲೆ ಮನೆಗೆ ಬಂದ ಅತಿಥಿಯಾದ ಇವನನ್ನು ನೋಡಿರಿ, ಎಂದು ಮಕ್ಕಳಿಗೆ ಅಂದನು. ೬

पुत्राः श्रुणुत मद्वाक्यं कमनीयस्य पक्षिणः ।
कर्तव्यमद्य सहसा ह्यातिथ्यं मुक्तिसाधनम् ॥ ७ ॥

ಎಲೈ ಮಕ್ಕಳಿರಾ !ನನ್ನ ವಾಕ್ಯವನ್ನುಕೇಳಿರಿ. ಸುಂದರವಾದ ಈ ಪಕ್ಷಿಗೆ ಆತಿಥ್ಯವನ್ನು ಮಾಡುವದು ಮುಕ್ತಿಸಾಧನವಾದುದು. ಆದ್ದರಿಂದ ಅವಶ್ಯ ಮಾಡುವದು. ೭

पुत्रा ऊचुः –

आतिथ्यं वैश्वदेवान्ते सफलं जीवितं गुरो।
गृहस्थाश्रमिणां धर्मो यदातिथ्यस्य रक्षणम् ॥ ९ ॥

ವೈಶ್ವದೇವದ ಕೊನೆಗೆ ಆತಿಥ್ಯ ಮಾಡುವದು, ಜೀವನ ಸಾಫಲ್ಯಕಾರಕವು. ಗುರುಗಳೇ ! ಆತಿಥ್ಯವನ್ನು ರಕ್ಷಿಸುವದು ಗೃಹಸ್ಥಾಶ್ರಮಿಗಳ ಧರ್ಮವು. ೯

दातव्यं हि प्रयत्नेन ह्यामिषं त्वात्मसंभवम्।
ज्ञातोऽतिथिप्रियो यस्मात् यान्ति ह्यतिथयः सदा ॥ १० ॥

ಆದ್ದರಿಂದ ನಿಮ್ಮ ಮಾಂಸವನ್ನೇ ಪ್ರಯತ್ನ ಪುರಸ್ಸರವಾಗಿ ದಾನಮಾಡಬೇಕು. ತಾವು ಅತಿಥಿಪ್ರಿಯರೆಂದು ಪ್ರಖ್ಯಾತರಾಗಿದ್ದೀರಿ. ಆದ್ದರಿಂದಲೇ ಅತಿಥಿಗಳು ತಮ್ಮಕಡೆಗೆ ಬರುತ್ತಾರೆ. ೧೦

पितोवाच –

पितुराज्ञाप्रकर्तारः सुपुत्राः सन्ति भूतले।
दुष्टा भवादृशाश्चान्ये ह्यविद्याकाममोहिताः ॥ ११ ॥

ತಂದೆಯು ಅಂದನು –

ತಂದೆಯ ಆಜ್ಞೆಯನ್ನು ಪಾಲಿಸುವ ಒಳ್ಳೇ ಮಕ್ಕಳು ಭೂಮಿಯಲ್ಲಿ ಇದ್ದಾರೆ. ಅಜ್ಞಾನಕಾಮಗಳಿಂದ ಮೋಹಿತರಾದ ನಿಮ್ಮಂತಹ ದುಷ್ಟರೂ ಬೇರೆ ಇದ್ದಾರೆ. ೧೧

मूर्खा भवन्तो भवत मद्वाक्योल्लंघका यदि।
पितुर्वाक्यं समाकर्ण्य प्रणम्योचुः सुदुःखिताः ॥ १२ ॥

ನನ್ನ ವಾಕ್ಯವನ್ನು ನೀವು ಉಲ್ಲಂಘಿಸಿದ್ದಾದರೆ ನೀವೆಲ್ಲರೂ ಮೂರ್ಖರಾಗುವಿರಿ. ತಂದೆಯ ವಾಕ್ಯವನ್ನು ಕೇಳಿದ, ಅತ್ಯಂತ ದುಃಖಿತರಾದ, ಆ ಮಕ್ಕಳು ನಮಸ್ಕರಿಸಿ ಅಂದರು. ೧೨

पुत्रा ऊचुः –

दारिद्र्यं प्रथमं दुःखं द्वितीयं तम उच्यते ।
दारिद्र्यान्निर्वृतिं प्राप्य ज्ञानेन सुखमश्नुते ॥ १४ ॥

ದಾರಿದ್ರ್ಯವು ಮೊದಲನೇ ದುಃಖ. ಎರಡನೇ ದುಃಖ ಅಜ್ಞಾನವು. ದಾರಿದ್ರ್ಯದಿಂದ ಮುಕ್ತಿಯನ್ನು ಹೊಂದಿ, ಜ್ಞಾನದಿಂದ ಸುಖವನ್ನು ಅನುಭವಿಸುತ್ತಾರೆ. ೧೪

मूर्खत्वं नो यदि प्राप्तं तदा कुत्सितयोनिषु ।
प्राप्स्यामो विविधान्यत्र दुःखान्येतत् क्षमस्व भो ॥ १५ ॥

ನಮಗೆ ಮೂರ್ಖತ್ವ ಉಂಟಾದಲ್ಲಿ ನಾವು ನಿಂದಿತ ಯೋನಿಗಳನ್ನು ಹೊಂದುತ್ತೇವೆ. ಅಲ್ಲಿ ಅನೇಕ ದುಃಖಗಳನ್ನು ಹೊಂದುತ್ತೇವೆ. ಇದನ್ನು ತಾವು ಕ್ಷಮಿಸಿರಿ. ೧೫

साधवः समचित्तस्ते दीनरक्षणतत्पराः ।

पितोवाच –

ब्रह्मा विष्णुश्च रुद्रश्च निवसन्त्यत्र वै ह्यमी ॥ १६ ॥

ಸಜ್ಜನರಾದವರು ದೀನರಕ್ಷಣೆಯಲ್ಲಿ ಆಸಕ್ತರಾದವರು, ಹರಿಯಲ್ಲಿ ಮನಸ್ಸುಳ್ಳವರು.

**ತಂದೆಯು ಅಂದನು.**

ಎಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರಿದ್ದಾರೆ. ಅಲ್ಲಿ ಹೋಗಿರಿ. ೧೬

तद्दर्शनाद्गतिं ज्ञानं भवन्तः प्राप्स्यथ क्रमात् ।

पुत्रा ऊचुः –

सत्यलोके स्वयंभूश्च विष्णुर्वैकुंठधामनि ॥ १७ ॥

कैलासे हिमजानाथः कुत्र ते ह्यभवन् त्रयः ।
वक्तव्यं तु त्वया धाम त्रयाणां भुवि विश्रुतम् ॥ १८ ॥

ಅವರ ದರ್ಶನದಿಂದ ಕ್ರಮವಾಗಿ ನೀವು ಜ್ಞಾನವನ್ನೂ ಗತಿಯನ್ನೂ ಹೊಂದುವಿರಿ

कृपया वच्मि तत्तीर्थं युष्माकं पुत्रकाः खलु ।
भवद्भिः तत्र गन्तव्यं त्रितयं यत्र वर्तते ॥ १९ ॥

ತಂದೆಯು ಅಂದನು –

ಎಲೈ ಮಕ್ಕಳಿರಾ ! ದಯೆಯಿಂದ ಆ ತೀರ್ಥದ ಬಗ್ಗೆ ನಿಮಗೆ ನಿಶ್ಚಯವಾಗಿ ಹೇಳುವೆ. ಅವರು ಮೂವರೂ ಇದ್ದಲ್ಲಿ ನೀವು ಅವಶ್ಯವಾಗಿ ಹೋಗಬೇಕು. ೧೯

कृष्णा विष्णुतनुः साक्षात् शिवो वेणीस्वरूपधृक् ।
ब्रह्मा ककुद्मती गङ्गा करहाटे तु गच्छत ॥ २० ॥

ಕೃಷ್ಣಾದೇವಿಯು ಸಾಕ್ಷಾತ್ ವಿಷ್ಣುವಿನ ರೂಪಳು. ವೇಣೀಯ ರೂಪವನ್ನು ಧಾರಣ ಮಾಡಿದವನು ಶಿವನು. ಕಕುದ್ಮತೀ ಎಂಬ ನದಿಯು ಬ್ರಹ್ಮಾ ಇರುವನು. ಆದ್ದರಿಂದ ಕರಹಾಟಕ್ಕೆ ( ಕರಾಡ) ಹೋಗಿರಿ. ೨೦

स्नात्वा तत्र समभ्यर्च्य सङ्गमेशं प्रयत्नतः ।
दृष्ट्वा दुर्गां भगवतीं लक्ष्मीं दुर्दैत्यनाशिनीम् ॥ २१ ॥

ಅಲ್ಲಿ ಸ್ನಾನಮಾಡಿ ಸಂಗಮೇಶನನ್ನು ಪ್ರಯತ್ನದಿಂದ ಪೂಜಿಸಿ. ದುಷ್ಟದೈತ್ಯರನ್ನು ನಾಶ ಮಾಡಿದ, ಪೂಜ್ಯ ಲಕ್ಷ್ಮೀರೂಪಳಾದ ದುರ್ಗಾದೇವಿಯನ್ನು ನೋಡಿ, ೨೧

ज्ञानं विज्ञानसहितं भविष्यति न संशयः ।
पितुर्वचनमाकर्ण्य सर्वे पुत्राः समागताः ॥ २२ ॥

ನಿಮ್ಮಜ್ಞಾನವು ಅಪರೋಕ್ಷಜ್ಞಾನದಿಂದ ಒಡಗೂಡಿದ್ದಾಗುವದು. ಇದರಲ್ಲಿ ಸಂದೇಹವಿಲ್ಲ. ತಂದೆಯ ಮಾತನ್ನು ಕೇಳಿಕೊಂಡು ಎಲ್ಲ ಮಕ್ಕಳೂ ಅಲ್ಲಿಗೆ, ಬಂದರು. ೨೨

ककुद्मिन्याः सङ्गमे तु स्नात्वा ज्ञानमवाप्य च ।
स्तुतिं चक्रुः कृष्णवेणीं प्रीत्या सह ककुद्मिनीम् ॥ २३ ॥

ಆಗ ಜಲದಿಂದ ತೇಜೋಯುಕ್ತವಾದ ಅನುಮಾನ ಮಾಡಲು ಯೋಗ್ಯವಾದ ರೂಪಗಳು ಹೊರಟವು. ಒಳ್ಳೆ ವ್ರತವುಳ್ಳ ಆವರು ವಿಶ್ವಾಸವನ್ನು ಹೊಂದಿ ಪರಮ ಆಶ್ಚರ್ಯವನ್ನು ಹೊಂದಿದರು. ೨೪

पितुरन्तिकमाजग्मुः श्रद्धावन्तो दयान्विताः ।
वृत्तान्तमूचुस्ते सर्वे तेजः किं ब्रूहि तत्वतः ॥ २५ ॥

ಶ್ರದ್ಧಾ, ದಯಾಯುಕ್ತರಾದ ಆವರು ತಂದೆಯ ಹತ್ತಿರ ಬಂದರು. ಆ ವೃತ್ತಾಂತವನ್ನು ಹೇಳಿ ಈ ತೇಜಸ್ಸು ಏನು ? ಇದನ್ನು ನಿಜವಾಗಿ ನಮಗೆ ಹೇಳಿರಿ. ೨೫

तद्वाक्यं सम्यगाकर्ण्य पुत्राणां द्विजसत्तमाः ।
ब्रह्मरूपं तदाचख्यौ ज्ञातव्यं ज्ञानतः सुताः ॥ २६ ॥

ಆ ಮಕ್ಕಳ ಮಾತನ್ನು ಕೇಳಿದ ಬ್ರಾಹ್ಮಣೋತ್ತಮನು, ಎಲೈ ಮಕ್ಕಳಿರಾ ! ಅದು ಬ್ರಹ್ಮನ ರೂಪವು. ಜ್ಞಾನದಿಂದ ತಿಳಿಯಬೇಕು. ೨೬

ज्ञानहीनो यतो देही विट् कृमिर्विषये वसन् ।
न जानाति परं तत्वं योगिगम्यं सुदुःसहम् ॥ २७ ॥

ಜ್ಞಾನ ಹೀನನಾದ ಈ ಜೀವನು, ವಿಷ್ಠಾಕ್ರಿಮಿಗಳ ಆಗರದಲ್ಲಿ ಇರುತ್ತ ಯೋಗಿಗಳಿಂದ ಗಮ್ಯವಾದ, ಸಹಿಸಲು ಆಸಾಧ್ಯವಾದ, ಪರತತ್ವವನ್ನು ತಿಳಿಯುವದಿಲ್ಲ. ೨೭

तस्मात् दृष्टं भवद्भिश्च पूर्वपुण्यैकराशिभिः ।
धन्या यूयं कृतार्थाश्च इति संदिष्टवान् तदा ॥ २८ ॥

ಹಿಂದಿನ ಪುಣ್ಯದ ರಾಶಿಯುಳ್ಳ ನೀವು ಆದನ್ನು ಕಂಡಿರಿ. ನೀವು ಧನ್ಯರು ಹಾಗೂ ಕೃತಾರ್ಥರು ಎಂದು ಅಪ್ಪಣೆ ಮಾಡಿದನು. ೨೮

ककुद्मिनी सङ्गममज्जनेन नश्यन्ति पापानि किमत्र चित्रम् ।
ब्रह्मा हरिर्नीलगलश्च यस्मिन् वसन्ति नित्यं जलरूपधारिणः ॥ २९ ॥

ಕಕುದ್ಮಿನೀ ಸಂಗಮದಲ್ಲಿ ಸ್ನಾನಮಾಡುವದರಿಂದ ಪಾಪಗಳು ನಾಶವಾಗುವದು

❀ ❀ ❀

# ॥ अथ विंशोऽध्यायः ॥

ऋषय ऊचुः –

ಋಷಿಗಳು ಅಂದರು –

स्कंद ब्रूहि समाख्यानमन्यतीर्थस्य चानघ ।
न तृप्तिमधिगच्छामः त्वद्वाक्यामृतपानतः ॥ १ ॥

ಹೇ ಷಣ್ಮುಖನೇ ! ಬೇರೆ ತೀರ್ಥದ ಮಹಿಮೆಯನ್ನು ಹೇಳು. ನಿನ್ನ ವಾಕ್ಯವೆಂಬ ಅಮೃತಪಾನದಿಂದ ನಮಗೆ ತೃಪ್ತಿಯಾಗಿಲ್ಲ. ೧

स्कंद उवाच –

ಸ್ಕಂದನು ಅಂದನು –

श्रृणुध्वं ऋषयः सर्वे सेतिहासं पुरातनम् ।
कृष्णावेण्योर्हि माहात्म्यं ककुद्मिन्याः पुराऽभवत् ॥ २ ॥

ಎಲೈ ಎಲ್ಲ ಋಷಿಗಳಿರಾ ! ಕಕುದ್ಮಿನೀ ಹತ್ತಿರ ಆದ ಕೃಷ್ಣವೇಣೀ ಮಾಹಾತ್ಮ್ಯವನ್ನು ಪ್ರಾಚೀನ ಇತಿಹಾಸದೊಡನೆ ಕೇಳಿರಿ. ೨

कृष्णावेण्योस्तु संभूतः भैरवो भीमरुपधृक् ।
तत्क्षेत्राधिपसान्निध्यात् सिद्धिक्षेत्रं प्रचक्षते ॥ ३ ॥

ಕೃಷ್ಣವೇಣಿಯಿಂದ ಭಯಂಕರ ರೂಪ ಉಳ್ಳ ಭೈರವನು ಹುಟ್ಟಿದನು. ಆ ಕ್ಷೇತ್ರಾಧಿಪನ ಸಾನ್ನಿಧ್ಯದಿಂದ, ಅದಕ್ಕೆ ಸಿದ್ಧಿಕ್ಷೇತ್ರ ಎಂದು ಹೇಳುತ್ತಾರೆ. ೩

तत्र स्नात्वा नरः पश्येत् भक्त्या क्षेत्राधिपं हरम् ।
सर्वपापविशुद्धात्मा प्राप्नोति परमं पदम् ॥ ४ ॥

ಸಂಗಮವಾಗಿದೆ. ಅಲ್ಲಿ ಅನೇಕ ತಪಸ್ವಿಗಳು ಮಂತ್ರ ಜಪ ಮಾಡಿದ್ದಾರೆ. ೫

गायत्र्यष्टशतं चापि मुच्यते सर्वपातकैः ।
शिलीभूतं महाकायं राक्षसं दुष्टचेतसम् ॥ ६ ॥

ನೂರೆಂಟು (೧೦೮) ಗಾಯತ್ರೀ ಜಪ ಮಾಡಿದರೆ ಎಲ್ಲ ಪಾಪಗಳಿಂದ ಮುಕ್ತರಾಗುತ್ತಾರೆ. ದುಷ್ಟ ವ್ಯಾಪಾರ ಉಳ್ಳ, ದೊಡ್ಡ ಶರೀರ ಉಳ್ಳ, ಶಿಲಾರೂಪನಾದ ರಾಕ್ಷಸನನ್ನು, ೬

भित्वा धाराभिरुग्राभिः कालेन प्रेषितं द्विजाः ।
यतः सरित् समायाता तत्र तीर्थं महाफलम् ॥ ७ ॥

ಎಲೈ ಬ್ರಾಹ್ಮಣರೇ! ಕಾಲನಿಂದ ಪ್ರೇಷಿತವಾದ ಅವನ್ನು ಉಗ್ರವಾದ ಧಾರೆಗಳಿಂದ ಭೇದಿಸಿ, ನದಿಯು ಬಂದಿತೋ, ಅಲ್ಲಿ ಮಹಾಫಲ ಪ್ರದವಾದ, ೭

विहंगमानां लोकेऽस्मिन् तीर्थानामुत्तमोत्तमम् ।
यत्र तार्क्ष्यस्तपस्तप्त्वा लेभे सर्वमनोरथान् ॥ ८ ॥

ಈ ಲೋಕದಲ್ಲಿ ಉತ್ತಮೋತ್ತಮವಾದ, ಪಕ್ಷಿತೀರ್ಥ ಎಂಬುದಿದೆ. ಅಲ್ಲಿ ಗರುಡನು ತಪಸ್ಸನ್ನು ಮಾಡಿ ಎಲ್ಲ ಮನೋರಥಗಳನ್ನು ಪಡೆದನು. ೮

तत्तीर्थे शंभुसान्निध्यात् पवित्रं पापनाशनम् ।
यत्र जातिस्मरः स्नात्वा जंबुकः स्वर्गमाप्तवान् ॥ ९ ॥

ಆ ತೀರ್ಥದಲ್ಲಿ ಮಹಾದೇವರ ಸಾನ್ನಿಧನದಿಂದ ಪಾವಿತ್ರ್ಯ ಉಂಟಾಗಿದೆ. ಅಲ್ಲಿ ಸ್ನಾನಮಾಡಿ ಪೂರ್ವಜನ್ಮಸ್ಮರಣ ಉಳ್ಳ ನರಿಯು, ಹೇ ಮುನಿಗಳೇ! ಮೋಕ್ಷವನ್ನು ಹೊಂದಿತು. ೯

ऋषय ऊचुः –

**ಋಷಿಗಳು ಅಂದರು –**

कोऽसौ जातिस्मरस्तत्र स्नात्वा मुक्तोऽभवन्मुने ।
कृपां कुरु मुनिश्रेष्ठ दयालूनां त्वमग्रणीः ॥ १० ॥

ಇಂದ್ರದೇವರ ಮಗನು ಜಯಂತನೆಂದು ಪ್ರಸಿದ್ಧನಾದವನಿದ್ದನು. ಅವನು ಮದಿರಾಪಾನ ಮಾಡಿ, ಕಾಮ ಮೋಹಿತನಾಗಿ ರಂಭಾಳನ್ನು ಸ್ವೀಕರಿಸಿದನು. ೧೧

**ततः शशाप शक्रस्तं जंबूको भव दुर्मते ।**
**जंबुकत्वे यदा कृष्णां द्रक्ष्यसे जातिवित्तदा ॥ १२ ॥**

ಆಗ ಇಂದ್ರನು, ಎಲೈ ದುರ್ಬುದ್ಧಿ ಉಳ್ಳವನೇ! ನೀನು ನರಿಯಾಗು ಎಂದು ಶಪಿಸಿದನು. ನೀನು ನರಿಯಾದಾಗ ಕೃಷ್ಣಾ ನದಿಯನ್ನು ನೋಡಿದಾಗ ನೀನು ಜಾತಿಸ್ಮರ (ಹಿಂದಿನ ಜನ್ಮಸ್ಮರಣೆ ಉಳ್ಳವ) ನಾಗುವಿ. ೧೨

**तत्र स्नात्वा पुनर्धाम मामकं चोपयास्यसि ।**
**तेन तज्जंबुकं तीर्थं प्रजातं सह्यजातटे ॥ १३ ॥**

ಅಲ್ಲಿ ಸ್ನಾನಮಾಡಿ ಮತ್ತೆ ನನ್ನ ಸ್ಥಾನವಾದ ಸ್ವರ್ಗಕ್ಕೆ ಬರುವಿ ಎಂದು ಹೇಳಿದನು. ಆದ್ದರಿಂದ ಕೃಷ್ಣಾತಟದಲ್ಲಿ ಅದು ಜಂಬೂಕ ತೀರ್ಥವೆಂದು ಪ್ರಸಿದ್ಧವಾಯಿತು. ೧೩

**तत्र नागेश्वरो देवः संभूतो भक्तवत्सलः ।**
**तं देवं वासुकिः साक्षात् सर्वदाऽऽवृत्य तिष्ठति ॥ १४ ॥**

ಅಲ್ಲಿ ಭಕ್ತವತ್ಸಲನಾದ ನಾಗೇಶ್ವರ ಎಂಬ ದೇವನು ಆವಿರ್ಭವಿಸಿದ್ದಾನೆ. ಅವನನ್ನು ಸಾಕ್ಷಾತ್ ವಾಸುಕಿಯು ಯಾವಾಗಲೂ ಸುತ್ತಿಕೊಂಡು ಇರುತ್ತಾನೆ. ೧೪

**सुधियां नष्टपापानां सनागस्त्वक्षिगोचरः ।**
**तच्च नागेश्वरं स्थानं सर्वसिद्धिकरं नृणाम् ॥ १५ ॥**

ಪಾಪರಹಿತರಾದ ಜ್ಞಾನಿಗಳಿಗೆ ಅವನು (ಆ ನಾಗನು) ಕಾಣಿಸುವನು. ಈ ನಾಗೇಶ್ವರ ಎಂಬ ಸ್ಥಾನವು ಮನುಷ್ಯರಿಗೆ ಎಲ್ಲ ಸಿದ್ಧಿಯನ್ನು ಉಂಟು ಮಾಡುವದು. ೧೫

**कुजेश्वरं ततो दिव्यं तत्र देवीं समर्चयेत् ।**
**सर्वपापविनिर्मुक्तो रुद्रलोके महीयते ॥ १६ ॥**

ಆಮೇಲೆ ಕುಜ್ಜೇಶ್ವರ ಎಂಬ ದಿವ್ಯಸ್ಥಾನವಿದೆ. ಅಲ್ಲಿ ದೇವಿಯನ್ನು ಪೂಜಿಸಬೇಕು. ಎಲ್ಲ ಪಾಪಗಳಿಂದ ಮುಕ್ತನಾಗಿ ರುದ್ರಲೋಕದಲ್ಲಿ ಪೂಜಿಸಲ್ಪಡುವನು. ೧೬

**ततः पौलस्त्यतीर्थं च पौलस्त्येशस्तथा हरः ।**

तत्र स्नात्वा च पीत्वा च सोऽमृतत्वाय कल्पते ॥ १८ ॥

ಎಲ್ಲ ತೀರ್ಥಗಳಲ್ಲಿ ಶ್ರೇಷ್ಠ ತೀರ್ಥ ಬಾಹುತೀರ್ಥವು ಎಂದು ಹೇಳುತ್ತಾರೆ. ಅಲ್ಲಿ ಸ್ನಾನಮಾಡಿ ತೀರ್ಥ ಪಾನ ಮಾಡಿದವನು ಮೋಕ್ಷಕ್ಕೆ ಹೋಗುವನು. ೧೮

ऋषय ऊचुः –

कस्मात्तीर्थमभून्नाम बाहुमात्रमिति स्मृतम् ।
एतत्त्वं ब्रूहि सकलं निदानं बाहुतीर्थजम् ॥ १९ ॥

ಋಷಿಗಳು ಕೇಳಿದರು

ಬಾಹು(ಮಾತ್ರ) ಎಂಬ ಹೆಸರಿನ ತೀರ್ಥವು ಏಕೆ ಪ್ರಸಿದ್ಧವಾಯಿತು ?ಈ ತತ್ವವನ್ನು ಬಾಹುತೀರ್ಥದ ಕಾರಣವನ್ನು, ಎಲ್ಲವನ್ನೂ ನೀವು ಹೇಳಿರಿ. ೧೯

स्कंद उवाच –

ಸ್ಕಂದನು ಅಂದನು –

पुरा दाशरथी रामः पौलस्त्यं हतवान् यदा ।
ब्राह्मणान् स्वयमानीय वसिष्ठप्रमुखान् मुनीन् ॥ २० ॥

ಹಿಂದಕ್ಕೆ ರಾಮನು ರಾವಣನನ್ನು ಯಾವಾಗ ಸಂಹರಿಸಿದನೋ ಆಗ ಬ್ರಾಹ್ಮಣರನ್ನು, ವಶಿಷ್ಠರೇ ಮೊದಲಾದ ಮುನಿಗಳನ್ನೂ, ೨೦

पप्रच्छ प्रयतो भूत्वा स्वयं निर्विण्णचेतसा ।
एनसां परमं दुःखं ब्रह्महत्यासमं नहि ॥ २१ ॥

ನಿರ್ವಿಣ್ಣವಾದ ಮನಸ್ಸಿನಿಂದ ವಿನಮ್ರನಾಗಿ ತಾನೇ ಕೇಳಿದನು. ಎಲ್ಲ ಪಾಪಗಳಲ್ಲಿ ಬ್ರಹ್ಮಹತ್ಯೆಗೆ ಸಮವಾದ ದುಃಖಕರವಾದ ಪಾಪವಿಲ್ಲ. ೨೧

निष्कृतिस्तत्र कर्तव्या ह्यात्मशोधनकारणात् ।
पौलस्त्यो ब्राह्मणश्रेष्ठः रावणो लोककंटकः ॥ २२ ॥

ಸಂಹಾರ ಮಾಡಿದೆ. ತಿಳಿದಾಗಲೀ ತಿಳಿಯದೇ ಆಗಲಿ ಮೋಹದಿಂದ ಆಗಲಿ ದರ್ಪದಿಂದಾಗಲೀ, ೨೩

यत्कृतं कर्म मुनयो शुभं वाऽशुभमेव च ।
मानुष्यं दुर्लभं प्राप्य एनसो निष्कृतिं नरः ॥ २४ ॥

ಎಲೈ ಮುನಿಗಳೇ! ಮಾಡಿದ ಶುಭಾಶುಭ ಕರ್ಮಗಳಿಗೆ ದುರ್ಲಭವಾದ ಮನುಷ್ಯತ್ವವನ್ನು ಹೊಂದಿ, ಮನುಷ್ಯನು ಪಾಪ ಪ್ರಾಯಶ್ಚಿತ್ತವನ್ನು. ೨೪

न करोति यदा मोहात् रौरवं प्रतिपद्यते ।
अग्निर्दहति काष्ठेन सूर्यो दहति रश्मिभिः ॥ २५ ॥

ಮೋಹದಿಂದ ಮಾಡಿಕೊಳ್ಳದಿದ್ದರೆ ಅವನು ರೌರವ ಎಂಬ ನರಕಕ್ಕೆ ಹೋಗುತ್ತಾನೆ. ಅಗ್ನಿಯು ಕಟ್ಟಿಗೆಯಿಂದ ಸುಡುತ್ತಾನೆ. ಸೂರ್ಯನು ಕಿರಣಗಳಿಂದ ಸುಡುತ್ತಾನೆ. ೨೫

राजा दहति दंडेन ब्राह्मणो मनसा दहेत् ।
विपिनंसर्व वृक्षाणां दहत्यग्निः समिंधितः ॥ २६ ॥

ರಾಜನು ದಂಡದಿಂದ ಸುಡುತ್ತಾನೆ. ಬ್ರಾಹ್ಮಣನು ಮನಸ್ಸಿನಿಂದ ಸುಡುತ್ತಾನೆ. ಚನ್ನಾಗಿ ಹೊತ್ತಿದ ಅಗ್ನಿಯು ಎಲ್ಲ ವೃಕ್ಷಗಳುಳ್ಳ ವನವನ್ನು ಸುಡುತ್ತದೆ. ೨೬

ब्राह्मणाग्निः समूलानि कुलानि प्रजहत्यसौ ।
भवंतः साधवः श्रेष्ठाः ब्राह्मणाः वेदपारगाः ॥ २७ ॥

ಬ್ರಾಹ್ಮಣನೆಂಬ ಅಗ್ನಿಯು ಸಮೂಲವಾದ ಕುಲಗಳನ್ನು ಸುಡುತ್ತಾನೆ. ತಾವೆಲ್ಲ ಶ್ರೇಷ್ಠ ಸಾಧುಗಳು ವೇದಪಾರಂಗತರಾದ ಬ್ರಾಹ್ಮಣರು. ೨೭

ज्ञात्वा दाशरथिं मां तु शरणागतमंजसा ।
त्रायध्वं ब्रह्महत्यायाः शरणागतवत्सलाः ॥ २८ ॥

ಹೇ ಮಹಾಜ್ಞಾನಿಯೇ ! ಸಾಧು ಸಾಧು ! ನೀನು ಬ್ರಾಹ್ಮಣ ಪ್ರಿಯನು, ದೀನರಲ್ಲಿ ಸ್ನೇಹಉಳ್ಳವನು, ಮನುಷ್ಯನು ಯಾವ ನಿನ್ನ ಸ್ಮರಣದಿಂದ ಪಾಪರಹಿತನಾಗುತ್ತಾನೆ. ೨೯

एतादृशस्य ते पापं पूतात्मन् वै कुतः पतेत् ।
तथापि प्राप्य वै देहं परेषां ज्ञानबोधकम् ॥ ३० ॥

ಹೇ ಪವಿತ್ರ ಸ್ವರೂಪ ಉಳ್ಳವನೇ ! ಇಂತಹ ನಿನಗೆ ಪಾಪವು ಹೇಗೆ ಬಂದೀತು. ಆದರೂ ಕೂಡ ಇನ್ನೊಬ್ಬರಿಗೆ ಜ್ಞಾನಸೂಚಕವಾದ ಈ ಶರೀರವನ್ನು ಹೊಂದಿ, ೩೦

कार्या वै ब्रह्महत्यायाः निष्कृतिः भवताऽनघ ।
गंगादिसर्वतीर्थानां स्नानात् पापक्षयो भवेत् ॥ ३१ ॥

ನಿಷ್ಪಾಪಿಯಾದರೂ ನೀನು ಬ್ರಹ್ಮಹತ್ಯೆಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಗಂಗಾದಿ ಎಲ್ಲ ತೀರ್ಥಗಳ ಸ್ನಾನದಿಂದ ಪಾಪಕ್ಷಯವಾಗುವದು. ೩೧

अयोध्यायां च कर्तव्यं राज्यं धर्मेण वै त्वया ।
तीर्थाटने यदागच्छेः क्षयमेष्यन्ति वै प्रजाः ॥ ३२ ॥

ಅಯೋಧ್ಯೆಯಲ್ಲಿ ಧರ್ಮದಿಂದ ರಾಜ್ಯ ಮಾಡಬೇಕು. ನೀನು ತೀರ್ಥಾಟನಕ್ಕೆ ಹೋದಿ ಯಾದರೆ ಪ್ರಜಾಜನರು ನಾಶ ಹೊಂದುತ್ತಾರೆ. ೩೨

राज्ञां हि परमो धर्मो यत्प्रजापरिपालनम् ।
तस्मिन् विलंबो नो कार्यः तीर्थयात्राप्रसंगतः ॥ ३३ ॥

ರಾಜರ ಶ್ರೇಷ್ಠಧರ್ಮವೆಂದರೆ ಪ್ರಜಾಪರಿಪಾಲನವು. ಆದ್ದರಿಂದ ತೀರ್ಥಯಾತ್ರಾ ಪ್ರಸಂಗದಿಂದ ಅದರಲ್ಲಿ ತಡ ಮಾಡಕೂಡದು. ೩೩

तीर्थं कृच्छ्रं समासाद्य तपः कार्यं सुदारुणम् ।
तपसा साध्यते राज्यं ज्ञानं चानुत्तमां गतिम् ॥ ३४ ॥

ಒಳ್ಳೇ ತೀರ್ಥವನ್ನು ಆಶ್ರಯಿಸಿ ನೀನು, ಕೃಚ್ಛ್ರ ತಪಸ್ಸು ಇವನ್ನು ಘೋರ

क्षयमेष्यति तत् क्षिप्रं दक्षिणातीर्थसेवनात् ।
तद्वाक्यश्रवणात् रामः कृष्णवेणीं समाययौ ॥ ३६ ॥

ದಕ್ಷಿಣ ತೀರ್ಥಗಳಲ್ಲಿ ಶ್ರೇಷ್ಠವಾದ ಕೃಷ್ಣಾಸೇವನೆಯಿಂದ ಅವೆಲ್ಲ ಪಾಪವು ಬೇಗನೇ ನಾಶವಾಗುತ್ತದೆ. ಅವರ ಆ ವಾಕ್ಯವನ್ನು ಕೇಳಿದ ಕೂಡಲೇ ರಾಮದೇವರು ಕೃಷ್ಣಾವೇಣಿಗೆ ಬಂದರು. ೩೬

सन्निवेश्यैव सकलं वायुपुत्रेण धीमता ।
नदी-तटं समासाद्य चकार तप उत्तमम् ॥ ३७ ॥

ಎಲ್ಲವನ್ನೂ ಮಂತ್ರಿಗಳಿಗೆ ಒಪ್ಪಿಸಿ ಬುದ್ಧಿವಂತನಾದ ವಾಯುಪುತ್ರರಾದ ಹನುಮಂತ ದೇವರಿಂದ ಕೂಡಿ, ನದೀತಟಕ್ಕೆ ಬಂದು ಉತ್ತಮ ತಪಸ್ಸನ್ನು ಮಾಡಿದನು. ೩೭

कृष्णवेणीं स्वकल्लोलवेलांदोलितविक्रमाम् ।
दृष्ट्वा रामस्तदा कोपात् किमित्येवं विचिंतयत् ॥ ३८ ॥

ಕೃಷ್ಣವೇಣಿಯು ತನ್ನ ತರಂಗ ಸಮುದಾಯಗಳಿಂದ ದೋಲಾದಂತೆ ಹೊಯ್ದಾಡಿಸುತ್ತಿರುವದನ್ನು ನೋಡಿ ರಾಮದೇವನು ಕೋಪದಿಂದ ಇದೇನೆಂದು ಯೋಚಿಸುತ್ತಿದ್ದನು. ೩೮

हनूमान् तत्र संगम्य स्वबाहुभ्यां निरुध्य ताम् ।
पास्याम्यहं कृष्णवेणीं अगस्त्यः सागरं यथा ॥ ३९ ॥

ಆಗ ಹನುಮಂತದೇವರು ತಮ್ಮ ಬಾಹುಗಳಿಂದ ಅದನ್ನು ನಿರೋಧಿಸಿ, ಅಗಸ್ತ್ಯರು ಸಮುದ್ರವನ್ನು ಕುಡಿದಂತೆ, ಕುಡಿದು ಬಿಡುವೆನು ಎಂದು ಗರ್ಜಿಸಿದರು. ೩೯

कृष्णवेणी तदा राममार्गं त्यक्त्वा द्विधाऽभवत् ।
प्रसाद्य रामं तं कृष्णा वरं प्राप सुदुर्लभम् ॥ ४० ॥

ಆಗ ಕೃಷ್ಣಾನದಿಯು ರಾಮದೇವನಿಗೆ ಮಾರ್ಗಕೊಟ್ಟು, ಎರಡು ಭಾಗವಾಯಿತು ಮತ್ತು ಶ್ರೀರಾಮನಿಗೆ ಪ್ರಾರ್ಥನೆ ಮಾಡಿ ಪ್ರಸನ್ನೀಕರಿಸಿಕೊಂಡು ದುರ್ಲಭವಾದ

॥ इति श्रीस्कंदपुराणे कृष्णामाहात्म्ये बाहुतीर्थवर्णनं नाम विंशोऽध्यायः ॥

❀ ❀ ❀

## ॥ एकविंशोऽध्यायः ॥

स्कंद उवाच –

ಸ್ಕಂದನು ಅಂದನು –

तीर्थान्यनेकरूपाणि कृष्णवेण्यां वसन्ति हि ।
मुख्यान्येव पवित्राणि श्रृणुध्वं भो मुनीश्वराः ॥ १ ॥

ಕೃಷ್ಣವೇಣಿಯಲ್ಲಿ ಅನೇಕ ತೀರ್ಥಗಳಿರುತ್ತವೆ. ಎಲೈ ಮುನೀಶ್ವರರೆ! ಅವೆಲ್ಲವುಗಳಲ್ಲಿ, ಮುಖ್ಯವಾದವುಗಳು, ಮತ್ತು ಪವಿತ್ರವಾದವುಗಳನ್ನು ಕೇಳಿರಿ. ೧

भृगुवंशे समुत्पन्नो ब्राह्मणः श्रुतिपारगः ।
तपस्वी ध्यानसंपन्नः धनी च बहुबान्धवः ॥ २ ॥

ಭೃಗುವಂಶದಲ್ಲಿ ಒಬ್ಬ ಬ್ರಾಹ್ಮಣನು ಹುಟ್ಟಿದನು. ಅವನು ವೇದಪಾರಂಗತನೂ, ತಪಸ್ವಿಯೂ, ಧನಿಕನೂ, ಧ್ಯಾನಸಂಪನ್ನನೂ, ಅನೇಕ ಬಾಂಧವರುಳ್ಳವನೂ ಆಗಿದ್ದನು. ೨

वार्धक्ये तस्य पुत्रोऽभूत् दुर्वृत्तः सकलेष्वपि ।
ममार तत्पिता काले तत्पत्नी च पतिव्रता ॥ ३ ॥

ವಾರ್ಧಕ್ಯದಲ್ಲಿ ಅವನಿಗೆ, ಎಲ್ಲದರಲ್ಲಿಯೂ ದುರಾಚಾರ ಉಳ್ಳವನೂ ಆದ, ಒಬ್ಬ ಮಗನು ಹುಟ್ಟಿದನು. ಅವನ ತಂದೆಯು ಕಾಲದಲ್ಲಿ ಮರಣ ಹೊಂದಿದರು. ಪತಿವ್ರತೆಯಾದ ಅವನ ಹೆಂಡತಿಯು, ೩

तेन साकं गता तत्र मुक्तिं तौ प्रापतुस्तदा ।
बालको दीनरूपेण ह्यनाथः समभूत्तदा ॥ ४ ॥

द्वादशाब्दवयाबालः कैरातं देशमागतः ।
तत्संगात् कृतवान् कर्मस्तेयं पथि सुदुर्मतिः ॥ ६ ॥

ಹನ್ನೆರಡು ವಯಸ್ಸಿನ ಬಾಲಕನು ಭಿಲ್ಲರಿರುವ ದೇಶಕ್ಕೆ ಬಂದನು. ಅವರ ಸಹ ವಾಸದಿಂದ ದುರ್ಬುದ್ಧಿಯುಳ್ಳ ಆ ಹುಡುಗನು ಹಾದಿಯಲ್ಲಿ ತುಡುಗು ಮಾಡ ಹತ್ತಿದನು. ೬

तत्कन्यां कामुको भुंजंस्तस्यां पुत्रानजीनत् ।
कुटुंबी हिंसया तत्र कालगत्या ययौ नदीम् ॥ ७ ॥

ಆ ವ್ಯಾಧರ ಕನ್ನಿಕೆಯನ್ನು ಕಾಮುಕನಾದ ಅವನು ಸ್ವೀಕರಿಸಿ ಆಕೆಯಲ್ಲಿ ಮಕ್ಕಳುಗಳನ್ನು ಉಂಟು ಮಾಡಿದನು. ಕುಟುಂಬಿಯಾದ ಅವನು ಹಿಂಸೆ ಮಾಡುತ್ತ ಕಾಲ ಗತಿಯಿಂದ ನದಿಗೆ ಹೋದನು. ೭

कृष्णवेणीं समासाद्य दृष्ट्वा ब्राह्मणपुंगवान् ।
कश्यपादि ऋषीन् दृष्ट्वा यजन्तश्चैव सर्वशः ॥ ८ ॥

ಕೃಷ್ಣವೇಣೀ ಎಂಬ ನದಿಯನ್ನು ಹೊಂದಿ ಅಲ್ಲಿ ಬ್ರಾಹ್ಮಣ ಶ್ರೇಷ್ಠರಾದ ಯಾಗ ಮಾಡುವ ಕಶ್ಯಪರೇ ಮೊದಲಾದ ಎಲ್ಲ ಋಷಿಗಳನ್ನು ನೋಡಿ, ೮

पात्राणि च पवित्राणि पश्यन् हर्तुं समुद्यतः ।
ददतेमानि सर्वाणि नो चेत् हन्मीति चाब्रवीत् ॥ ९ ॥

ಅಲ್ಲಿರುವ ಪವಿತ್ರವಾದ ಪಾತ್ರೆಗಳನ್ನು ಅಪಹರಿಸಬೇಕೆಂದು ಉದ್ಯೋಗ ಮಾಡಿದನು. ಈ ಎಲ್ಲ ಪಾತ್ರೆಗಳನ್ನು ಕೊಡಿರಿ ಇಲ್ಲವಾದರೆ ನಿಮ್ಮೆಲ್ಲರನ್ನು ಸಂಹರಿಸುವೆನು ಎಂದು ಅಂದನು. ೯

तं दृष्ट्वा ऋषयः सर्वे कृतांतसमतेजसम् ।
धनुर्बाणधरं दुष्टं सदा दुर्नीतिकारकम् ॥ १० ॥

ವ್ಯರ್ಥವಾಗಿ ಹೋಯಿತು ಎಂಬುದನ್ನು ಮನಸ್ಸಿನಲ್ಲಿ ವಿಚಾರಿಸು. ೧೧

का स्त्री त्वं कः सुता कस्य पापसंग्रहतत्परः।
एते किं ते करिष्यन्ति परलोके भयावहे ॥ १२ ॥

ಈ ಹೆಣ್ಣು ಮಗಳು ಯಾರು ? ನೀನು ಯಾರು ? ಮಕ್ಕಳು ಯಾರು ? ಪಾಪಸಂಗ್ರಹದಲ್ಲಿ ತೊಡಗಿ ಭಯಂಕರವಾದ ಪರಲೋಕಕ್ಕೆ ಹೋದಾಗ ಇವರೇನು ನಿನಗೆ ಸಹಾಯ ಮಾಡುವರು ? ೧೨

विचार्यैवं त्वया वत्स पश्चात् कार्यं स्वकर्म तत्।
तावदस्मान् वृक्षमूले बद्ध्वा शीघ्रं गृहं व्रज ॥ १३ ॥

ಹೆ ವತ್ಸಾ ! ಇದೆಲ್ಲವನ್ನು ವಿಚಾರಮಾಡಿ ಆಮೇಲೆ ನೀನು ನಿನ್ನ ಸುಲಿಗೆ ಮೊದಲಾದವುಗಳನ್ನು ಮಾಡು. ಅಲ್ಲಿಯವರಗೆ ನಮ್ಮನ್ನು ಗಿಡದ ಬೊಡ್ಡೆಗೆ ಕಟ್ಟು ಶೀಘ್ರವೇ ಮನೆಗೆ ಹೋಗು. ೧೩

कुटुंबं सुविचार्यैव अत्रागच्छाचिरात् खलु।
अनुमान्य स तान्बध्वा वृक्षमूले मुनीश्वरान् ॥ १४ ॥

ಕುಟುಂಬದವರನ್ನು ಚನ್ನಾಗಿ ವಿಚಾರಿಸಿ ಬೇಗನೇ ನಿಶ್ಚಯವಾಗಿ ಇಲ್ಲಿಗೆ ಬಾ. ಹೀಗೆ ಹೇಳಿದರು. ಅದಕ್ಕೆ ಒಪ್ಪಿ ಅವನು ಆ ಎಲ್ಲ ಮುನೀಶ್ವರರನ್ನು ಗಿಡದ ಬೊಡ್ಡಿಗೆ ಕಟ್ಟಿಹಾಕಿ, ೧೪

गत्वा गेहं समाहूय पुत्रान् जायां स्नुषां तथा।
पप्रच्छ दीनमनसा स सर्वानात्मनो गतिम् ॥ १५ ॥

ಮನೆಗೆ ಹೋಗಿ ಮಕ್ಕಳು, ಹೆಂಡತಿ, ಸೊಸೆ ಇವರನ್ನು ಕರೆದು ದೀನ ಮನಸ್ಸಿನಿಂದ ತನ್ನ ಗತಿಯ ಬಗ್ಗೆ ಅವರೆಲ್ಲರನ್ನು ಕೇಳಿದನು. ೧೫

मया हताश्च बहुशो ब्राह्मणाः पापकर्मणा।
तत्पापस्य विभागे किं भवन्तो न विभागिनः ॥ १६ ॥

किमुक्तं भवता स्वामिन् पोष्यायुष्मत्सुताः किल ॥ १७ ॥

ಪಾಪಫಲವಾಗಿ ಬರುವ ರೌರವನರಕದಲ್ಲಿ ಇಲ್ಲಿಯಂತೆ ಭಾಗವಹಿಸುವಿರಾ ಎಂದು ಕೇಳಲು, ಮಕ್ಕಳು ಅಂದರು. ಪೂಜ್ಯರೇ! ತಾವೇನು ಕೇಳಿದಿರಿ? ಮಕ್ಕಳು ನಿಮ್ಮಿಂದ ಪೋಷಣೀಯರಷ್ಟೇ? ೧೭

एतादृशं विगर्ह्यैतत् कर्म कुर्यात् पिता यदि ।
सुखं वा यदि वा दुखं शुभं वाऽशुभमेव च ॥ १८ ॥

ಇಂತಹ ನಿಂದ್ಯ ಕರ್ಮವನ್ನು ತಂದೆಯು ಮಾಡಿದ್ದಾದರೆ, ಬಂದ ಸುಖ-ದುಃಖವನ್ನು, ಶುಭಾಶುಭಗಳನ್ನು, ೧೮

येन येन कृतं कर्म तद्भोक्तव्यं तु तेन वै ।
अन्यस्य न हि भागस्तु रौरवे नरके पितः ॥ १९ ॥

ಯಾರು ಯಾರು ಕರ್ಮಮಾಡುವವರೋ ಅವರವರೇ ಭೋಗಿಸಬೇಕು. ತಂದೆಯೇ! ಆದ್ದರಿಂದ ರೌರವ ನರಕದಲ್ಲಿ ಬೇರೆಯವರಿಗೆ ಭಾಗವಿಲ್ಲ. ೧೯

तेषां वाक्यं समाकर्ण्य निर्विण्णस्तत्क्षणादभूत् ।
अहो बत महत्कष्टं मम दुर्वृत्तकस्य च ॥२० ॥

ಅವರ ಮಾತನ್ನು ಕೇಳಿದಕೊಡಲೇ ಅವನು ನಿರ್ವಿಣ್ಣನಾದನು. ದುರಾಚಾರಿಯಾದ ನಾನು ಬಹಳ ಕೆಟ್ಟ ವ್ಯಾಪಾರಮಾಡಿದ್ದೇನೆ. ಅಯ್ಯೋ! ೨೦

किं कार्यं निरये पच्ये को निवारयितुं क्षमः ।
साधून् यास्यामि शरणं मुनीन् वै ब्रह्मवादिनः ॥ २१ ॥

ಏನು ಮಾಡಲಿ? ನರಕದಲ್ಲಿ ಬೇಯಿಸಲ್ಪಡುವೆ? ಯಾರು ದೂರಮಾಡಲು ಸಮರ್ಥರು? ವೇದಜ್ಞಾನಿಗಳಾದ ಸಾಧುಸ್ವಭಾವದ ಮುನಿಗಳನ್ನೇ ಶರಣು ಹೊಂದುವೆ. ೨೧

धनुर्बाणौ परित्यज्य मुनीन् स शरणं ययौ ।

ನನ್ನನ್ನು ರಕ್ಷಿಸಿರಿ. ೨೧

भवद्भिनाऽहं कान् यास्ये संसारार्णवतारकान्।

ऋषयः ऊचुः –

धन्योऽसि कृतकृत्योऽसि मुमुक्षुस्त्वं द्विजात्मज ॥ २४ ॥

ಸಂಸಾರ ಸಮುದ್ರದಿಂದ ದಾಟಿಸುವ ನಿಮ್ಮ ಹೊರತು ಯಾರನ್ನು ಶರಣು ಹೊಂದಲಿ ? ಹೀಗೆಂದನು.

**ಋಷಿಗಳು ಅಂದರು –**

ಎಲೈ ಬ್ರಾಹ್ಮಣಕುಮರನೇ! ನೀನೇ ಧನ್ಯನು. ಪಾಪದಿಂದ ಮುಕ್ತಿಯನ್ನು ಇಚ್ಛಿಸುವಿ. ಆದ್ದರಿಂದ ನೀನೇ ಕೃತಕೃತ್ಯನು. ೨೪

कृपया परयाऽविष्टाः कर्णे संश्राव्य तारकम्।
निर्गुणं ब्रह्म निर्द्वन्द्वं मंत्राणामुत्तमोत्तमम् ॥ २५ ॥

ಮಹಾ ಕೃಪಾಳುಗಳಾದ ಅವರು ಕಿವಿಯಲ್ಲಿ ತಾರಕಮಂತ್ರವನ್ನು ಯಾವುದು ಅನಂತ ಗುಣಪೂರ್ಣನು ಸತ್ವಾದಿ ದೋಷರಹಿತನು ಆದ ಭಗವಂತನನ್ನು ಹೇಳುವ ಮಂತ್ರಗಳಲ್ಲಿ ಶ್ರೇಷ್ಠವಾದುದು ಅಂತಹುದನ್ನು ಹೇಳಿದರು. ೨೫

तदा तं मंत्रमेवैषो जजाप व्युत्क्रमेण च।
द्व्यक्षरं स समासीनो वल्मीके तद्वने वसन् ॥ २६ ॥

ಆಗ ಅವನು ಆ ಮಂತ್ರವನ್ನು ಹಿಂದಿನಿಂದ ಹೇಳುತ್ತಿದ್ದನು. ಅದು ಎರಡೇ ಅಕ್ಷರ ಉಳ್ಳದ್ದು. ಅದನ್ನು ಜಪಿಸುತ್ತ ಆ ವನದಲ್ಲಿಯೇ ಬೆಂದು ಹುತ್ತಿನಲ್ಲಿ ಕುಳಿತನು. ೨೬

कालान्तरे समायाताः शिष्यं तं द्रष्टुमिच्छवः।
कमंडलुजलैः स्नाप्य वल्मीकादुद्धृतः पुनः ॥ २७ ॥

ಆ ಋಷಿಗಳು ಕಾಲಾಂತರದಲ್ಲಿ ಆ ಶಿಷ್ಯನನ್ನು ನೋಡಬೇಕೆಂದು ಬಂದರು.

ಪ್ರಖ್ಯಾತನಾದನು. ಮನುಷ್ಯನು ಕೃಷ್ಣವೇಣಿಯಲ್ಲಿ ಸ್ನಾನಮಾಡಿ ವಲ್ಮೀಕೇಶ್ವರನನ್ನು ನಮಿಸಿದರೆ ಪಾಪ ಮುಕ್ತನಾಗಿ ಶಾಶ್ವತ ಗತಿಯನ್ನು ಹೊಂದುವನು. ೨೮–೨೯

॥ इति श्रीस्कान्दे कृष्णामाहात्म्ये वल्मीकतीर्थवर्णनं नाम एकविंशतितमोऽध्यायः ॥

❀ ❀ ❀

## ॥ अथ द्वाविंशोऽध्यायः ॥

स्कन्द उवाच –

तत्तीर्थात् कृष्णवेणायां तीर्थान्येव पदेपदे ।
प्राधान्यतो द्विजश्रेष्ठाः श्रुणुध्वं हि समासतः ॥ १ ॥

ಸ್ಕಂದನು ಹೇಳಿದನು –

ಆ ತೀರ್ಥದಿಂದ ಕೃಷ್ಣಾನದಿಯಲ್ಲಿ ಹೆಜ್ಜೆ ಹೆಜ್ಜೆಗೂ ತೀರ್ಥಗಳಿವೆ. ಎಲೈ ಬ್ರಾಹ್ಮಣಶ್ರೇಷ್ಠರೇ ! ಸಂಗ್ರಹವಾಗಿ ಮುಖ್ಯವಾದವುಗಳನ್ನು ಹೇಳುತ್ತೇನೆ. ಕೇಳಿರಿ. ೧

धनुष्पंचप्रमाणेन स्कंदतीर्थं प्रचक्षते ।
धनुर्दशप्रमाणं तु वामनं तीर्थमुच्यते ॥ २ ॥

ಐದು ಧನುಸ್ಸಿನ ಅಂತರದಲ್ಲಿ ಸ್ಕಂದತೀರ್ಥವೆಂದು ಹೇಳುತ್ತಾರೆ. ಹತ್ತು ಧನುಸ್ಸಿನ ಪ್ರಮಾಣದಲ್ಲಿ ವಾಮನತೀರ್ಥವಿದೆ. ೨

ब्राह्मं तीर्थं ततो रम्यं सरस्वत्याः धनुर्दश ।
ततोऽपि तीर्थप्रवरं महापातकनाशनम् ॥ ३ ॥

नश्यंति नात्र सन्देहः पापानि सुबहून्यपि ।

**ऋषय ऊचुः –**

पापनाशनतीर्थं च कस्माज्जातं कदा गुह ।
एतद्विस्तार्य सकलं सेतिहासं तु नो वद ॥ ५ ॥

ನಾಶ ಹೊಂದುತ್ತವೆ. ಹಾಗೂ ಬಹು ಪಾಪಗಳೂ ಕೂಡ.

**ಋಷಿಗಳು ಅಂದರು.**

ಹೇ ಸ್ಕಂದನೇ! ಪಾಪನಾಶನತೀರ್ಥವು ಯಾವ ಕಾರಣಕ್ಕಾಗಿ ಯಾವಾಗ ಉಂಟಾಯಿತು. ಇದೆಲ್ಲವನ್ನು ವಿಸ್ತಾರವಾಗಿ ಇತಿಹಾಸ ಪುರಸ್ಸರವಾಗಿ ನಮಗೆ ಹೇಳು. ೫

पुरा ब्रह्मादयो देवाः सर्षयश्च प्रपीडिताः ।
क्षीराब्धौ शरणं जग्मुः नारायणमनामयम् ॥ ६ ॥

ಹಿಂದಕ್ಕೆ, ಋಷಿಗಳಿಂದ ಕೂಡಿದ ಬ್ರಹ್ಮಾದಿ ದೇವತೆಗಳು ಪೀಡಿತರಾಗಿ ಕ್ಷೀರಸಮುದ್ರದಲ್ಲಿ ಇರುವ ರೋಗರಹಿತನಾದ ನಾರಾಯಣನನ್ನು ಶರಣು ಹೊಂದಿದರು. ೬

विदित्वा देवदेवेशो विष्णुर्वै भक्तवत्सलः ।
आविरासीत्ततो देवान् ज्ञातं त्वागमनं तु वः ॥ ७ ॥

ಭಕ್ತವತ್ಸಲನೂ ದೇವದೇವರಿಗೆ ಒಡೆಯನು ಆದ ಶ್ರೀ ವಿಷ್ಣುವು ಆವಿರ್ಭೂತನಾದನು. ದೇವತೆಗಳನ್ನು ಕುರಿತು ಅಂದನು. ನಿಮ್ಮ ಆಗಮನವು ಏಕೆ ಎಂದು ತಿಳಿದಿದೆ. ೭

दैत्यैः प्रपीडिता यूयं सर्वे वै महिषादिभिः ।
तान् हन्तुं हि मया चिंत्य उपायो ह्यत्र दारुणः ॥ ८ ॥

तस्माद्वै यात भो क्षिप्रं भवानीं भक्तवत्सलम्।
दैत्यघ्नीं मूलप्रकृतिं सा वः कार्यं करिष्यति ॥ १० ॥

ಆದ್ದರಿಂದ ನೀವೆಲ್ಲರೂ ಬೇಗನೇ ಭಕ್ತವತ್ಸಲಳಾದ ಭವಾನಿಯ ಹತ್ತಿರ ಹೋಗಿರಿ. ದೈತ್ಯರನ್ನು ನಾಶಮಾಡುವ ಮೂಲಪ್ರಕೃತಿಯಾದ ಅವಳು ನಿಮ್ಮ ಕಾರ್ಯವನ್ನು ಮಾಡುವಳು. ೧೦

इति तद्वाक्यमाकर्ण्य संभ्रमापन्नमानसाः।
अमरास्तुष्टुवुर्देवीं त्रिलोकीपालनक्षमाम् ॥ ११ ॥

ಹೀಗೆ ಶ್ರೀಹರಿಯ ಮಾತನ್ನು ಕೇಳಿದ, ಭಯದಿಂದ ಕೂಡಿದ ಮನಸ್ಸುಳ್ಳ, ದೇವತೆಗಳು ಮೂರೂ ಲೋಕವನ್ನು ರಕ್ಷಿಸುವ ಸಾಮರ್ಥ್ಯವುಳ್ಳ ದೇವಿಯ ಸ್ತೋತ್ರ ಮಾಡಿದರು. ೧೧

भुवनेश्वरीं जगद्धात्रीं सृष्टिस्थित्यन्तकारिणीम्।
प्रणम्य दण्डवद्भूमौ वरदां दैत्यनाशिनीम् ॥ १२ ॥

ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವ, ಜಗತ್ತನ್ನು ಧರಿಸುವ, ಭುವನಗಳಿಗೆ ಒಡತಿಯಾದ, ವರಕೊಡುವ, ದೈತ್ಯನಾಶಕಳಾದ ಅವಳನ್ನು, ಭೂಮಿಯಲ್ಲಿ ದಂಡದಂತೆ ಸಾಷ್ಟಾಂಗ ನಮಸ್ಕಾರಮಾಡಿ. ೧೨

ऋषय उचुः –

भुवनेश्वरीं नमस्यामो भक्तकल्पद्रुमां सदा।
वरदां कामदां शान्तां कृष्णातीरनिवासिनीम् ॥ १३ ॥

ಋಷಿಗಳು ಅಂದರು.

ಭಕ್ತರಿಗೆ ಯಾವಾಗಲೂ ಕಲ್ಪವೃಕ್ಷದಂತಿರುವ, ಇಚ್ಛಿತವಾದ ವರಕೊಡುವ, ಕೃಷ್ಣಾತೀರದಲ್ಲಿ ಶಾಂತಳಾದ ಹೇ ಭುವನೇಶ್ವರಿ ! ನಿನ್ನನ್ನು ನಮಿಸುತ್ತೇವೆ. ೧೩

सर्वसिद्धिप्रदे देवि भक्तिमुक्तिप्रदे शुभे।

सर्वाऽभयप्रदे देवि सर्वदुष्टविनाशिनि ।
भुवनेश्वरि महाकालि मनोऽभीष्टप्रदायिनी ॥ १५ ॥

ಎಲ್ಲರಿಗೂ ಅಭಯ ಕೊಡುವ, ಎಲ್ಲ ದುಷ್ಟರನ್ನು ನಾಶಮಾಡುವ, ಮಹಾಕಾಲಿಯಾದ ಹೇ ಭುವನೇಶ್ವರಿ ದೇವಿಯೇ! ನೀನು ಮನೋಭೀಷ್ಟವನ್ನು ಕೊಡುವವಳು. ೧೫

सर्वक्लेशहरे देवि श्रीर्महाविष्णुरूपिणी ।
भुवनेश्वरि महाकालि मनोऽभीष्टप्रदायिनी ॥ १६ ॥

ಎಲ್ಲ ಕ್ಲೇಶಗಳನ್ನು ದೂರಮಾಡುವ ಹೇ ದೇವಿ! ನೀನು ಲಕ್ಷ್ಮೀನಾರಾಯಣರ ಸನ್ನಿಧಾನಪಾತ್ರಳು. ಮಹಾಕಾಲಿ ಭುವನೇಶ್ವರಿ! ನೀನು ಮನೋಭೀಷ್ಟವನ್ನು ಕೊಡುವವಳು. ೧೬

अंतर्यामि स्वरूपेण स्थिते सर्वत्र सर्वगे ।
भुवनेश्वरि महाकालि मनोऽभीष्टप्रदायिनी ॥ १७ ॥

ಎಲ್ಲರಲ್ಲಿ ಎಲ್ಲ ಕಾಲದಲ್ಲಿ ಅಂತರ್ಯಾಮಿಯಾಗಿರುವ ಹೇ ಮಹಾಕಾಲೀ! ಭುವನೇಶ್ವರೀ! ನೀನು ಮನೋಭೀಷ್ಟವನ್ನು ಕೊಡುವವಳು. ೧೭

भवनाशकरे देवि भवभेषजदायिनि ।
भुवनेश्वरि महाकालि मनोऽभीष्टप्रदायिनि ॥ १८ ॥

ಸಂಸಾರವನ್ನು ದೂರಮಾಡುವ, ಸಂಸಾರಕ್ಕೆ ಔಷಧಕೊಡುವ, ಹೇ ಮಹಾಕಾಲೀ ಭುವನೇಶ್ವರೀ! ನೀನು ಮನೋಭೀಷ್ಟವನ್ನು ಕೊಡುವವಳು. ೧೮

अविद्यापटलध्वंसि महानंदेऽभयप्रदे ।
भुवनेश्वरि महाकालि मनोऽभीष्टप्रदायिनि ॥ १९ ॥

ಅವಿದ್ಯಾ ಎಂಬ ಪರದೆಯನ್ನು ನಾಶಮಾಡಿ, ಮಹಾನಂದ, ಅಭಯ ಕೊಡುವವಳೇ, ಹೇ ಮಹಾಕಾಲೀ ಭುವನೇಶ್ವರೀ! ನೀನು ಮನೋಭೀಷ್ಟವನ್ನು ಕೊಡುವವಳು. ೧೯

कृतांजलिपुटाः तस्थुः त्राहि त्राहीति वादिनः ॥ २१ ॥

ಈ ಸ್ತೋತ್ರವನ್ನು ಪಠಿಸುತ್ತ ನಿರ್ಮಲಾಂತಃಕರಣವುಳ್ಳ ಋಷಿಗಳು, ರಕ್ಷಿಸು, ರಕ್ಷಿಸು ಎನ್ನುತ್ತ ನಿಂತರು. ೨೧

मुनिभिः संस्तुताः देवि मनोऽभीष्टप्रदायिनि ।
प्राह प्रसादसुमुखी याचध्वं वरमुत्तमम् ॥ २२ ॥

ಮುನಿಗಳಿಂದ ಸ್ತೋತ್ರಿತಳಾದ ಮನೋಭೀಷ್ಟ ಕೊಡುವ ದೇವಿಯು ಪ್ರಸನ್ನಮುಖಳಾಗಿ ಉತ್ತಮ ವರವನ್ನು ಕೇಳಿರಿ. ಎಂದು ಅಂದಳು. ೨೨

ऋषयः ऊचुः –

देवि धन्या वयं सर्वे तव दर्शनमात्रतः ।
न याचामो वरं चान्यं वयं त्वां भक्तवत्सले ॥ २३ ॥

ಋಷಿಗಳು ಅಂದರು :–

ಎಲೈ ದೇವಿ! ನಿನ್ನ ದರ್ಶನಮಾತ್ರದಿಂದ ನಾವೆಲ್ಲರೂ ಧನ್ಯರಾಗಿದ್ದೇವೆ. ಹೇ ಭಕ್ತವತ್ಸಲೇ! ನಾವು ನಿನಗೆ ಬೇರೇನೂ ವರ ಕೇಳುವದಿಲ್ಲ. ೨೩

नद्यामस्यां कृष्णवेण्यां वस त्वं सर्वगे शिवे ।
दर्शनात् सर्वभक्तानां मनोऽभीष्टं ददस्व नः ॥ २४ ॥

ಎಲ್ಲ ಕಡೆಗೆ ಇರುವ, ಮಂಗಲಕರಳಾದ ಹೇ ದೇವಿ! ಕೃಷ್ಣವೇಣಿ ಎಂಬ ಈ ನದಿಯಲ್ಲಿ ನೀನು ಇರು. ದರ್ಶನದಿಂದ ಎಲ್ಲ ಭಕ್ತರಿಗೂ ನಮಗೂ ಮನೋಭೀಷ್ಟವನ್ನು ಕೊಡು. ೨೪

देव्युवाच –

ये पठंति स्तोत्रमिदं श्रृण्वन्ति श्रद्धयान्विता: ।
तेषामभीष्टं दास्यामि भक्तानां नात्र संशय: ॥ २६ ॥

ಯಾರು ಈ ಸ್ತೋತ್ರವನ್ನು ಪಠಿಸುವರೋ, ಶ್ರದ್ಧಾಯುಕ್ತರಾಗಿ ಕೇಳುವರೋ ಆ ಭಕ್ತರ ಅಭೀಷ್ಟೆಯನ್ನು ಕೊಡುವೆ. ಇದರಲ್ಲಿ ಸಂದೇಹವಿಲ್ಲ. ೨೬

मासमात्रं पठेद्यस्तु पुरश्चरणकाम्यया ।
तस्य कार्याणि सिध्यन्ति स्नात्वा नद्यां यतव्रत: ॥ २७ ॥

ಯಾರು ತಿಂಗಳವರೆಗೆ ಪುನಶ್ಚರಣೇಚ್ಛೆಯಿಂದ ಪಠಿಸುವರೋ, ನದಿಯಲ್ಲಿ ವ್ರತವುಳ್ಳವರಾಗಿ ಸ್ನಾನ ಮಾಡುವರೋ, ಅವರ ಕಾರ್ಯಗಳು ಸಿದ್ಧವಾಗುತ್ತವೆ. ೨೭

इत्युक्त्वा संस्तुता देवि दैत्यदर्पविनाशिनी ।
दत्वाऽभयं निर्जराणां खड्गखेटकधारिणी ॥ २८ ॥

ಹೀಗೆ ಹೇಳಿ ದೈತ್ಯರ ದರ್ಪವನ್ನು ನಾಶ ಮಾಡುವ, ಸ್ತೋತ್ರಿತಳಾದ ದೇವಿಯು ದೇವತೆಗಳಿಗೆ ಅಭಯಕೊಟ್ಟು, ಖಡ್ಗ, ಢಾಲು ಮೊದಲಾದವುಗಳನ್ನು ಹಿಡಿದು. ೨೮

इहैव मुक्तिर्हस्ताग्राऽमृतपात्रं च बिभ्रती ॥ २९ ॥

ಅಭಯಹಸ್ತವುಳ್ಳ ಅವಳು ಅಮೃತಪಾತ್ರೆಯನ್ನೂ ಧರಿಸಿ ಇಲ್ಲೇ ಇದ್ದಾಳೆ. ೨೯

॥ इति श्री स्कन्दपुराणे कृष्णामाहात्म्ये मनोऽभीष्टस्तोत्रवर्णनं नाम द्वाविंशोऽध्याय: ॥



## ॥ अथ त्रयोविंशोऽध्याय: ॥

स्कंद उवाच –

ಧೂಪ ದೀಪಗಳಿಂದಲೂ, ನೈವೇದ್ಯಗಳಿಂದಲೂ, ಒಳ್ಳೆ ವಸ್ತ್ರಗಳಿಂದಲೂ, ೨

कर्पूरचूर्णसंयुक्तैः तांबूलैश्च सपूगकैः ।
नानासुवर्णपुष्पैश्च नीराजनमहोत्सवैः ॥ ३ ॥

ಅಡಿಕೆಗಳಿಂದ, ಕರ್ಪೂರಚೂರ್ಣಗಳಿಂದ ಕೂಡಿದ ತಾಂಬೂಲಗಳಿಂದಲೂ, ನಾನಾವಿಧವಾದ ಸುವರ್ಣಪುಷ್ಪಗಳಿಂದಲೂ, ನೀರಾಜನರೂಪ ಮಹೋತ್ಸವಗಳಿಂದಲೂ, ೩

मंत्रपुष्पांजलिभिश्च संपूज्य विधिपूर्वकम् ।
प्रणम्य दंडवद्भूमौ कृतांजलिपुटस्तदा ॥४ ॥

ಮಂತ್ರ ಪುಷ್ಪಾಂಜಲಿಗಳಿಂದಲೂ, ವಿಧಿಪೂರ್ವಕವಾಗಿ ಪೂಜಿಸಿ ಸಾಷ್ಟಾಂಗ ನಮಸ್ಕಾರ ಮಾಡಿ ಕೈ ಮುಗಿದುಕೊಂಡು, ೪

पूजांते स्तोत्रमेतद्धि मनोभीष्टप्रदं जपेत् ।
यं यं चिंतयते कामं तं तं प्राप्नोति निश्चितम् ॥५ ॥

ಪೂಜೆಯ ಕೊನೆಗೆ ಈ ಮನೋಭೀಷ್ಟಪ್ರದ ಸ್ತೋತ್ರವನ್ನು ಜಪಿಸಬೇಕು. ಯಾವ ಯಾವ ವಿಷಯಗಳನ್ನು ಇಚ್ಛಿಸುವನೋ ಅದನ್ನು ನಿಶ್ಚಯವಾಗಿ ಹೊಂದುವನು. ೫

मुक्तिं प्राप्नोति सद्भक्तो भगवत्याः प्रसादतः ।
तस्मात् तीर्थानि चान्यानि पवित्राणि द्विजोत्तमाः ॥ ६ ॥

धनुषां षट्प्रमाणानि श्रुणुद्ध्वं मे समासतः ।
पापनाशनतीर्थं तु दुग्धतीर्थं ततो वरम् ॥ ७ ॥

ಒಳ್ಳೇ ಭಕ್ತನೂ, ಪೂಜ್ಯಳ ಅನುಗ್ರಹದಿಂದ ಮುಕ್ತಿಯನ್ನು ಹೊಂದುತ್ತಾನೆ. ಎಲೈ ಬ್ರಾಹ್ಮಣೋತ್ತಮರೇ ! ಆದ್ದರಿಂದ ಬೇರೆ ತೀರ್ಥಗಳೂ ಕೂಡ ಪವಿತ್ರವಾದವುಗಳು. ೬

ಮೊಸರಿನ ತೀರ್ಥವು ಮಹಾರಮಣೀಯವಾದದ್ದು. ಘೃತತೀರ್ಥವು ಅತ್ಯಂತ ವಿಸ್ತಾರವಾದದ್ದು, ಪೂಜ್ಯಳ ಪೂಜೆಗಾಗಿ ನವನೀತ ಎಂಬ ತೀರ್ಥವಿದೆ. ೮

**शुद्धांबुतीर्थं तस्मात्तु मधुतीर्थं ततो वरम् ।**
**खगतीर्थं नागतीर्थं सिद्धतीर्थं ततः परम् ॥९॥**

ಆಮೇಲೆ ಶುದ್ಧಜಲತೀರ್ಥ, ಅದಕ್ಕೂ ಒಳ್ಳೆಯದು ಮಧುತೀರ್ಥ, ಖಗತೀರ್ಥ, ನಾಗತೀರ್ಥ, ಆಮೇಲೆ ಸಿದ್ಧತೀರ್ಥ. ೯

**विंशद्धनुःप्रमाणेन विष्णुतीर्थं फलप्रदम् ।**
**नागारितीर्थमत्युग्रं कालकूटाघनाशनम् ॥१०॥**

ಇಪ್ಪತ್ತು ಧನುಸ್ಸಿನ ಪ್ರಮಾಣದಿಂದ ಫಲಪ್ರದವಾದ ವಿಷ್ಣುತೀರ್ಥವು. ಕಾಲಕೂಟ ಸದೃಷ ಪಾಪನಾಶಕರವಾದದ್ದು, ಅತ್ಯುಗ್ರವಾದ ಗರುಡತೀರ್ಥವು. ೧೦

**अर्कतीर्थं ततो ज्ञेयं दद्रुकुष्ठादिनाशनम् ।**
**दर्शनात् सर्वपापघ्नं ऋषितीर्थं ततः परम् ॥११॥**

ದದ್ರು, ಕುಷ್ಠ, ಮೊದಲಾದ ರೋಗನಾಶಕವಾದ ಅರ್ಕತೀರ್ಥವು ಆಮೇಲೆ, ಎಂದು ತಿಳಿಯಬೇಕು. ಆಮೇಲೆ ದರ್ಶನದಿಂದಲೇ ಪಾಪ ನಾಶ ಮಾಡುವ ಋಷಿತೀರ್ಥವು. ೧೧

**मार्कंडेयस्ततः प्राच्यां तपः कुर्वन् महामतिः ।**
**आराधयत्ततो देवीं तुष्टाव परया मुदा ॥ १२ ॥**

ಅದಕ್ಕೆ, ಪೂರ್ವದಲ್ಲಿ, ತಪಸ್ಸು ಮಾಡುವ ಮಹಾಬುದ್ಧಿಯುಳ್ಳ ಮಾರ್ಕಂಡೇಯರು ದೇವಿಯನ್ನು ಆರಾಧಿಸಿದರು. ಮತ್ತು ಮಹಾ ಸಂತೋಷದಿಂದ ಸ್ತೋತ್ರ ಮಾಡಿದರು. ೧೨

**मार्कंडेय उवाच –**

[illegible]

या भाति वितता भूमौ नृणामुत्तारणाय वै ॥१४॥

ಉತ್ತರ ಪರ್ವತಸಾಲುಗಳಿಂದ ಭೂಮಿಗೆ ಬಂದ ಮನುಷ್ಯರ ಉದ್ಧಾರಕ್ಕಾಗಿ ಸ್ವರ್ಗದ ಪಾವಟಿಗೆಗಳ ಸಾಲುಗಳಂತೆ ಹುಂಕಾರ ಮಾಡುತ್ತಾಳೆ. ೧೪

गंभीरवारिघोषेण भाति हुंकुर्वतीव सा ।
शेषाज्जगदघौघानां मूलतस्तर्जनाय च ॥ १५ ॥

ಗಂಭೀರವಾದ ನೀರಿನ ಶಬ್ದದಿಂದ, ಸಿಟ್ಟಿನಿಂದ ಜಗತ್ತಿನ ಪಾಪಸಮುದಾಯಗಳನ್ನು ಭರಿಸುವಳಂತೆ ಹುಂಕಾರ ಮಾಡುತ್ತಾಳೆ. ೧೫

आवर्तनाभिः पद्माक्षी शुभांगी फेनहारिणी ।
ब्रम्हप्रिया ज्ञानकरी साक्षात् भाति सरस्वती ॥ १६ ॥

ನೀರಿನಲ್ಲಿ ಕಂಡು ಬರುವ ಸುಳಿಗಳೇ ನಾಭಿ, ನೊರೆಯೇ ಹಾರ, ಪದ್ಮಗಳೇ ಕಣ್ಣುಉಳ್ಳ ಬ್ರಹ್ಮದೇವರಿಗೆ ಪ್ರಿಯಳಾದ, ಜ್ಞಾನಪ್ರದಳಾದ ಸಾಕ್ಷಾತ್ ಸರಸ್ವತಿಯಂತೆ ವಿರಾಜಿಸುತ್ತಿರುವಳು. ೧೬

रम्या रतिप्रिया विष्णोः वरबाहुधृतांबुजा ।
चकास्ति या स्वयं लक्ष्मीः जरा दुर्गतिनाशिनि ॥ १७ ॥

ಸುಂದರಳೂ, ವಿಷ್ಣುವಿನ ರತಿ ಪಾತ್ರಳೂ, ಶ್ರೇಷ್ಠಬಾಹುವಿನಲ್ಲಿ ಕಮಲವನ್ನೂ ಧರಿಸಿದ ಜರಾ-ದುರ್ಗತಿಯನ್ನು ನಾಶಮಾಡುವ ಇವಳು, ಸ್ವಯಂ ಲಕ್ಷ್ಮೀಯಂತೆ ವಿರಾಜಿಸುವಳು. ೧೭

बहुधा शंभुसान्निध्यात् सदा दर्शनगौरवा ।
सौभाग्यदायिनी गौरी तारिणी जगदंबिका ॥ १८ ॥

ಅನೇಕ ಕಡೆ ರುದ್ರದೇವರ ಸಾನ್ನಿಧ್ಯದ ಮೂಲಕ ಯಾವಾಗಲೂ ದರ್ಶನ ಗೌರವವನ್ನೂ ಪಡೆದ, ಸೌಭಾಗ್ಯ ಕೊಡುವ, ಜಗತ್ತನ್ನೇ ದಾಟಿಸುವ ಅಂಬಿಕೆಯಂತೆ ಇರುವಳು. ೧೮

पवित्रकरणालापैः जनान् सांत्वयती बहून् ।

ಬ್ರಹ್ಮದೇವರು ವಿಸ್ತಾರ ಮಾಡಿದ ಮನುಷ್ಯರಿಗೆ ಕಲ್ಪಲತೆಯಂತೆ ಇದ್ದಾಳೆ. ಮಹಾತ್ಮರಿಗೆ ಯಾವಳು ರಕ್ಷಕಳು, ಪಾಪಿಗಳಿಗೂ ಸೌಖ್ಯವನ್ನು ಕೊಡುವಳು. ೨೦

**विचित्रशुद्धमाहात्म्यां तां नतोऽस्मि गरीयसीम् ।**
**त्यक्त्वायसमयो याति रसस्पर्शात् सुवर्णताम् ॥ २१ ॥**

ವಿಚಿತ್ರವೂ, ಶುದ್ಧವೂ ಆದ ಮಹಾತ್ಮ್ಯ ಉಳ್ಳ, ದೊಡ್ಡವಳಾದ ಅವಳನ್ನೂ ನಮಿಸುವೆ. ಹೇಗೆ ಕಬ್ಬಿಣವು ರಸಸ್ಪರ್ಶದಿಂದ ತನ್ನ ಗುಣದ ಧರ್ಮವನ್ನು ಬಿಟ್ಟು ಸುವರ್ಣವಾಗುವದೋ, ೨೧

**एवं कृष्णाजलस्पर्शात् सद्यः पापं हि पुण्यताम् ।**
**येयं दक्षिणगंगेति गीयते दिवि किन्नरैः ॥ २२ ॥**

ಹಾಗೇ ಕೃಷ್ಣಾಜಲಸ್ಪರ್ಶದಿಂದ ಪಾಪಗಳೇ ಪುಣ್ಯವಾಗಿ ಪರಿವರ್ತನೆ ಹೊಂದುತ್ತವೆ. ದ್ಯುಲೋಕದಲ್ಲಿ ಕಿನ್ನರರು ಇವಳನ್ನೂ "ದಕ್ಷಿಣಗಂಗಾ" ಎಂದು ಗಾಯನ ಮಾಡುತ್ತಾರೆ. ೨೨

**दक्षिणाशां गता यस्मात् देवी सा मे प्रसीदतु ।**
**एवं संस्तूयमाना सा निर्गत्य जलमध्यतः ॥ २३ ॥**

ದಕ್ಷಿಣ ದಿಕ್ಕಿಗೆ ಹೋದ ಮೂಲಕ ದಕ್ಷಿಣ ಗಂಗಾ ಎಂದು ಪ್ರಸಿದ್ಧಳಾದ ಆ ದೇವಿಯು ನನಗೆ ಪ್ರಸನ್ನಳಾಗಲಿ. ಹೀಗೆ ಸ್ತೋತ್ರಿತಳಾದ ಆ ದೇವಿಯು ಜಲಮಧ್ಯದಿಂದ ಹೊರಟು. ೨೩

**प्रसन्ना मुनिवर्यं तं वरदाऽस्मीति सा वदत् ।**
**सोऽथ प्रणम्य दृष्टात्मा प्रांजलिः परमेश्वरीम् ॥ २४ ॥**

ಪ್ರಸನ್ನಳಾಗಿ, ಆ ಮುನಿಶ್ರೇಷ್ಠರನ್ನು ಕುರಿತು "ವರಕೊಡುವೆನು" ಎಂದು ಅಂದಳು. ಆಗ ನಮಸ್ಕರಿಸಿ ಸಂತುಷ್ಟವಾದ ಮನಸ್ಸುಳ್ಳ ಅವನು ಕೈ ಮುಗಿದು ಆ ಪರಮೇಶ್ವರಿಗೆ, ೨೪

ಭಗವಂತನಲ್ಲಿ ಭಕ್ತಿಯಿಲ್ಲದೇ ಅದು ವ್ಯರ್ಥವೆಂದು ನನಗೆ ಅನಿಸುವದು. ಆದ್ದರಿಂದ ಶ್ರೇಷ್ಠರೂಪನಾದ ಶಿವನಲ್ಲಿಯೂ, ಜ್ಞಾನಾನಂದಾದ್ಯಾತ್ಮಕನಾದ ಗೋವಿಂದನಲ್ಲಿಯೂ, ೨೬

त्वयि प्रकृतिमायायां भक्तिः स्यात् सार्वकालिकी।

देव्युवाच –

एवमस्तु मुनिश्रेष्ठ यश्च स्तोष्यत्यनेन माम् ॥ २७ ॥

ಪ್ರಕೃತಿ ಮಾಯಾ ರೂಪಳಾದ ನಿನ್ನಲ್ಲಿಯೂ ಎಲ್ಲ ಕಾಲದಲ್ಲಿ ಭಕ್ತಿ ಉಂಟಾಗಲಿ.

**ದೇವಿಯು ಅಂದಳು.**

ಹೇ ಶ್ರೇಷ್ಠ ಮುನಿಯೇ ಹಾಗೇ ಆಗಲಿ. ಯಾರು ಈ ಸ್ತೋತ್ರದಿಂದ ನನ್ನನ್ನು ಸ್ಮರಿಸುವರೋ, ೨೭

स्नाति यश्चात्र दीर्घायुः मत्प्रसादात् भविष्यति।

नारद उवाच –

इत्युक्त्वांतर्हिता देवी मुनिस्तत्राचरत्तपः ॥ २८ ॥

ಯಾರು ಇಲ್ಲಿ ಸ್ನಾನ ಮಾಡುವರೋ, ಅವರು ನನ್ನ ಅನುಗ್ರಹದಿಂದ ದೀರ್ಘ ಆಯುಷ್ಯ ಉಳ್ಳವರಾಗುವರು.

**ನಾರದರು ಅಂದರು.**

ಹೀಗೆ ಹೇಳಿ ದೇವಿಯು ಅದೃಶ್ಯಳಾದಳು. ಮುನಿಯು ಅಲ್ಲಿ ತಪಸ್ಸನ್ನು ಮಾಡಿದನು. ೨೮

मार्कंडेयाभिधं तीर्थं तेन तत्परमं भुवि।
मार्कंडेयाभिधं लिंगं तत्र जातं वरप्रदम् ॥ २९ ॥

ಆದ್ದರಿಂದ ಆ ಶ್ರೇಷ್ಠ ತೀರ್ಥವು ಮಾರ್ಕಂಡೇಯ ಎಂದು ಪ್ರಖ್ಯಾತವಾಯಿತು. ಅಲ್ಲಿ ಮಾರ್ಕಂಡೇಯ ಎಂಬ ಲಿಂಗವೂ ಕೂಡ, ವರಪ್ರದವಾದದ್ದು, ಆಯಿತು. ೨೯

त्रयोविंशोऽध्यायः ॥

❀ ❀ ❀

## ॥ चतुर्विंशोऽध्यायः ॥

मुनिरुवाच -

ಮುನಿಯು ಅಂದನು -

मार्कण्डेयाभिधात् तीर्थात् योगितीर्थं प्रचक्षते ।
योगिनो यत्र सिध्यन्ति ज्ञानयोगश्च सिद्धयः ॥ १ ॥

ಮಾರ್ಕಂಡೇಯ ಎಂಬ ತೀರ್ಥದಿಂದ ಯೋಗಿತೀರ್ಥರೆಂದು ಹೇಳುತ್ತಾರೆ. ಯೋಗಿಗಳು ಎಲ್ಲಿ ಸಿದ್ಧರಾಗುತ್ತಾರೆ ಅಲ್ಲಿ ಜ್ಞಾನಯೋಗ ಮೊದಲಾದ ಸಿದ್ಧಿಗಳು ದೊರಕುತ್ತವೆ. ೧

श्रीतीर्थमुत्तमं ज्ञेयं दर्शनात् स्नानतत्पराः ।
प्राप्नुवन्ति जनाः प्रज्ञां श्रियं विज्ञानतत्पराः ॥ २ ॥

ಶ್ರೀತೀರ್ಥವು ಉತ್ತಮವಾದದ್ದು. ಜನರು ದರ್ಶನದಿಂದಲೂ, ಸ್ನಾನದಿಂದಲೂ, ಜ್ಞಾನ ವಿಜ್ಞಾನ ಐಶ್ವರ್ಯ ಮೊದಲಾದವುಗಳನ್ನು ಹೊಂದುತ್ತಾರೆ. ೨

न दरिद्रो भवेत्तत्र स्नानात् षण्मासमात्रतः ।
गोतीर्थं शंभुतीर्थं च पितृतीर्थमतः परम् ॥ ३ ॥

ಆರು ತಿಂಗಳವರೆಗೆ ಅಲ್ಲಿ ಸ್ನಾನ ಮಾಡುವದರಿಂದ ಯಾರೂ ದರಿದ್ರರಾಗುವದಿಲ್ಲ. ಇದಾದಮೇಲೆ ಗೋತೀರ್ಥ, ಶಂಭುತೀರ್ಥ, ಪಿತೃತೀರ್ಥ ಹೀಗೆ ಇವೆ. ೩

त्रिंशद्धनुः प्रमाणं तु तीर्थात् तीर्थान्तरं द्विजाः ।
शुक्लतीर्थं ततो ज्ञेयं सर्वाघौघविनाशनम् ॥ ४ ॥

ಎಲ್ಲಿಯ ನೀರು ಸ್ಪರ್ಶಮಾತ್ರದಿಂದಲೇ ಎಲ್ಲರೂ ನೋಡುತ್ತಿರುವಂತೆಯೇ ರಾಕ್ಷಸನು ಮುಕ್ತನಾದನು.

ಋಷಿಗಳು ಅಂದರು–

ಹೇ ದೇವಶ್ರೇಷ್ಠನೇ ! ಕೃಷ್ಣವೇಣಿಯಲ್ಲಿ ಈ ತೀರ್ಥವು ಏಕೆ ಉಂಟಾಯಿತು. ೫

आख्याहि नो यथा वृत्तं सर्वज्ञस्त्वं हि पुण्यदम् ।

स्कंद उवाच–

पुरा देशे सुवृत्तोऽभून्नाम्ना राजा तु धार्मिकः ॥ ६ ॥

ಪುಣ್ಯಪ್ರದವಾದ ಈ ತೀರ್ಥದ ವೃತ್ತಾಂತವನ್ನು ನಮಗೆ ಸರ್ವಜ್ಞರಾದ ತಾವು ನಡೆದಂತೆ ಹೇಳಿರಿ.

ಸ್ಕಂದನು ಅಂದನು

ಹಿಂದೆ ದೇಶದಲ್ಲಿ ಸುವೃತ್ತ ಎಂಬ ಹೆಸರಿನ ರಾಜನಿದ್ದನು. ೬

तस्यांतिके द्विजः कश्चित् वेदशास्त्रार्थतत्परः ।
राजदर्शनमायातान् ब्राह्मणान् तर्कनिष्ठुरः ॥ ७ ॥

ಅವನ ಹತ್ತಿರ ಒಬ್ಬ ಬ್ರಾಹ್ಮಣನು ವೇದಶಾಸ್ತ್ರದ ಅರ್ಥಗಳಲ್ಲಿ ಆಸಕ್ತನೂ ತರ್ಕನಿಷ್ಠುರನೂ ಆಗಿದ್ದು ರಾಜದರ್ಶನಕ್ಕಾಗಿ ಬಂದ ಬ್ರಾಹ್ಮಣರನ್ನು. ೭

जिगाय द्विजमुख्यांश्च कोऽन्योऽस्ति पृथिवीतले ।
एवं बहुतिथे काले उत्तंको ऋषिसत्तमः ॥ ८ ॥

ಗೆದ್ದು ಅವರಿಗೆ ಅನ್ನುತ್ತಿದ್ದನು– ನನ್ನ ಸಮಾನರು ಭೂಮಿಯಲ್ಲಿ ಯಾರಿದ್ದಾರೆ ? ಹೀಗೆ ಬಹು ಕಾಲ ಹೋಗುತ್ತಿರಲು ಉತ್ತಂಕನೆಂಬ ಶ್ರೇಷ್ಠ ಋಷಿಯು, ೮

यज्ञार्थं स्वयमायातो राजानं धनलिप्सया ।
ब्रह्मिष्ठं वेदतत्वज्ञं पूजयामास भूपतिः ॥ ९ ॥

तावत्तर्कधिया विप्रः सोत्तंकं ब्राह्मणोत्तमम् ।
पप्रच्छ किमधीतं ते किं ज्ञातमिति दर्पतः ॥ ११ ॥

ಅಷ್ಟರಲ್ಲಿಯೇ ಆ ತರ್ಕಶಾಸ್ತ್ರ ಪಂಡಿತ ಬ್ರಾಹ್ಮಣನು, ದರ್ಪದಿಂದ ಬ್ರಾಹ್ಮಣೋತ್ತಮನಾದ ಉತ್ತಂಕನನ್ನು, ನೀನು ಏನು ಓದಿದ್ದೀ? ನೀನು ಏನು ತಿಳಿದಿದ್ದೀ? ಎಂದು ಕೇಳಿದನು. ೧೧

उत्तंकस्तपसा दीप्तः तं शशाप द्विजाधमम् ।
यतस्त्वं विद्यया विप्रान् निर्जित्य ब्राह्मणोत्तमान् ॥ १२ ॥

ತಪಸ್ಸಿನಿಂದ ಪ್ರಚಂಡನಾದ ಆ ಉತ್ತುಂಕನು ಆ ಅಧಮ ಬ್ರಾಹ್ಮಣನಿಗೆ ಶಾಪ ಕೊಟ್ಟನು. ನೀನು ವಿದ್ಯೆಯಿಂದ ಉತ್ತಮ ಬ್ರಾಹ್ಮಣರನ್ನು ಗೆದ್ದು, ೧೨

स्वयं सर्वज्ञतां मूढ यासि राजाश्रयात् सदा ।
तस्मात् त्वं निर्जनेऽरण्ये राक्षसो भव दुर्मते ॥ १३ ॥

ಸದಾ ರಾಜಾಶ್ರಯದಿಂದ ನಿನ್ನನ್ನು ನೀನೇ ಸರ್ವಜ್ಞನೆಂದು ತಿಳಿದಿದ್ದೀ. ಆದ್ದರಿಂದ ದುರ್ಬುದ್ಧಿ ಉಳ್ಳವನೇ !ಮೂರ್ಖನೇ !ನಿರ್ಜನವಾದ ಅರಣ್ಯದಲ್ಲಿ ನೀನು ರಾಕ್ಷಸನಾಗು. ೧೩

गतदर्पोऽभवत्तेन निर्विण्णः शरणं गतः ।
उच्छापं कुरु मां शापात् साधूत्तम महामते ॥ १४ ॥

ಇದರಿಂದ, ದರ್ಪಹೋದ, ಈ ಬ್ರಾಹ್ಮಣನು ನೀರ್ವಿಣ್ಣನಾಗಿ, ಶರಣು ಹೊಂದಿ, ಹೇ ಮಹಾಬುದ್ಧಿಯುಳ್ಳ ಶ್ರೇಷ್ಠಸಾಧುವೇ ! ನನ್ನನ್ನು ಶಾಪರಹಿತನನ್ನಾಗಿ ಮಾಡು. ೧೪

अज्ञानात् मत्कृतं कर्म क्षमस्व करुणांबुधे ।
पादौ संपीड्य तरसा सहसा खिन्नधीर्मुनेः ॥ १५ ॥

ಹೇ ಕರುಣಾಸಮುದ್ರನೇ !ಅಜ್ಞಾನದಿಂದ ನಾನು ಮಾಡಿದ ಕರ್ಮವನ್ನು ಕ್ಷಮಿಸು.

ಹೇಳುವ ಅವನನ್ನು ಹಿಡಿದುಕೊಂಡು ಆ ಉತ್ತಮ ಬ್ರಾಹ್ಮಣನು. ೧೬

कृष्णावेणीं समागत्य स्नात्वा तस्यां अपापधीः ।
हस्ताभ्यां जलमासे चे दुर्वृत्ते राक्षसाधमे ॥ १७ ॥

ಕೃಷ್ಣವೇಣಿಗೆ ಬಂದು ಅಲ್ಲಿ ಪಾಪಬುದ್ಧಿ ಇಲ್ಲದ, ಅವನು ಸ್ನಾನಮಾಡಿ ದುರಾಚಾರಿಯೂ ಅಧಮ ರಾಕ್ಷಸನೂ ಆದ ಅವನ ಮೇಲೆ ಎರಡೂ ಕೈಗಳಿಂದ ನೀರು ಸಿಂಪಡಿಸಿದನು. ೧೭

तदंबुस्पर्शनात् सद्यो दिव्यदेहमवाप्तवान् ।
ततः स तत्पादयुगं नत्वा संतोषमाप्तवान् ॥ १८ ॥

ಆ ಜಲಸ್ಪರ್ಶದಿಂದ ಕೂಡಲೇ ದಿವ್ಯದೇಹವನ್ನು ಹೊಂದಿದ ಆ ಬ್ರಾಹ್ಮಣನು ಅವನ ಚರಣಾರವಿಂದಗಳನ್ನು ನಮಿಸಿ ಸಂತೋಷಪಡೆದನು. ೧೮

शौक्लं देहं तदा प्राप विमानवरमारुहत् ।
उत्तंकोपि मुदा युक्तो ऋषीन् प्रोवाच सत्वरम् ॥ १९ ॥

ಬೆಳ್ಳಗಿನ ದೇಹವನ್ನು ಹೊಂದಿ ಶ್ರೇಷ್ಠ ವಿಮಾನವನ್ನು ಏರಿದನು. ಸಂತೋಷದಿಂದ ಯುಕ್ತನಾದ ಉತ್ತುಂಕನೂ ಕೂಡ ಕೂಡಲೇ ಋಷಿಗಳಿಗೆ ಅಂದನು. ೧೯

शुक्लतीर्थमिदं नाम सर्वप्रापप्रणाशनम् ।
ख्यातिं यास्यति नद्यां वै स्नानात् सद्गतिदं नृणाम् ॥ २० ॥

ಎಲ್ಲ ಪಾಪವನ್ನು ಕಳೆಯುವ ಈ ತೀರ್ಥವು ಈ ನದಿಯಲ್ಲಿ ಶುಕ್ಲತೀರ್ಥವೆಂದೇ ಖ್ಯಾತಿಯನ್ನು ಪಡೆದು ಸ್ನಾನದಿಂದ ಮನುಷ್ಯರಿಗೆ ಸದ್ಗತಿಯನ್ನು ಕೊಡುವದು. ೨೦

शुक्लतीर्थे नरः स्नात्वा शुक्लेशं संप्रपूज्य च ।
शुद्धं धाम नरः प्राप्य संसाराब्धिं तरत्यसौ ॥ २१ ॥

ಮನುಷ್ಯನು ಶುಕ್ಲತೀರ್ಥದಲ್ಲಿ ಸ್ನಾನಮಾಡಿ ಶುಕ್ಲೇಶನನ್ನು ಚನ್ನಾಗಿ ಪೂಜಿಸಿ ಶುದ್ಧವಾದ ಸ್ಥಾನವನ್ನು ಹೊಂದಿ ಮನುಷ್ಯನು ಸಂಸಾರ ಸಮುದ್ರವನ್ನು ದಾಟುವನು. ೨೧

ಹಿಂದೆ ದಾನವರಿಂದ ಪರಾಜಿತರಾದ ಇಂದ್ರಾದಿ ದೇವತೆಗಳು ಎಲ್ಲ ತೀರ್ಥಗಳನ್ನು ನೋಡಿದರೂ ಎಲ್ಲಿಯೂ ಸುಖವನ್ನು ಪಡೆಯಲಿಲ್ಲ. ೨೩

जंबुद्वीपे कृष्णावेण्यां आययुः स्नातुमुद्यताः ।
मिलित्वा सर्वदेवैस्तु कृत्वैकं स्नानमुत्तमम् ॥ २४ ॥

ಜಂಬೂದ್ವೀಪದಲ್ಲಿರುವ ಕೃಷ್ಣವೇಣಿಗೆ ಬಂದು ಸ್ನಾನಮಾಡಬೇಕೆಂದು ಉದ್ಯೋಗ ಮಾಡಿದರು. ಎಲ್ಲ ದೇವತೆಗಳೂ ಕಲೆತು ಒಂದು ಉತ್ತಮ ಸ್ಥಾನವನ್ನು ನೋಡಿ, ೨೪

तत्र स्थापितवन्तस्ते ऋषिभिः ब्रह्मवादिभिः ।
अमरेशं महालिंगं दर्शनात् सर्वकामदम् ॥ २५ ॥

ಬ್ರಹ್ಮಜ್ಞಾನಿಗಳಾದ ಋಷಿಗಳಿಂದ ಅಮರೇಶ ಎಂಬ ಮಹಾಲಿಂಗವನ್ನು ಸ್ಥಾಪಿಸಿದರು. ಅದು ದರ್ಶನದಿಂದಲೇ ಎಲ್ಲ ಇಚ್ಛೆಯನ್ನು ಪೂರಯಿಸುವದು. ೨೫

तत्पश्चिमे महातीर्थं सर्वाघौघविनाशनम् ।
सस्नुः प्रातश्च विबुधाः संपूज्य ह्यमरेश्वरम् ॥ २६ ॥

ಅದರ ಪಶ್ಚಿಮದಲ್ಲಿ ಎಲ್ಲ ಪಾಪಸಮುದಾಯಗಳನ್ನು ನಾಶ ಮಾಡುವ ಮಹಾತೀರ್ಥ ಇದೆ. ಅಲ್ಲಿ ದೇವತೆಗಳು ಪ್ರಾತಃಸ್ನಾನ ಮಾಡಿ ಅಮರೇಶ್ವರನನ್ನು ಪೂಜಿಸಿ. ೨೬

संवत्सरांते विजयं स्वं स्वं स्थानं च भेजिरे ।
तत्तीर्थस्य प्रसादेन पुनर्देवत्वमाप्नुयुः ॥ २७ ॥

ಒಂದು ವರ್ಷದ ಮೇಲೆ ವಿಜಯವನ್ನೂ, ತಮ್ಮ ತಮ್ಮ ಸ್ಥಾನವನ್ನೂ, ಪಡೆದರು. ಆ ತೀರ್ಥದ ಅನುಗ್ರಹದಿಂದ ಮತ್ತೆ ದೇವತ್ವವನ್ನು ಹೊಂದಿದರು. ೨೭

स्नात्वा चामरतीर्थे वै पूजनादमरेशितुः ।
सर्वपापानि नश्यन्ति सत्यमेतत् वदामि वः ॥ २८ ॥

[illegible]
೨೯

॥ इति श्रीस्कंदपुराणे कृष्णामाहात्म्ये अमरतीर्थवर्णनं नाम
चतुर्विंशोऽध्यायः ॥

❀ ❀ ❀

## ॥ अथ पंचविंशोऽध्यायः ॥

ऋषय ऊचुः –

ಋಷಿಗಳು ಅನ್ನುತ್ತಾರೆ –

श्रुत्वा भवन्मुखाम्भोजात् कथां लोकैकपावनीम् ।
तृप्तिं न यामः कथय तीर्थमन्यत्सुपुण्यदम् ॥ १ ॥

ನಿಮ್ಮ ಮುಖಕಮಲದಿಂದ ಲೋಕಕ್ಕೆ ಮುಖ್ಯ ಪಾವಿತ್ರ್ಯವನ್ನು ಕೊಡುವ ಕಥೆಯನ್ನು ಕೇಳಿ ನಮಗೆ ತೃಪ್ತಿ ಇಲ್ಲ. ಪುಣ್ಯಪ್ರದವಾದ ಬೇರೆ ತೀರ್ಥದ ಬಗ್ಗೆ ಹೇಳಿರಿ. ೧

स्कंद उवाच –

ಸ್ಕಂದನು ಅಂದನು –

श्रृणुध्वं मुनयः सर्वे सेतिहासं पुरातनम् ।
संगमं पंचनद्याश्च कृष्णावेण्या सुसंगतम् ॥ २ ॥

ಎಲೈ ಎಲ್ಲ ಮುನಿಗಳಿರಾ! ಕೃಷ್ಣವೇಣೀ ಹಾಗೂ ಪಂಚನದಿ ಇವುಗಳ ಸಂಗಮದ ಪ್ರಾಚೀನವಾದ ಇತಿಹಾಸವನ್ನು ಕೇಳಿರಿ. ೨

तत्तीर्थं वर्णितुं शक्तो न कोपि भुवनत्रये ।
कारुण्यात् वच्मि तत्तीर्थदर्शनात् सद्गतिप्रदम् ॥ ३ ॥

ಈ ಮೂರು ಲೋಕದಲಿ ಆ ತೀರ್ಥವನು. ವರ್ಣಿಸಲು ಯಾರೂ ಶ ರಲ.

ಅನೇಕ ತೀರ್ಥಗಳಿವೆ. ಐದು ನದಿಗಳಿಂದ ಕೂಡಿದ ಈ ನದಿಗಳ ಸಂಗಮವು ದೃಷ್ಟಾಂತವು.
೪

सर्व एव शुभः कालः सर्वदेशस्तथा शुभः ।
सर्वे द्विजाः दानपात्रं संगमे तीर्थनायके ॥ ५ ॥

ಎಲ್ಲ ಕಾಲವೂ ಶುಭಕರವು, ಎಲ್ಲ ದೇಶವೂ ಶುಭದಾಯಕವು, ತೀರ್ಥ ಶ್ರೇಷ್ಠವಾದ ಸಂಗಮದಲ್ಲಿ ಎಲ್ಲ ಬ್ರಾಹ್ಮಣರು ದಾನ ಪಾತ್ರರು. ೫

तत्वज्ञानात् यथा मोहः सिंहं दृष्ट्वा यथा मृगाः ।
तथा पापानि नश्यंति संगमे तीर्थमज्जनात् ॥ ६ ॥

ತತ್ವಜ್ಞಾನದಿಂದ ಮೋಹ ಹೋಗುವಂತೆ, ಸಿಂಹವನ್ನು ನೋಡಿ ಮೃಗಗಳು ಓಡಿಹೋಗುವಂತೆ, ಸಂಗಮತೀರ್ಥಸ್ನಾನದಿಂದ ಪಾಪಗಳು ನಾಶಹೊಂದುವವು. ೬

दानं दद्यात् प्रयत्नेन श्रद्धापूतमतंद्रितः ।
श्रद्धाकृतं स्वल्पमपि दानमानंत्यमश्नुते ॥ ७ ॥

ಲಜ್ಜಾದಿ ರಹಿತನಾಗಿ ವಿಶ್ವಾಸದಿಂದ ಪ್ರಯತ್ನಪುರಸ್ಸರವಾಗಿ ದಾನ ಕೊಡಬೇಕು. ಶ್ರದ್ಧೆಯಿಂದ ಮಾಡಿದ ಸ್ವಲ್ಪ ದಾನವೂ ಕೂಡ ಅನಂತವಾಗುತ್ತದೆ. ೭

पितृन् संतर्प्य विधिवत् नरकोत्तारणाय च ।
शिवा भद्रा तयोर्मध्ये कुंभी चैव सरस्वती ॥ ८ ॥

पंचमी भोगवत्येव पंच नद्यः पुनंतु ताः ।
कश्यपो गालवो गार्ग्यो वसिष्ठश्च महामुनिः ॥ ९ ॥

विश्वामित्रो महातेजाः पंचनद्यधिपाः स्मृताः ।
चतस्रः प्रवहन्त्यत्र गुप्ता भोगावती भवेत् ॥ १० ॥

ನರಕದಿಂದ ಉದ್ಧಾರಕ್ಕಾಗಿ ಪಿತೃಗಳನ್ನು ವಿಧಿಪುರಸ್ಸರವಾಗಿ ಔತಣದಿಂದ

ಶಿವಾ ಎನ್ನುವುದು ಸಾಕ್ಷಾತ್ ರುದ್ರರೂಪ, ಭದ್ರಾ ವಿಷ್ಣುರೂಪ, ಕುಂಭಿಯು ಬ್ರಹ್ಮ ಸ್ವರೂಪ, ಭೋಗಾ ಸರ್ವಸ್ವರೂಪಳು. ೧೧

सरस्वती महागंगा साक्षाद्वै वेदरूपिणी ।
एतासां पंचगंगानां कृष्णवेण्योश्च संगमः ॥ १२ ॥

ಸರಸ್ವತಿಯು ಸಾಕ್ಷಾತ್ ವೇದಸ್ವರೂಪಳಾದ ಮಹಾಗಂಗೆಯು. ಈ ಐದು ಗಂಗೆಗಳು ಹಾಗೂ ಕೃಷ್ಣವೇಣಿ ಇವುಗಳ ಸಂಗಮವು. ೧೨

माहात्म्यं संगमस्थं च वक्तुं नैव पितामहः ।
कूपदेशगुणं स्नानं वाप्यां शतगुणं तथा ॥ १३ ॥

सरोवरे सहस्रं च नद्यामयुतमेव च ।
समुद्रगा नदीस्नानं अनंतं संप्रचक्षते ॥ १४ ॥

ಸಂಗಮದಲ್ಲಿರುವ ಮಾಹಾತ್ಮ್ಯವನ್ನು ಪಿತಾಮಹನೂ ಹೇಳಲು ಸಾಧ್ಯವಿಲ್ಲ. ಮನೆಯಲ್ಲಿ ಮಾಡುವ ಸ್ನಾನಕ್ಕಿಂತ ಭಾವಿಯ ಜಲದಲ್ಲಿ ಮಾಡುವದು ಹತ್ತು ಪಟ್ಟು ಹೆಚ್ಚು ಪುಣ್ಯಪ್ರದವು. ಅದಕ್ಕೆ ಇಳಿದು ಮಾಡುವ ಭಾವಿ ನೂರಪಟ್ಟು ಹೆಚ್ಚು. ಸರೋವರದಲ್ಲಿ ಸಾವಿರ ಪಟ್ಟು. ನದಿಯಲ್ಲಿ ಹತ್ತುಸಾವಿರಪಟ್ಟು ಹೆಚ್ಚು. ಸಮುದ್ರಗಾಮಿನಿಯಾದ ನದಿಯಲ್ಲಿ ಅನಂತವೆಂದು ಹೇಳುವರು. ೧೩-೧೪

संगमे तु कृतं स्नानं मया वक्तुं न शक्यते ।
तत्र स्नानं च दानं च काश्याः शतगुणं भवेत् ॥ १५ ॥

ಸಂಗಮದಲ್ಲಿ ಮಾಡಿದ ಸ್ನಾನಕ್ಕೆ ಪುಣ್ಯವೆಷ್ಟೆಂದರೆ ನನಗೆ ಹೇಳಲು ಸಾಧ್ಯವಿಲ್ಲ. ಅಲ್ಲಿ ಸ್ನಾನ ಮಾಡುವದು, ದಾನ ಮಾಡುವದು, ಕಾಶೀಕಿಂತಲೂ ನೂರು ಪಟ್ಟು ಹೆಚ್ಚು ಫಲಪ್ರದವಾಗುವದು. ೧೫

मितं भागीरथीस्नानं मितं वै गोमतीफलम् ।
गोदावर्यां मितं स्नानं मितं भैम्याः फलं तथा ॥ १६ ॥

सर्वपापविनिर्मुक्तः शाश्वतीं गतिमश्नुते ।
संगमादुत्तरे कूले प्रमाणं धनुषोर्द्वयोः ॥ १८ ॥

ಎಲ್ಲ ಪಾಪಗಳಿಂದ ರಹಿತನಾಗಿ ಶಾಶ್ವತ ಗತಿಯನ್ನು ಅನುಭವಿಸುವನು. ಸಂಗಮದ ಉತ್ತರದಂಡೆಯಲ್ಲಿ ಎರಡು ಧನುಸ್ಸಿನ ಪ್ರಮಾಣದಲ್ಲಿ. ೧೮

पश्चिमे धनुषैकेन संगमः पापनाशनः ।
षट्कूलमध्ये यदि वा कृतं चेत् स्नानं समंत्रं यदि वेदविद्भिः ॥ १९ ॥

ಪಶ್ಚಿಮ ಭಾಗದಲ್ಲಿ ಒಂದು ಧನುಸ್ಸಿನ ಪ್ರಮಾಣದಲ್ಲಿ ಸಂಗಮವು ಪಾಪನಾಶಕರವಾದದ್ದು. ಒಂದು ವೇಳೆ ವೇದಜ್ಞಾನಿಗಳಿಂದ ಕೂಡಿ ಷಟ್‌ಕೂಲಮಧ್ಯದಲ್ಲಿ ಸಮಂತ್ರಕ ಸ್ನಾನ ಮಾಡಿದ್ದಾದರೆ, ೧೯

संतर्प्य देवांश्च यवैः ऋषीन्मुदा पितृन्तिलैः मंत्रयुतैर्गतिं लभेत् ॥ २० ॥

ದೇವತೆಗಳಿಗೆ ತರ್ಪಣನೀಡಿ ಯವದಿಂದ ಋಷಿಗಳನ್ನು, ಎಳ್ಳಿನಿಂದ ಮಂತ್ರ ಪುರಸ್ಸರವಾಗಿ ಪಿತೃತರ್ಪಣ ಮಾಡಿದ್ದಾದರೇ, ಅವನು ಸುಗತಿಯನ್ನು ಹೊಂದುವನು. ೨೦

संगमात् प्रवरं तीर्थं सर्वतीर्थं प्रचक्षते ।
सर्वेशस्तत्र वसति कलिकल्मषनाशनः ॥ २१ ॥

ಸಂಗಮಕ್ಕಿಂತ ಸರ್ವತೀರ್ಥವು ಹೆಚ್ಚಿನದೆಂದು ಹೇಳುತ್ತಾರೆ. ಕಲಿಕೃತ ದೋಷವನ್ನು ನಾಶಮಾಡುವ ಸಂಗಮೇಶ್ವರನು ಅಲ್ಲಿ ವಾಸಿಸುತ್ತಾನೆ. ೨೧

सर्वतीर्थे नरः स्नात्वा सर्वेशं संप्रपूज्य च ।
सर्वपापानि नश्यन्ति तत्कथां श्रुणुत द्विजाः ॥ २२ ॥

ಮನುಷ್ಯನು ಸರ್ವತೀರ್ಥದಲ್ಲಿ ಸ್ನಾನಮಾಡಿ ಸರ್ವೇಶನನ್ನು ಪೂಜಿಸಿದರೆ ಅವನ ಎಲ್ಲ ಪಾಪಗಳು ನಾಶವಾಗುವವು. ಹೆ ಬ್ರಾಹ್ಮಣರೇ ! ಆ ಕಥೆ ಹೇಳುವೆ ಕೇಳಿರಿ. ೨೨

ब्रह्मयज्ञं सदा कुर्वन् ज्ञानविज्ञानतत्परः ॥ २४ ॥

ಆ ಬ್ರಾಹ್ಮಣನು ಗುಡಿಸಲು ಹಾಕಿಕೊಂಡು ಅಲ್ಲಿದ್ದು ಸರ್ವತೀರ್ಥದಲ್ಲಿ ಸ್ನಾನಮಾಡಿ ಯಾವಾಗಲೂ ಬ್ರಹ್ಮಯಜ್ಞವನ್ನು ಮಾಡುತ್ತ ಜ್ಞಾನ, ಅಪರೋಕ್ಷ ಜ್ಞಾನ ಇವುಗಳಲ್ಲಿ ಆಸಕ್ತನಾಗಿದ್ದನು. ೨೪

एवं बहुतिथे काले समोऽभूत् कालपर्यये ।
तस्य शिष्यो महातेजाः विद्यां समधिगम्य च ॥ २५ ॥

ಹೀಗೆ ಅನೇಕ ಸಮಯ ಕಳೆದರೂ ಅವನು ಜ್ಞಾನ ಕಾರ್ಯದಲ್ಲಿ ಆಸಕ್ತನಾಗಿದ್ದನು. ಅವನ ಒಬ್ಬ ಶಿಷ್ಯನು ಮಹಾತೇಜಸ್ವಿಯಾಗಿ ವಿದ್ಯೆಯನ್ನು ಪಡೆದು, ೨೫

स्नात्वा व्याख्यानसमये किंचित् प्रष्टुमनाः सदा ।

शिष्य उवाच –

संशयो मे मनस्येवं सर्वज्ञ करुणानिधे ॥ २६ ॥

ಸ್ನಾನಮಾಡಿ ವ್ಯಾಖ್ಯಾನ ಸಮಯದಲ್ಲಿ ಕೆಲವೊಂದು ಪ್ರಶ್ನೆ ಕೇಳಬೇಕೆಂದು ಯಾವಾಗಲೂ ಉತ್ಸುಕನಾಗಿದ್ದನು. ಒಂದು ದಿನ ಶಿಷ್ಯನು, ಹೇ ಸರ್ವಜ್ಞರೇ! ಕರುಣಾನಿಧಿಗಳೇ, ೨೬

भागीरथ्यादि तीर्थानि सकृत् पापापहानि च ।
कृत्वाऽश्रमं सर्वतीर्थे फलं प्राप्नोति तत्कथम् ॥ २७ ॥

ಭಾಗೀರಥ್ಯಾದಿ ತೀರ್ಥಗಳು ಒಂದೇ ಸಲಕ್ಕೆ ಪಾಪಗಳನ್ನು ಕಳೆಯುತ್ತವೆ. ಸರ್ವತೀರ್ಥದಲ್ಲಿ ಆಶ್ರಮ ಮಾಡಿಕೊಂಡಿದ್ದರೆ ಆ ಫಲವನ್ನು ಹೇಗೆ ಪಡೆಯುವನು. ೨೭

एतद्विस्तार्य सकलं यदि स्याच्चेन्मनोहरम् ।
गतिर्नास्ति न सन्देहः सर्वतीर्थे महागुरो ॥ २८ ॥

ಈ ಎಲ್ಲವನ್ನೂ ವಿಸ್ತಾರಮಾಡಿ ಮನೋಹರವಾಗಿದ್ದರೆ ಹೇಳಬೇಕು. ಹೇ ಮಹಾಗುರುಗಳೇ! [illegible]

**विद्या तपश्च कीर्तिश्च स तीर्थफलमश्नुते ॥ २९ ॥**

ಯಾವನ ಕೈಗಳು, ಕಾಲುಗಳು ಮತ್ತು ಮನಸ್ಸು ನಿಗೃಹೀತವಾಗಿದೆಯೋ, ವಿದ್ಯಾ ತಪಸ್ಸು, ಕೀರ್ತಿ ಇರುವವ್ರೋ, ಅವನು ತೀರ್ಥಫಲವನ್ನು ಅನುಭವಿಸುವನು. ೨೯

**तीर्थं च द्विविधं प्रोक्तं मानसं भौममेव च ।**
**भौमाच्च मानसं श्रेष्ठं श्रद्धया यत्कृतं पुनः ॥ ३० ॥**

ಮಾನಸ ಮತ್ತು ಭೂಮಿಯಲ್ಲಿಯದು ಎಂದು ತೀರ್ಥವು ಎರಡು ವಿಧವಾದದ್ದೆಂದು ಹೇಳುವರು. ಭೂಮಿಯಲ್ಲಿಯ ತೀರ್ಥಕ್ಕಿಂತ ಮಾನಸತೀರ್ಥವು ಶೃದ್ಧಾದಿಂದ ಮಾಡಿದ್ದು ಶ್ರೇಷ್ಠವಾದುದು. ೩೦

**अश्रद्धया विमृश्येत कृतं तीर्थादि तत्क्षणात् ।**
**विश्वासं नैव कुर्वंति वेदादिवचने स्थिरम् ॥ ३१ ॥**

ಅಶ್ರದ್ಧೆಯಿಂದ ಮಾಡಿದ ತೀರ್ಥಾದಿಫಲವು ತತ್ಕ್ಷಣದಲ್ಲಿ ನಾಶವಾಗುತ್ತದೆ. ವೇದಶಾಸ್ತ್ರ ವಚನದಲ್ಲಿ ಸ್ಥಿರವಾದ ವಿಶ್ವಾಸವನ್ನು ಮೂಡಿಸುವದಿಲ್ಲ. ೩೧

**अत एव सुतीर्थानि न पुनन्ति नरानिमान् ।**
**अश्रद्धितांश्च पशुवत् स्पर्शनात् मुक्तिदान्यपि ॥ ३२ ॥**

ಆದ್ದರಿಂದಲೇ ಅಂತಹ ಮನುಷ್ಯರನ್ನು ಈ ಸುತೀರ್ಥಗಳು ಪವಿತ್ರಗೊಳಿಸುವದಿಲ್ಲ. ಸ್ಪರ್ಶ ಮಾತ್ರದಿಂದ ಮುಕ್ತಿಕೊಡುವಂತಹವೂ ಕೂಡ ಪಶುವಿನಂತೆ ಶೃದ್ಧಾಹೀನರನ್ನು ಪವಿತ್ರ ಗೂಳಿಸಲಾರವು. ೩೨

**पशुतुल्याः इमे सर्वे नरा जीवनतत्पराः ।**
**न श्रद्धा विद्यते तेषां तीर्थ-देव-द्विजादिषु ॥ ३३ ॥**

ಐಹಿಕ ಜೀವನದಲ್ಲಿಯೇ ತೊಡಗಿದ, ತೀರ್ಥ, ದೇವರು, ಬ್ರಾಹ್ಮಣರು ಇವರಲ್ಲಿ ಶೃದ್ಧೆ ಇಲ್ಲದ ಈ ಎಲ್ಲ ಜನರು ಪಶುಸದೃಶರು. ೩೩

**देवं मन्यन्ति पाषाणं ये वै तीर्थं जलं विदुः ।**

तस्मात् कुरुष्व विश्वासं त्यक्त्वा संशयमात्मनः ।
तीर्थ भूदेव-देवेषु यदि त्वं फलमिच्छसि ॥ ३६ ॥

ಆದ್ದರಿಂದ ನೀನು ಸಂದೇಹವನ್ನು ಬಿಟ್ಟು, ತೀರ್ಥ, ಬ್ರಾಹ್ಮಣ, ದೇವರು ಇವರಲ್ಲಿ ಫಲವನ್ನು ಬಯಸುವಿಯಾದರೆ ವಿಶ್ವಾಸವನ್ನು ಮಾಡು. ೩೬

अथापि चेदविश्वासं पश्य कौतूहलं महत् ।
ध्यात्वा नारायणं विप्रः तीर्थस्थं तं समाधिना ॥ ३७ ॥

ಹೀಗಿದ್ದರೂ ನೀನು ಅವಿಶ್ವಾಸವನ್ನು ತಾಳುತ್ತಿದ್ದರೆ ಈ ಮಹಾ ಆಶ್ಚರ್ಯ ಕಾರಕ ದೃಶ್ಯವನ್ನು ನೋಡು ಎಂದು ಹೇಳಿ ಆ ಬ್ರಾಹ್ಮಣನು, ತೀರ್ಥದಲ್ಲಿರುವ ನಾರಾಯಣನನ್ನು ಸಮಾಧಿಯಿಂದ ಧ್ಯಾನಮಾಡಿ. ೩೭

प्रांजलिः प्रयतो भूत्वा सर्ववेदो महामनाः ।
तदा बभूव विश्वेशो मुनेराविः सुरैर्वृतः ॥ ३८ ॥

ಸರ್ವವೇದ ಎಂಬ ಮಹಾ ಮನಸ್ವಿಯು ಏಕಾಗ್ರನಾಗಿ ಕೈ ಮುಗಿದುಕೊಂಡು ಪ್ರಾರ್ಥಿಸಲು, ದೇವತೆಗಳಿಂದ ಯುಕ್ತನಾದ ವಿಶ್ವೇಶನು ಮುನಿಯ ಎದುರು ಆವಿರ್ಭೂತನಾದನು. ೩೮

गंगादि सर्वतीर्थानि मूर्तिमंति चकाशिरे ।
ऊचुर्मुनिं सदैवात्र वयं तीर्थे वसामहे ॥ ३९ ॥

ಗಂಗಾದಿ ಸಮಸ್ತ ತೀರ್ಥಗಳೂ ಕೂಡ ಮೂರ್ತಿಮಂತವಾಗಿ ಪ್ರಕಾಶಮಾನರಾಗಿ ಆ ಮುನಿಗೆ ಅಂದರು. ಯಾವಾಗಲೂ ನಾವು ಈ ತೀರ್ಥದಲ್ಲಿ ವಾಸಿಸುತ್ತೇವೆ. ೩೯

इति तद्वाक्यमाकर्ण्य शिष्यो विस्मयमाप सः ।
सत्यं मेने गुरोर्वाक्यं नमस्कृत्य स सद्गुरुम् ॥ ४० ॥

ಹೀಗೆ ಅವರ ಮಾತನ್ನು ಕೇಳಿ ಶಿಷ್ಯನು ಅಶ್ಚರ್ಯವನ್ನು ಹೊಂದಿದನು. ಮತ್ತು ಸದ್ಗುರುವಿಗೆ ನಮಸ್ಕರಿಸಿ ಗುರುಗಳ ಮಾತನ್ನು ಸತ್ಯವೆಂದು ತಿಳಿದನು. ೪೦

तत्तीर्थे दैवतैः साकं लीनानि तपसो बलात

ಸರ್ವತೀರ್ಥ ಎಂದು ಪ್ರಖ್ಯಾತವಾದ ಈ ಸ್ಥಾನವು ದರ್ಶನದಿಂದಲೇ ಎಲ್ಲ ಸಿದ್ಧಿಯನ್ನು ಕೊಡುವಂತಹದು. ಮನುಷ್ಯನು ಸರ್ವತೀರ್ಥದಲ್ಲಿ ಸ್ನಾನಮಾಡಿ ಭಕ್ತಿಯಿಂದ ಸರ್ವೇಶನನ್ನು ಪೂಜಿಸಿ, ೪೨

**सर्वपापविनिर्मुक्तो गतिं याति स शाश्वतीम् ।**
**श्रुत्वा कथामिमां नित्यं श्रद्धया स्नानतत्परः ॥ ४३ ॥**

ಎಲ್ಲ ಪಾಪಗಳಿಂದ ರಹಿತನಾಗಿ ಶಾಶ್ವತಗತಿಯನ್ನು ಅವನು ಹೊಂದಿದನು. ಸ್ನಾನತತ್ಪರನಾದವನು ಶ್ರದ್ಧೆಯಿಂದ ಈ ಕಥೆಯನ್ನು ನಿತ್ಯವೂ ಕೇಳಿ, ೪೩

**प्राप्नोति पुण्यं स्नानस्य सर्वतीर्थे नरः सदा । ॥ ४४ ॥**

ಸರ್ವತೀರ್ಥದಲ್ಲಿ ಸ್ನಾನಮಾಡಿದ ಪುಣ್ಯವನ್ನೇ ಮನುಷ್ಯನು ಹೊಂದುವನು. ೪೪

**॥ इति श्रीस्कंदपुराणे कृष्णामाहात्म्ये सर्वतीर्थवर्णनं नाम पंचविंशोऽध्यायः ॥**

❀ ❀ ❀

## ॥ अथ षड्विंशोऽध्यायः ॥

**स्कंद उवाच –**

**ಸ್ಕಂದನು ಅಂದನು –**

**सर्वतीर्थान्महाभागाः श्रृणुध्वं तीर्थमुत्तमम् ।**
**पिशाचमोचनं नाम विंशद्धनुप्रमाणतः ॥ १ ॥**

**धनुःषट्कप्रमाणेन मांडव्यं तीर्थमुच्यते ।**
**मांडव्यः प्राप शं यत्र स्नानमात्रेण तीर्थतः ॥ २ ॥**

ಹೇ ಭಾಗ್ಯಶಾಲಿಗಳೇ ಸರ್ವತೀರ್ಥದ ನಂತರ ಇರುವ ಉತ್ತಮ ತೀರ್ಥವೆಂದರೆ ಪಿಶಾಚಮೋಚನ ಎಂಬುದು. ಇಪ್ಪತ್ತು ಧನುಃಪ್ರಮಾಣದಲ್ಲಿದೆ. ಆರು ಧನುಸ್ಸಿನ

अनंताख्यं महातीर्थं अनंतभयवारणम्।
अनंतेशं यत्र लिंगं दर्शनात् अघनाशनम् ॥ ४ ॥

ಅನಂತ ಭಯವನ್ನು ನಿವಾರಿಸುವ ಅನಂತ ಎಂಬ ಮಹಾತೀರ್ಥವಿದೆ. ಎಲ್ಲಿ ಅನಂತೇಶ ಎಂಬ ಲಿಂಗವು ದರ್ಶನದಿಂದಲೇ ಪಾಪವನ್ನು ದೂರಮಾಡುವದು. ೪

ततोप्यलसतीर्थं च आलस्याः कामुकाः शठाः।
यत्र तीर्थे सकृत् स्नाताः तेऽपि निष्पापतां ययुः ॥ ५ ॥

ಆ ಮೇಲೆ ಅಲಸತೀರ್ಥವಿದೆ. ಯಾವ ತೀರ್ಥದಲ್ಲಿ ಆಲಸಿಗಳು ಕಾಮುಕರು ಶಠರು ಒಂದು ಸಲ ಸ್ನಾನಮಾಡಿದರೂ ಪಾಪರಹಿತರಾದರು. ೫

दक्षतीर्थं ब्रह्मतीर्थं ऋषितीर्थमतः परम्।
देवतीर्थं ततो ज्ञेयं सर्वाघौघविनाशनम् ॥ ६ ॥

ಆಮೇಲೆ ದಕ್ಷತೀರ್ಥ, ಬ್ರಹ್ಮತೀರ್ಥ, ಋಷಿತೀರ್ಥ, ದೇವತೀರ್ಥವು ಎಲ್ಲ ಪಾಪಗಳನ್ನು ನಾಶಮಾಡುವದು ಆಮೇಲೆ ಇದೆ. ೬

राजा यत्र सुनिर्विण्णः दक्षः शंभुं प्रपूज्य च।
शंभोरनुग्रहं भूयः प्राप शुद्धेन चेतसा ॥ ७ ॥

ದಕ್ಷ ಎಂಬ ರಾಜನು ನಿರ್ವಿಣ್ಣನಾಗಿ ಯಾವ ತೀರ್ಥದಲ್ಲಿ ರುದ್ರನನ್ನು ಶುದ್ಧಮನಸ್ಸಿನಿಂದ ಪೂಜಿಸಿ ಮತ್ತೆ ರುದ್ರನ ಅನುಗ್ರಹ ಪಡೆದನು. ೭

राजतीर्थमिति ख्यातं सर्वाभीष्टप्रदायकम्।
कृष्णवेण्यां सुतीर्थानि लिंगानि सुबहून्यपि ॥ ८ ॥

ಎಲ್ಲರ ಅಭೀಷ್ಟವನ್ನು ಕೊಡುವ, ಅದು ರಾಜತೀರ್ಥವೆಂದು ಪ್ರಖ್ಯಾತವಾಗಿದೆ. ಕೃಷ್ಣವೇಣಿಯಲ್ಲಿ ಒಳ್ಳೇ ತೀರ್ಥಗಳೂ ಅನೇಕ ಲಿಂಗಗಳೂ ಇರುವವು. ೮

स्नानात् पापानि नश्यन्ति दर्शनात् मोक्षमश्नुते।

ಒಂದು ಸಾರೆ ಮಾಡಿದರೂ ಮಹಾಪುಣ್ಯವು ಬರುತ್ತದೆ. ಇದರಲ್ಲಿ ಸಂದೇಹವಿಲ್ಲ. ಕೊಪೇಶ್ವರ ಎಂಬ ಮಹಾಲಿಂಗವು ದರ್ಶನದಿಂದಲೇ ಮುಕ್ತಿಯನ್ನು ಕೊಡುವದು. ೧೦

मुक्तितीर्थे नरः स्नात्वा धनुषां षष्ठिसम्मिते।
तत्र स्नात्वा च दत्वा च कोपेशं संप्रपूज्य ॥११॥
पापिनोऽपि गतिं प्रापुः योगिगम्यां सुदुर्लभाम्।

ऋषय ऊचुः –

इत्थं स्कंद त्वयाऽऽख्यातं मुक्तितीर्थं कुतोऽभवत् ॥१२॥

ಅರವತ್ತು ಧನುಸ್ಸಿನ ಅಂತರದಲ್ಲಿರುವ ಮುಕ್ತಿತೀರ್ಥದಲ್ಲಿ ಮನುಷ್ಯನು ಸ್ನಾನ ಮಾಡಿ ದಾನಕೊಟ್ಟು, ಕೊಪೇಶನನ್ನು ಚನ್ನಾಗಿ ಪೂಜಿಸಿ ಪಾಪಿಗಳು ಕೂಡ ಯೋಗಿಗಳು ಹೊಂದುವ ದುರ್ಲಭವಾದ ಗತಿಯನ್ನು ಹೊಂದಿದರು.

ಋಷಿಗಳು ಅಂದರು :–

ಹೇ ಸ್ಕಂದನೇ ! ಮುಕ್ತಿತೀರ್ಥ ಎಂದು ನೀನು ಹೇಳಿದೆ ಅದು ಹೇಗೆ ಆಯಿತು. ೧೧–೧೨

विलोक्य कानि लिंगानि कोपेशस्य च दर्शनात्।
मुक्तिं के प्राप्नुयुर्ब्रूहि महद्विस्मयकारकम् ॥१३॥

ಯಾವ ಲಿಂಗಗಳನ್ನು ನೋಡಿ ಹಾಗೂ ಕೋಪೇಶನ ದರ್ಶನದಿಂದ ಯಾರು ಮುಕ್ತಿಹೊಂದಿದರು. ಇದು ಮಹಾ ಅಶ್ಚರ್ಯಕರವಾದದ್ದು. ಇದನ್ನು ನಮಗೆ ಹೇಳು. ೧೩

स्कंद उवाच –

ಸ್ಕಂದನು ಅಂದನು –

श्रृणुध्वं मुनयः सर्वे कथां पीयूषसन्निभाम्।
यच्छ्रुत्वा चेशमाहात्म्यं विस्मयावहमुत्तमम् ॥१४॥

एतच्छ्रुत्वा तु कश्चिच्च पंगुर्ब्राह्मणपुंगवः ।
अश्वमेकं समारुह्य स बंकेश्वरमभ्ययात् ॥ १६ ॥

ಇದನ್ನು ಕೇಳಿದ ಕುಂಟನಾದ ಒಬ್ಬ ಶ್ರೇಷ್ಠ ಬ್ರಾಹ್ಮಣನು ಒಂದು ಕುದುರೆಯನ್ನು ಏರಿ ಬಂಕೇಶ್ವರನ ಹತ್ತರ ಹೋದನು. ೧೬

नत्वा संपूज्य विधिवत् बंकेशं च तथा द्विजः ।
कोपेश्वरं तु दृष्ट्वैव प्रापाश्वो गतिमुत्तमाम् ॥ १७ ॥

ಆ ಬ್ರಾಹ್ಮಣನು ಆ ಬಂಕೇಶ್ವರನನ್ನು ವಿಧಿಪುರಃಸ್ಸರವಾಗಿ ಪೂಜಿಸಿ ನಮಿಸಿದನು. ಅವನ ಕುದುರೆಯು ಕೋಪೇಶ್ವರನನ್ನು ನೋಡುತ್ತಲೇ ಉತ್ತಮಗತಿಯನ್ನು ಹೊಂದಿತು. ೧೭

पंगुर्विस्मयमापन्नः तीर्थे स्नातुं तदाऽवसत् ।
दिव्ययानमथारुह्य दिव्यरूपधरः कृती ॥ १८ ॥

ಆಶ್ಚರ್ಯಯುಕ್ತನಾದ ಆ ಕುಂಟ ಬ್ರಾಹ್ಮಣನು ಸ್ನಾನ ಮಾಡಬೇಕೆಂದು ಆ ತೀರ್ಥದಲ್ಲಿ ವಾಸ ಮಾಡಿದನು. ದಿವ್ಯ ವಾಹನವನ್ನು ಆರೋಹಣ ಮಾಡಿಕೊಂಡು ದಿವ್ಯರೂಪ ಧರಿಸಿ ಜ್ಞಾನಿಯಾದ ಅವನು, ೧೮

स्वर्लोकमगमद्विप्राः पुण्यलोकविभूषितम् ।
ततोऽश्वस्य गतिं चात्र दृष्ट्वा देवाः प्रहर्षिताः ॥ १९ ॥

ಎಲೈ ಬ್ರಾಹ್ಮಣರೇ ! ಪುಣ್ಯಜನರಿಂದ ಅಲಂಕೃತವಾದ ಸ್ವರ್ಗಲೋಕಕ್ಕೆ ಹೋದನು. ಆ ಕುದುರೆಯ ಗತಿಯನ್ನು ನೋಡಿ ದೇವತೆಗಳು ಸಂತುಷ್ಟರಾದರು. ೧೯

ज्ञात्वा गतिमिमां देवाः पापिनो यांति सद्गतिम् ।
नारायणं सदा शान्तं सर्वज्ञं जग्मुरंजसा ॥ २० ॥

ಪಾಪಿಗಳು ಕೂಡ ಈ ಗತಿಯನ್ನು ಹೊಂದುವದನ್ನು ತಿಳಿದು ದೇವತೆಗಳು ಸರ್ವಜ್ಞನೂ ಸದಾ ಶಾಂತನೂ ಆದ ಶ್ರೀನಾರಾಯಣನ ಸನ್ನಿಧಾನಕ್ಕೆ ಹೋದರು. ೨೦

विज्ञप्तिं चक्रिरे देवा उपायश्चिन्त्यतामिति ।

हर्षं प्रापुस्तदा देवा ब्रह्माद्या ऋषयस्तथा ॥ २२ ॥

ಅದರ ಎದುರಿನಲ್ಲಿ ಮುಕ್ತಿಕಾರಕವಾದ ಮಹಾಲಿಂಗವನ್ನು ಸ್ಥಾಪಿಸಿದನು. ಆಗ ಬ್ರಹ್ಮಾದಿ ದೇವತೆಗಳು ಹಾಗೂ ಋಷಿಗಳು ಆನಂದವನ್ನು ಪಡೆದರು. ೨೨

मुक्तितीर्थे नरः स्नात्वा सर्वे देवाः सवासवाः ।
जग्मुः स्वर्गं ततो विप्राः कोपेशं प्रणिपत्य च ॥ २३ ॥

ಮುಕ್ತಿತೀರ್ಥದಲ್ಲಿ ಇಂದ್ರನಿಂದ ಸಮೇತರಾದ ಎಲ್ಲ ದೇವತೆಗಳು ಸ್ನಾನಮಾಡಿ ಸ್ವರ್ಗಕ್ಕೆ ಹೋದರು. ಆದ್ದರಿಂದ ಮನುಷ್ಯನು ಅಲ್ಲಿ ಸ್ನಾನಮಾಡಿ ಕೋಪೇಶನನ್ನು ನಮಿಸಿ, ೨೩

यः कोपेश्वरमभ्युपेत्य सहसा श्रीकृष्णवेण्यां पुमान्
तीर्थेऽस्मिन्नतिपावनेन मनसा त्यक्त्वा च तृष्णां पुनः ।
स्नात्वा तं विविधैः समस्तविभवैः संपूज्य तं शंकरं
प्राप्नोत्येव स कामनां यदि भवेन्निष्कामता निर्वृतिम् ॥ २४ ॥

ಕೋಪೇಶ್ವರನ ಹತ್ತರ ಬಂದು ಕೃಷ್ಣವೇಣಿಯಲ್ಲಿ ಈ ತೀರ್ಥದಲ್ಲಿ ಅತಿ ಪವಿತ್ರ ಮನಸ್ಸಿನಿಂದ ಸ್ನಾನಮಾಡಿ ದುರಾಶೆಯನ್ನು ಬಿಟ್ಟು ಅನೇಕ ಐಶ್ವರ್ಯಗಳಿಂದ ಆ ಶಂಕರನನ್ನು ಪೂಜಿಸಿ ತನ್ನ ಇಷ್ಟವನ್ನು ಪಡೆಯುತ್ತಾನೆ. ನಿಷ್ಕಾಮನಿದ್ದರೆ ಮೋಕ್ಷವನ್ನು ಪಡೆಯುತ್ತಾನೆ. ೨೪

तस्मात्तीर्थादश्वतीर्थं मुक्तो यत्रेति नामतः ।
अश्वेश्वरस्तत्र नद्यां सर्वपापप्रणाशनः ॥ २५ ॥

ಎಲ್ಲಿ ಆ ಪಶು ಮುಕ್ತವಾಯಿತೋ ಅದು ಅಶ್ವತೀರ್ಥವೆಂದೇ ಪ್ರಸಿದ್ಧವಾಯಿತು. ಅಲ್ಲಿ ಎಲ್ಲರ ಪಾಪವನ್ನು ನಾಶ ಮಾಡುವ ಅಶ್ವೇಶ್ವರನು ನದಿಯಲ್ಲಿದ್ದಾನೆ. ೨೫

तपः साध्यं हि तत्तीर्थं त्रैलोक्याघविनाशनम् ।
कुब्जेश्वरं ततो दृष्ट्वा स्नात्वा तीर्थोदके क्वचित् ॥ २६ ॥

श्रुत्वा कोपेशमाहात्म्यं श्रद्धया नियतेन्द्रियः ।
गंगा-स्नानफलं सोऽपि प्राप्नोति गतिमुत्तमाम् ॥ २८ ॥

ಶ್ರದ್ಧಾದಿಂದ ಇಂದ್ರಿಯಗಳನ್ನು ನಿಗ್ರಹ ಮಾಡಿ ಕೋಪೇಶನ ಮಾಹಾತ್ಮ್ಯವನ್ನು ಕೇಳಿದವನು ಉತ್ತಮ ಗತಿಯನ್ನು ಹಾಗೂ ಗಂಗಾಸ್ನಾನಫಲವನ್ನು ಪಡೆಯುವನು. ೨೮

॥ इति श्री स्कान्दे कृष्णामाहात्म्ये कोपेशवर्णनं नाम षड्विंशोऽध्यायः ॥

❀ ❀ ❀

## ॥ सप्तविंशोऽध्यायः ॥

ऋषय ऊचुः –

ಋಷಿಗಳು ಅಂದರು –

यन्मतं स्कंद ते तीर्थं तदेव च महत्तरम् ।
वयं तत्रैव यास्यामो यथार्थं वद सुव्रत ॥ १ ॥

ಹೇ ಸ್ಕಂದನೇ ! ನಿನಗೆ ಸಮ್ಮತವಾದ ತೀರ್ಥವೇ ಮಹತ್ತರವಾದದ್ದು. ಒಳ್ಳೇ ವ್ರತ ಉಳ್ಳವನೇ ! ನಿಜವಾಗಿ ಹೇಳು. ನಾವು ಅಲ್ಲಿಯೇ ಹೋಗುತ್ತೇವೆ. ೧

स्कंद उवाच –

ಸ್ಕಂದನು ಅಂದನು

श्रृणुध्वं मुनयः सर्वे भवन्तस्तीर्थरूपिणः ।
येषां दर्शनतो यान्ति तीर्थानि तीर्थतां सदा ॥ २ ॥

ಎಲೈ ಎಲ್ಲ ಮುನಿಗಳಿರಾ ಕೇಳಿರಿ. ನೀವೇ ತೀರ್ಥರೂಪರು. ಯಾವ ನಿಮ್ಮ ದರ್ಶನದಿಂದ ತೀರ್ಥಗಳು ಪವಿತ್ರವಾಗುತ್ತವೆ. ೨

सर्वज्ञान वो वदामः किं तथापि प्रवदाम्यहम् ।

[illegible] ॥ ४ ॥

ಆದರೆ ಶುಕ್ಲ ತೀರ್ಥದ ಸಾಮ್ಯವನ್ನು ಯಾರೂ ಹೊಂದುವದಿಲ್ಲ. ಜ್ಞಾನಿಯಾದವನು, ಆಯುಷ್ಯ ಚಂಚಲ, ಮನುಸ್ಸು ಅತಿಚಂಚಲವೆಂದು ತಿಳಿದು, ೪

पुष्ये मासि त्वमावास्यां स्नात्वा वै शुल्कतीर्थके ।
दत्वा दानानि विप्रेभ्यः पितॄन् संतर्प्य भक्तितः ॥ ५ ॥

ಪುಷ್ಯ ಮಾಸ ಅಮಾವಾಸ್ಯೆಯ ದಿನ ಶುಕ್ಲತೀರ್ಥದಲ್ಲಿ ಸ್ನಾನ ಮಾಡಿ ಬ್ರಾಹ್ಮಣರಿಗೆ ದಾನ ಕೊಟ್ಟು, ಭಕ್ತಿಪೂರ್ವಕವಾಗಿ ಪಿತೃಗಳಿಗೆ ತರ್ಪಣ ಕೊಟ್ಟು, ೫

पुराणश्रवणं कुर्यात् श्लोकं श्लोकार्धमेव वा ।
रुद्राभिषेको देवस्य भक्त्या कोपेश्वरस्य च ॥ ६ ॥

ಶ್ಲೋಕವನ್ನಾಗಲೀ ಅರ್ಧಶ್ಲೋಕವನ್ನಾಗಲೀ ಪುರಾಣಶ್ರವಣವನ್ನು ಮಾಡಬೇಕು. ಕೋಪೇಶ್ವರ ದೇವನಿಗೆ ರುದ್ರಾಭಿಷೇಕ ಮಾಡಬೇಕು. ೬

ब्राह्मणान् भोजयेत् शक्त्या रात्रौ जागरणं तथा ।
स धन्यः स च पूतात्मा स धर्मस्याखिलार्थवित् ॥ ७ ॥

ತನ್ನ ಶಕ್ತ್ಯನುಸಾರ ಬ್ರಾಹ್ಮಣಭೋಜನ ಮಾಡಿಸಿ ರಾತ್ರಿಯಲ್ಲಿ ಜಾಗರ ಮಾಡಬೇಕು. ಅವನು ಧನ್ಯನೂ, ಪವಿತ್ರಾತ್ಮನೂ, ಧರ್ಮದ ಎಲ್ಲ ಅರ್ಥವನ್ನು ತಿಳಿದವನೂ ಆಗುವನು. ೭

कृतकृत्यः स वै मर्त्यः कोपेशं समुपाश्रयेत् ।
यथैतन्मडलं भानोरपि चैकत्र संस्थितम् ॥ ८ ॥

सर्वगं दृश्यते लोकैस्तथा कोपेश्वरो हरः ।
यत्फलं लभतेऽन्यत्र सम्यग्योगेन योगवित् ॥ ९ ॥

ಕೋಪೇಶನನ್ನು ಆಶ್ರಯಿಸಿದ ಮನುಷ್ಯನು ಕೃತಕೃತ್ಯನು. ಈ ಸೂರ್ಯಮಂಡಲವು ಒಂದೇ ಕಡೆಗೆ ಇದ್ದರೂ ಕೂಡ ಎಲ್ಲ ಊರುಗಳಲ್ಲಿ ಕಾಣುವದೋ ಹಾಗೆ ಕೋಪೇಶ್ವರನು

अज्ञः पापकृच्चापि श्रद्धाहीनोपि कालतः ॥

ದೇಹತ್ಯಾಗ ಮಾಡುವ ಕಾಲದಲ್ಲಿ ಕೋಪೇಶ್ವರನನ್ನು ನೋಡುವದರಿಂದ ಅ
ದೊರೆಯುವದು. ಅವನು ಅಜ್ಞನೂ ಪಾಪ ಮಾಡಿದವನೂ ಶ್ರದ್ಧಾಹೀನನಾಗಿ
ಕಾಲಾಂತರದಲ್ಲಿ, ೧೦

कोपेश्वरं सकृद्दृष्ट्वा निष्पापो जायते क्षणात् ।
तप्त्वा तपांसि चोग्राणि जितश्वासो जितेन्द्रियः ॥

ಕೋಪೇಶ್ವರನನ್ನು ಒಂದು ಸಾರೆ ನೋಡಿದರೆ ಕ್ಷಣದಲ್ಲಿ ನಿಷ್ಪಾಪನಾಗು
ಅನೇಕ ಉಗ್ರ ತಪಸ್ಸನ್ನು ಮಾಡಿ ಶ್ವಾಸಜಯ ಮಾಡಿ ಇಂದ್ರಿಯಜಯ ಮಾಡಿ, ೧೧

लभतेऽन्यत्र यत्पुण्यं पुष्ये कोपेशदर्शनात् ।
बह्वंतरायो योगेयं कृच्छ्रसाध्यं तपस्तथा ॥

ಬೇರೆ ಕಡೆಗೆ ಯಾವ ಪುಣ್ಯವನ್ನು ಪಡೆಯುವನೋ ಪುಷ್ಯದಲ್ಲಿ ಕೋಪ
ದರ್ಶನದಿಂದ ಆ ಪುಣ್ಯವನ್ನು ಪಡೆಯುವನು. ಈ ಯೋಗವು ಬಹುವಿಘ್ನಉಳ್ಳ
ತಪಸ್ಸು ಕಷ್ಟಸಾಧ್ಯ ವಾದದ್ದು. ೧೨

योगभ्रष्टस्तपोभ्रष्टः लभते गर्भवैशसम् ।
कृतपापोपि वै तत्र शुक्ले स्नानेन पुण्यताम् ॥

ಯೋಗಭ್ರಷ್ಟನೂ, ತಪೋಭ್ರಷ್ಟನೂ, ಗರ್ಭಹಿಂಸೆಯನ್ನು ಅನುಭವಿಸು
ಪಾಪ ಮಾಡಿದವನೂ ಕೂಡ ಶುಕ್ಲತೀರ್ಥದಲ್ಲಿ ಸ್ನಾನ ಮಾಡಿದವನು, ಪುಣ್ಯ
ಯುವನು. ೧೩

तत्तीर्थस्य तु माहात्म्यं को नु वर्णयितुं क्षमः ।

ऋषय ऊचुः –

संशयो नो महान् स्कंद ह्याज्ञा चेत् स्वामिनो भवेत् ॥

ರ್ಥದ ಮಹಿಮೆಯನ್ನು, ಯಾರು ವರ್ಣಿಸಲು ಸಮರ್ಥರು ?

वाक्यान्यमृतकल्पानि न तृप्ति जनयंति हि ।

ऋषय ऊचुः –

स्वामिन् सर्वज्ञ ते स्कंद तीर्थस्य च कथान्तरे ।
पुरा चोक्तं शुक्लतीर्थं भूयः परमसन्निधौ ॥ १६ ॥

ಪ್ರಶ್ನೆ ಮಾಡುವೆವು. ಅವು ಪರರಿಗೆ ತಾರಕವೂ ಆಗುವವು.

**ಸ್ಕಂದನು ಅಂದನು.**

ಎಲೈ ಒಳ್ಳೇ ವ್ರತ ಉಳ್ಳವರೇ! ಕೇಳಿರಿ. ಇಂಥ ನಿಮ್ಮ ವಾಕ್ಯಗಳು ಅಮೃತ ಸದೃಶವಾದವು. ತೃಪ್ತಿಯನ್ನು ಉಂಟು ಮಾಡುವದಿಲ್ಲ.

**ಋಷಿಗಳು ಅಂದರು**

ಹೇ ಸರ್ವಜ್ಞನಾದ ಸ್ಕಂದಸ್ವಾಮಿಯೇ! ತೀರ್ಥದ ಬಗ್ಗೆ ಹೇಳುವಾಗ ಶುಕ್ಲತೀರ್ಥ ಎಂದು ಹೇಳಿದಿರಿ. ಅದು ಪರಮ ಸನ್ನಿಧಾನಉಳ್ಳದ್ದು. ೧೬

अत्रापि शुक्लतीर्थं तत् कथं जातं हि नो वद ।

स्कंद उवाच –

साधु पृष्टं भवद्भिस्तन्माहात्म्यं शुक्लतीर्थजम् ॥ १७ ॥

ಅವರಲ್ಲಿಯೂ ಶುಕ್ಲತೀರ್ಥವು ಹೇಗೆ ಉಂಟಾಯ್ತು ನಮಗೆ ಹೇಳಿರಿ.

**ಸ್ಕಂದನು ಅಂದನು**

ಶುಕ್ಲತೀರ್ಥದ ಮಾಹಾತ್ಮ್ಯವನ್ನು ನೀವು ಕೇಳಿದ್ದು ಒಳ್ಳೇದಾಯಿತು. ೧೭

अधुना कथयिष्यामि संभ्रमापन्नमानसाः ।
अत्रार्थे वर्णयिष्यामि इतिहासं पुरातनम् ॥ १८ ॥

ಈಗ ಸಂತುಷ್ಟಮನಸ್ಸಿನಿಂದ ಹೇಳುತ್ತೇನೆ. ಈ ವಿಷಯದಲ್ಲಿ ಪ್ರಾಚೀನ ಇತಿಹಾಸವನ್ನು ಹೇಳುತ್ತೇನೆ. ೧೮

महाबलजटोद्भूतां मूलाद्दर्शनगोचरौ ॥ २० ॥

ಅವುಗಳನ್ನು ನೋಡಲು ಕೃಷ್ಣವೇಣಿಯ ತಟಕ್ಕೆ ಬಂದಿದ್ದರು. ಮಹಾಬಲನ ಜಡೆಯಿಂದ ಹೊರಟ ಅವಳನ್ನು ಮೂಲದಿಂದಲೇ ನೋಡಬೇಕೆಂದು ಉತ್ಸುರಾದರು. ೨೦

तीर्थानि यानि तस्यां तु मुनीसमवलोक्य च।
मुक्तितीर्थं तु संप्रेक्ष्य अश्वतीर्थे तु शंकरम् ॥ २१ ॥

ಅಲ್ಲಿ ಯಾವ ಯಾವ ತೀರ್ಥಗಳಿವೆ. ಅವುಗಳನ್ನು ಅವರಿಬ್ಬರೂ ನೋಡಿ ಮುಕ್ತಿತೀರ್ಥವನ್ನು ಅಶ್ವತೀರ್ಥದಲ್ಲಿರುವ ಶಂಕರನನ್ನು ನೋಡಿ, ೨೧

नंदितीर्थे जले छन्नं नद्यां दृष्ट्वा प्रयत्नतः।
जग्मतुः शुक्लतीर्थं वै कृष्णवेण्यां सुसंवृतौ ॥ २२ ॥

ನಂದಿ ತೀರ್ಥದ ನೀರಿನಲ್ಲಿ ಅಡಗಿದ್ದ ಅವನನ್ನು ಪ್ರಯತ್ನದಿಂದ ನೋಡಿ ಕೃಷ್ಣವೇಣೀಯಲ್ಲಿರುವ ಶುಕ್ಲತೀರ್ಥಕ್ಕೆ ಯಾರಿಗೂ ಗೊತ್ತಾಗದಂತೆ ಹೋದರು. ೨೨

याज्ञवल्क्यो महातेजाः सर्वज्ञोपि तपोधनाः।
व्यासं तपोनिधिं नत्वा पप्रच्छ कृपया मुनिः ॥ २३ ॥

ಮಹಾತೇಜಸ್ವಿಗಳಾದ ಯಾಜ್ಞವಲ್ಕ್ಯ ಮುನಿಗಳು ಸರ್ವಜ್ಞರಾದರೂ ಹೇ ತಪಸ್ವಿಗಳಿರಾ! ನಮಿಸಿ, ತಪೋನಿಧಿಗಳಾದ ವ್ಯಾಸರನ್ನು ಕೃಪೆಯಿಂದ ಪ್ರಶ್ನೆ ಮಾಡಿದರು. ೨೩

किंचित् दृष्ट्वा तदाश्चर्यं गंगातीरे तपोनिधिः।
कृष्णां स्नातुं ययौ धीमान् मध्याह्ने सत्क्रियापरः ॥ २४ ॥

ಗಂಗಾತೀರದಲ್ಲಿ ಆ ತಪೋನಿಧಿಗಳು ಸ್ವಲ್ಪ ಆಶ್ಚರ್ಯವನ್ನು ನೋಡಿ ಮಧ್ಯಾಹ್ನದಲ್ಲಿ ಒಳ್ಳೆ ಕ್ರಿಯೆಗಳನ್ನು ಮಾಡಬೇಕೆಂಬು ಇಚ್ಛೆಯಿಂದ ಕೃಷ್ಣಾಸ್ನಾನ ಮಾಡಬೇಕೆಂದು ಆ ಬುದ್ಧಿಮಂತರು ಹೋದರು. ೨೪

पुनः पुनः समायातां कृष्णां लोकैकपावनीम्।
कमंडुलं सचैलं च कृष्णयाऽऽर्द्रीकृतं पुनः ॥ २५ ॥

ಕೃಷ್ಣವೇಣಿಯ ಮಹಿಮೆಯನ್ನು ನನಗೆ ಹೇಳಿರಿ. ೨೭

जलाभिवृद्धिः नद्यास्तु जायते केन हेतुना।
स्नानमात्रेण चेतो मे शुद्धसत्वत्वमाप्नुयात् ॥ २७ ॥

ಯಾವ ಕಾರಣದಿಂದ ನದಿಯ ನೀರು ಹೆಚ್ಚಾಗುತ್ತಿದೆ ? ಸ್ನಾನ ಮಾತ್ರದಿಂದ ನನ್ನ ಮನಸ್ಸು ಶುದ್ಧಸತ್ತ್ವ ಉಳ್ಳದ್ದು ಆಗಿದೆ. ೨೭

वेदव्यास उवाच –

ವೇದವ್ಯಾಸರು ಅಂದರು –

कृष्णा विष्णुतनुः साक्षात् वेणी स्यात् हररूपिणी।
तन्माहात्म्यं हि साकल्यात् प्रवदामि तवाग्रतः ॥ २७ ॥

ಕೃಷ್ಣ ಎಂದರೆ ಸಾಕ್ಷಾತ್ ವಿಷ್ಣುರೂಪಳು, ವೇಣಿ ಎಂದರೆ ರುದ್ರರೂಪಳು. ಅವುಗಳ ಮಾಹಾತ್ಮ್ಯವನ್ನು ನಿಮ್ಮ ಎದುರು ಸಮಗ್ರವಾಗಿ ಹೇಳುವೆ. ೨೮

शुक्लतीर्थमिति ख्यातं कृष्णवेण्यां महामुने।
चत्वारो ब्राह्मणाः यत्र गतिं प्रापुः सुदुर्लभाम् ॥ २८ ॥

ಹೇ ಮಹಾಮುನಿಯೇ ! ಕೃಷ್ಣವೇಣಿಯಲ್ಲಿ 'ಶುಕ್ಲತೀರ್ಥ'ವೆಂದು ಪ್ರಖ್ಯಾತವಾಗಿದೆ. ನಾಲ್ಕು ಮಂದಿ ಬ್ರಾಹ್ಮಣರು ಅಲ್ಲಿ ದುರ್ಲಭವಾದ ಗತಿಯನ್ನು ಹೊಂದಿದರು. ೨೯

॥ इति स्कान्दे कृष्णामाहात्म्यवर्णनं नाम सप्तविंशोऽध्यायः ॥

❀ ❀ ❀

## ॥ अष्टाविंशोऽध्यायः ॥

याज्ञवल्क्य उवाच –

ಯಾಜ್ಞವಲ್ಕ್ಯರು ಅಂದರು –

ವ್ಯಾಸರು ಅಂದರು –

मध्यदेशे समुत्पन्नो वेदवेदांगतत्परः।
अनपत्यो हि निर्विण्णः काले समभवन् सुताः ॥ २ ॥

ವೇದವೇದಾಂಗದಲ್ಲಿ ಆಸಕ್ತನಾದ ಒಬ್ಬ ಬ್ರಾಹ್ಮಣನು ಮಧ್ಯದೇಶದಲ್ಲಿ ಇದ್ದನು. ಬಹಳ ದಿವಸಗಳಾದರೂ ಅವನಿಗೆ ಮಕ್ಕಳಾಗಲಿಲ್ಲ. ನಿರ್ವಿಣ್ಣನಾದನು. ಆದರೆ ವಾರ್ಧಕ್ಯದಲ್ಲಿ ಮಕ್ಕಳು ಹುಟ್ಟಿದರು. ೨

मृतिं प्राप्तस्तु जरठः तत्पत्नी चातिसुंदरी।
कनिष्ठा दुःखिता श्यामा तरुणी रूपगर्विता ॥ ३ ॥

ಮುದುಕನು ಮರಣ ಹೊಂದಿದನು. ಅವನ ಹೆಂಡತಿಯು ಅತಿಸುಂದರಳು, ಸಣ್ಣವಳಾದ ದುಃಖಿತಳಾದ, ರೂಪಗರ್ವಿತಳಾದ, ಆಕೆಯು. ೩

त्यक्त्वा देशं जगामाशु कामिनी मदगर्विता।
देशाद्देशांतरं याता कोंकणे तिष्ठती तदा ॥ ४ ॥

ದೇಶವನ್ನು ಬಿಟ್ಟು ಮದದಿಂದ ಗರ್ವಿತಳಾದ ಅವಳು ದೇಶದಿಂದ ದೇಶಾಂತರಕ್ಕೆ ಹೋಗಿ ಕೊಂಕಣದಲ್ಲಿ ಇದ್ದಳು. ೪

दुःसंगात् गणिका जाता कस्मिश्चिन्नगरेऽवसत्।
तत्पुत्राणां साधुशीलैः जनैश्चोपनयः कृतः ॥ ५ ॥

ದುಷ್ಟಸಹವಾಸದಿಂದ ವೇಶ್ಯೆಯಾಗಿ ಯಾವದೊಂದು ನಗರದಲ್ಲಿ 'ವಾಸ ಮಾಡಿದಳು. ಸಾಧು ಸ್ವಭಾವದ ಜನರು ಆ ಹುಡುಗನಿಗೆ ಉಪನಯನ ಮಾಡಿದರು. ೫

वणिग्वृत्त्या तु वर्तेरन् क्रय्यं नानाविधं बहु।
वृषभैरनयन् देशान्तरं सर्वे सुमीलिताः ॥ ६ ॥

ವ್ಯಾಪಾರ ವೃತ್ತಿಯಿಂದ ಜೀವಿಸುವ ಅವನು ನಾನಾವಿಧವಾದ ವಸ್ತುಗಳನ್ನು ಎತ್ತುಗಳಿಂದ ದೇಶಾಂತರಕ್ಕೆ ಎಲ್ಲರೂ ಕೂಡಿ ತೆಗೆದುಕೊಂಡು ಹೋಗುತ್ತಿದ್ದರು. ೬

ह्रियमाणं धनं वीक्ष्य त्यक्त्वा तत् क्रय्यमाशु ते ।
रत्नश्रेष्ठानि संगृह्य पलायनपराऽभवन् ॥ ८ ॥

ಧನ ಹೋಗುವವನ್ನು ನೋಡಿದ ಅವರು ಆ ವಸ್ತುಗಳನ್ನು ಅಲ್ಲಿಯೇ ಬಿಟ್ಟು ಶ್ರೇಷ್ಠರತ್ನಗಳನ್ನು ತೆಗೆದುಕೊಂಡು ಓಡಿಹೋದರು. ೮

यदृच्छया हि संप्राप्ता मातुर्नगरमाशु ते ।
तत्र मातुर्गृहं प्राप्ताः गणिकाया द्विजाधमाः ॥ ९ ॥

ದೈವಯೋಗದಿಂದ ತಾಯಿ ಇದ್ದ ಊರಿಗೆ ಬಂದರು. ಆ ಅಧಮ ಬ್ರಾಹ್ಮಣರು ವೇಶ್ಯೆಯಾದ ತಾಯಿಯ ಮನೆಗೇ ಬಂದರು. ೯

सकांचनान् तानालक्ष्य प्रोवाच भ्रूविजृंभणैः ।

गणिकोवाच –

श्रांता यूयं दूरदेशात् समायाताः बहुव्यथाः ॥ १० ॥

ಹಣದಿಂದ (ಬಂಗಾರದಿಂದ) ಸಹಿತರಾಗಿ ಬಂದ ಅವರನ್ನು ನೋಡಿ ಹುಬ್ಬು ಹಾರಿಸುತ್ತ ಆಕೆ ಅಂದಳು.

**ವೇಶ್ಯೆ ಅಂದಳು.**

ದೂರ ದೇಶದಿಂದ ಬಂದ ನೀವು ಬಹಳೇ ದಣಿದಿದ್ದೀರಿ. ಬಹು ದುಃಖ ಉಳ್ಳವರಾಗಿದ್ದೀರಿ. ೧೦

विश्रांतिः क्रियतामत्र गृहे सर्वसुखावहे ।
तेऽप्याविशन् गृहे तस्याः सर्वोपस्करसंयुते ॥ ११ ॥

ಎಲ್ಲ ಸುಖವನ್ನೂ ಕೊಡುವ ಈ ಮನೆಯಲ್ಲಿ ವಿಶ್ರಾಂತಿ ಪಡೆಯಿರಿ. ಎಲ್ಲ ಸಾಮಗ್ರಿಗಳಿಂದ ಕೂಡಿದ ಆಕೆಯ ಮನೆಯನ್ನು ಪ್ರವೇಶಿಸಿದರು. ೧೧

उपविश्य क्षणं ते तु क्षुधाक्रांताः समब्रुवन् ।
क्षुधाऽस्मान् बाधतेऽत्यन्तं तदुपायो विचिन्त्य ताम् ॥ १२ ॥

೧೩

ततः फलादिभुक्त्वा ते स्वरत्नानि प्रकाशिरे।
तद्रत्नदर्शनात् सद्यो मुदं प्राप सुमध्यमा ॥ १४ ॥

ಆಮೇಲೆ ಹಣ್ಣು ಮೊದಲಾದವುಗಳನ್ನು ತಿಂದು ಅವರು ತಮ್ಮ ರತ್ನಗಳನ್ನು ತೋರಿಸಿದರು. ಈ ರತ್ನಗಳ ದರ್ಶನದಿಂದ ಆ ಸುಂದರಿಯು ಸಂತುಷ್ಟಳಾದಳು. ೧೪

सोपस्कारं चकाराशु तांबूलादिकमेव च।
कृत्वा नर्मकथाः सम्यक् कनिष्ठः कुशलोऽवदत् ॥ १५ ॥

ಪರಿಷ್ಕೃತ ತಾಂಬೂಲ ಮೊದಲಾದವುಗಳನ್ನು ಕೊಟ್ಟು ವಿಹಾರೋಪಯುಕ್ತ ನರ್ಮ ಕಥೆಗಳನ್ನು ಕೂಡ ಚನ್ನಾಗಿ ಮಾಡಿದಳು. ಆಗ ಜಾಣನಾದ ಸಣ್ಣ ತಮ್ಮನು ಅಂದನು. ೧೫

आदर्शे निजरूपं स दृष्ट्वा मातुस्तथैव च।
धिक्बंधवः किमेतद्धि इयं माता न संशयः ॥ १६ ॥

ತಾಯಿಯ ಮತ್ತು ತನ್ನ ರೂಪವನ್ನು ಕನ್ನಡಿಯಲ್ಲಿ ನೋಡಿ, ಇವಳು ತಾಯಿ ಎಂದು ನಿಶ್ಚಯಿಸಿ, ಹೇ ಬಂಧುಗಳೇ! ನಿಮಗೆ ಧಿಃಕ್ಕಾರವಿರಲಿ. ಇದೇನು ಮಾಡ ಹೊರಟಿರಿ. ಇವಳು ನಮ್ಮ ತಾಯಿ. ಇದರಲ್ಲಿ ಸಂದೇಹವೇ ಇಲ್ಲ. ಎಂದನು. ೧೬

तेऽपि निर्विण्णमनसः तां नमस्कृत्य सर्वतः।
निवेद्य नाम गोत्राणि सापि निर्विण्णतां ययौ ॥ १७ ॥

ಅವರೂ ಕೂಡ ನಿರ್ವಿಣ್ಣವಾದ ಮನಸ್ಸು ಉಳ್ಳವರಾಗಿ ಆಕೆಯನ್ನು ನಮಸ್ಕರಿಸಿ ತಮ್ಮ ಹೆಸರು, ಗೋತ್ರ ಮೊದಲಾದವುಗಳನ್ನು ಹೇಳಿದರು. ಇದನ್ನು ಕೇಳಿ ಆಕೆಯೂ ನಿರ್ವಿಣ್ಣಳಾದಳು. ೧೭

मनसा यत्कृतं पापं सोपरस्कारयुतं तथा।
निष्कृतिस्तु कथं स्यान्नः पप्रच्छुः ब्राह्मणानिति ॥ १८ ॥

ಕೇಳಿದರು. ೧೯

ब्राह्मणाः ऊचुः –

ಬ್ರಾಹ್ಮಣರು ಅಂದರು

ज्ञानं तीर्थं मनस्तीर्थं धृतितीर्थमुदाहृतम् ।
तीर्थानां उत्तमं तीर्थं विशुद्धिर्मनसः परा ॥ २० ॥

ಜ್ಞಾನವೇ ತೀರ್ಥವು, ಮನಸ್ಸೇ ತೀರ್ಥವು, ಧೈರ್ಯವೇ ತೀರ್ಥವು ಎಂದು ಹೇಳಿದ್ದಾರೆ. ತೀರ್ಥಗಳಲ್ಲೆಲ್ಲ ಉತ್ತಮ ತೀರ್ಥವೆಂದರೆ ಶ್ರೇಷ್ಠ ಮನಃಶುದ್ಧಿಯೇ. ೨೦

न जलाप्लुतदेहस्य स्नानमित्यभिधीयते ।
सस्नातो यदि न स्नातः पापो मलिन एव सः ॥ २१ ॥

ದೇಹ ನೀರಿನಲ್ಲಿ ಸ್ನಾನ ಮಾಡಿದರೆ ಮಾತ್ರ ಸ್ನಾನವೆಂದು ಹೇಳುವದಿಲ್ಲ. ಪಾಪವನ್ನು ಮನಸ್ಸಿನಲ್ಲಿಟ್ಟುಕೊಂಡು ಸ್ನಾನ ಮಾಡಿದರೂ ಆವನು ಮಲಿನನೇ, ಪಾಪಿಯೇ. ೨೧

न शरीरमलत्यागात् नरो भवति निर्मलः ।
मानसे हि मले त्यक्ते भवत्यत्यन्तनिर्मलः ॥ २२ ॥

ಮನುಷ್ಯನು ಶಾರೀರಕ ಮಲತ್ಯಾಗದಿಂದ ನಿರ್ಮಲನಾಗಲಾರನು. ಮಾನಸ ಮಲವನ್ನು ಕಳೆದುಕೊಂಡರೆ ಮಾತ್ರ ಅತ್ಯಂತ ನಿರ್ಮಲನಾಗುವನು. ೨೨

विषयेष्वतिसंयोगो मानसो मल उच्यते ।
चित्तमन्तर्गतं दुष्टं तीर्थस्नानान्न शुध्यति ॥ २३ ॥

ವಿಷಯಗಳಲ್ಲಿ ಅತ್ಯಾಸಕ್ತಿಯೇ ಮಾನಸಮಲ ಎಂದು ಹೇಳುತ್ತಾರೆ. ಒಳಗೆ ದುಷ್ಟಭಾವನೆ ಯುಳ್ಳ ಮನಸ್ಸು ತೀರ್ಥಸ್ನಾನದಿಂದ ಶುದ್ಧವಾಗುವದಿಲ್ಲ. ೨೩

ಮಂದಿಗಳನ್ನೂ ಹಾಗೂ ನಮ್ಮ ತಾಯಿಯನ್ನೂ, ಹೇ ಭಾಗ್ಯಶಾಲಿಗಳೇ! ಉದ್ಧಾರ ಮಾಡಿರಿ. ಅಜ್ಞಾನದಿಂದ ಮನಸ್ಸಿನಿಂದ ಮಕ್ಕಳೊಡನೆ ಸಂಗಮಾಡಿದ ಪಾಪದಿಂದ ಹೇ ಬ್ರಾಹ್ಮಣರೇ! ಉದ್ಧಾರಮಾಡಿರಿ. ೨೪–೨೫

सहेम नरके योग्रा यातनाः कथमेव हि ।
तस्मात् भवद्भिः कर्तव्या सर्वेषां पापनिर्वृतिः ॥ २६ ॥

ನರಕದಲ್ಲಿಯ ಉಗ್ರಯಾತನೇ (ದುಃಖ) ಗಳನ್ನು ಹೇಗೆ ಸಹನ ಮಾಡೇವು? ಆದ್ದರಿಂದ ತಾವು ನಮ್ಮೆಲ್ಲರ ಪಾಪನಿವೃತ್ತಿಯಾಗುವಂತೆ ಉಪಾಯ ಮಾಡಿರಿ. ೨೬

साधूनां दर्शनात् सद्यः पापं याति सहस्रधा ॥ २७ ॥

ಸಜ್ಜನರ ದರ್ಶನದಿಂದಲೇ ಪಾಪವು ಕೂಡಲೇ ಸಾವಿರಾರು ಭಾಗವಾಗಿ ನಾಶವಾಗುತ್ತದೆ. ೨೭

॥ इति स्कांदे कृष्णामाहात्म्ये वैराग्योपवर्णनं नाम अष्टाविंशोऽध्यायः ॥

❀ ❀ ❀

## ॥ अथ एकोनत्रिंशोऽध्यायः ॥

ब्राह्मणा ऊचुः –

ಬ್ರಾಹ್ಮಣರು ಅಂದರು –

धन्या यूयं सुनिर्वृत्ताः पापस्यास्य यदा पुनः ।
जायते निष्कृतिस्तत्र मुंचध्वं मानसं मलम् ॥ १ ॥

ನೀವೆಲ್ಲರೂ ಧನ್ಯರು. ಈ ಪಾಪದಿಂದ ನಿವೃತ್ತರಾದರೆಂದ ಮೇಲೆ ಪ್ರಾಯಶ್ಚಿತ್ತವು ಉಂಟಾಗುವದು. ಮನಸ್ಸಿನಲ್ಲಿಯ ದೋಷ ಬಿಡಿರಿ. ೧

तथापि तीर्थं वक्ष्यामः संशयाविष्टचेतसाम् ।
यत्तीर्थे स्नानमात्रेण संशयात्मा विमुंचति ॥ ४ ॥

ಸಂಶಯಾವಿಷ್ಟ ಮನಸ್ಸುಳ್ಳ ನಿಮಗೆ ಒಂದು ತೀರ್ಥವನ್ನು ಹೇಳುತ್ತೇವೆ. ಯಾವ ತೀರ್ಥದಲ್ಲಿ ಸ್ನಾನಮಾತ್ರದಿಂದ ಸಂಶಯಾತ್ಮನು ವಿಮುಕ್ತನಾಗುತ್ತಾನೆ. ೪

कृष्णावेण्यां महत्तीर्थं याम्यां कोपेश्वरादनु ।
प्रभासतीर्थसंज्ञं तु तत् प्रयच्छन्तुमाचिरम् ॥ ५ ॥

ಕೋಪೇಶ್ವರನ ದಕ್ಷಿಣ ಭಾಗದಲ್ಲಿ ಕೃಷ್ಣವೇಣಿಯಲ್ಲಿ ಪ್ರಭಾಸ ಎಂಬ ತೀರ್ಥವಿದೆ. ಅಲ್ಲಿಗೆ ತಡಮಾಡದೆ ಹೋಗಿರಿ. ೫

स्नानमात्रेण शुद्धिः स्यात् कोपेशस्य च दर्शनात् ।
प्रणिपत्य च तान् तेपि शशंसुः भक्तिपूर्वकम् ॥ ६ ॥

ಸ್ನಾನಮಾತ್ರದಿಂದ ಹಾಗೂ ಕೋಪೇಶನ ದರ್ಶನದಿಂದ ಶುದ್ಧಿಯಾಗುವದು. ಎಂದು ಹೇಳಲು ಅವರೆಲ್ಲರೂ ಭಕ್ತಿಪೂರ್ವಕವಾಗಿ ನಮಿಸಿ ಅವರನ್ನು ಹೊಗಳಿದರು. ೬

कथमुग्राद्धि नः पापात् निष्कृतिः वदताऽचिरम् ।

ब्राह्मणा ऊचुः –

अश्रद्दधानः पापात्मा नास्तिकोऽछिन्नसंशयः ॥ ७ ॥

ಹೇಗೆ ಈ ಮಹಾಪಾಪವು ಪ್ರಾಯಶ್ಚಿತ್ತದಿಂದ ಮುಕ್ತವಾಗುವದು. ಬೇಗನೇ ಹೇಳಿರಿ.

**ಬ್ರಾಹ್ಮಣರು ಅಂದರು**

ವಿಶ್ವಾಸ ಇಲ್ಲದವನು ಪಾಪಿಷ್ಠನು, ನಾಸ್ತಿಕನು, ಸಂದೇಹಹೋಗದವನು, ೭

ಹೇತುಕನು ಈ ಐದು ಮಂದಿ ತೀರ್ಥಫಲಭಾಗಿಗಳಾಗುವದಿಲ್ಲ. ಹಿಂದೆ ಹೇಳಿದ ತೀರ್ಥಗಳನ್ನು ವಿಧಿಯಿಂದ ಯಾರು ಸಂಚರಿಸುವರೋ. ೮

सर्वद्वंद्वसहा धीरा मुक्तास्ते ज्ञानभागिनः।
साधूनां वचनं तथ्यं कृष्णवेणीं व्रजंतु वः ॥ ९ ॥

ಎಲ್ಲ ದ್ವಂದ್ವಗಳನ್ನು ಸಹನಮಾಡುವ ಧೀರರು ಮುಕ್ತರು ಜ್ಞಾನಭಾಗಿಗಳು. ಸಾಧುಗಳ ಮಾತು ಸತ್ಯವಾದುದು. ನೀವು ಕೃಷ್ಣವೇಣಿಗೆ ಹೋಗಿರಿ. ೯

यत्र चेतः पवित्रं स्यात् संशयाद्दुःसहादपि।
श्रुत्वेत्थं ते समालोच्य गमनायोपचक्रिरे ॥ १० ॥

ನಿಮ್ಮ ಮನಸ್ಸು ದುಃಸಹವಾದ ಸಂಶಯದಿಂದಲೂ ಪವಿತ್ರವಾಗುವದು. ಹೀಗೆ ಕೇಳಿ ಅವರೆಲ್ಲರೂ ಯೋಚಿಸಿ ಹೊರಡಲು ಉದ್ಯೋಗ ಮಾಡಿದರು. ೧೦

ब्राह्मणास्ते चतुर्भ्यश्च तिलान् दद्युः प्रयत्नतः।
ऊचुस्तेभ्यः कृष्णवेण्यां शुक्ला स्युर्नयतत्पराः ॥ ११ ॥

ಆಗ ಆ ಬ್ರಾಹ್ಮಣರು ಆ ನಾಲ್ಕೂ ಮಂದಿಗೂ ಕರೇ ಎಳ್ಳು ಕೊಟ್ಟು ಹೇಳಿದರು. ಹೇ ನಯಶೀಲರೇ! ಇವನ್ನು ಪ್ರಯತ್ನಪುರಸ್ಸರವಾಗಿ ಇಟ್ಟುಕೊಳ್ಳಿರಿ. ಕೃಷ್ಣವೇಣಿಯಲ್ಲಿ ಸ್ನಾನ ಮಾಡುವುದರಿಂದ ಇವು ಬೆಳ್ಳಗಾಗುತ್ತವೆ. ೧೧

तदा जानीथ सकलं पापं युष्मद्विनिर्गतम्।
तथास्त्विति विनिष्क्रांताः कोपेशक्षेत्रगामिनः ॥ १२ ॥

ಆಗ ನೀವು ನಿಮ್ಮ ಎಲ್ಲ ಪಾಪವು ಹೊರಟು ಹೋಗಿದೆ ಎಂದು ತಿಳಿಯಿರಿ. ಹಾಗೇ ಆಗಲಿ ಎಂದು ಅವರು ಕೋಪೇಶ ಕ್ಷೇತ್ರಕ್ಕಾಗಿ ಹೊರಟರು. ೧೨

निमज्य मार्गतीर्थेषु प्रसिद्धेषु समातृकाः।
तीर्थयात्रविधानेन प्रभासं तीर्थमागमन् ॥ १३ ॥

ಪ್ರಸಿದ್ಧವಾದ ಮಾರ್ಗಮಧ್ಯದಲ್ಲಿ ಸಿಗುವ ತೀರ್ಥಗಳಲ್ಲಿ ತಾಯಿಯೊಡನೆ

ಈ ತೀರ್ಥವು ಶುಕ್ಲತೀರ್ಥ ಎಂದು ಹೆಸರಾಯಿತು. ೧೫

शांतैः तपस्विभिर्दांतैः कृतं कोपेशयाम्यतः ।
संपूज्य देवं सद्भक्त्या विमानं सूर्यसन्निभम् ॥ १६ ॥

ಕೋಪೇಶನ ದಕ್ಷಿಣ ಭಾಗಕ್ಕೆ ಶಾಂತರೂ, ಇಂದ್ರಿಯ ನಿಗ್ರಹ ಉಳ್ಳವರೂ ಆದರು. ದೇವನನ್ನು ಒಳ್ಳೇ ಭಕ್ತಿಯಿಂದ ಪೂಜಿಸಿ ಸೂರ್ಯ ಸದೃಶವಾದ ವಿಮಾನವನ್ನು, ೧೬

देवदूतैः समानीतं गृहीत्वा तान् समभ्ययुः ।
तन्मात्रापि च तत्रैव गतिराप्ता सुदुर्लभा ॥ १७ ॥

ದೇವದೂತರಿಂದ ತರಲ್ಪಟ್ಟದ್ದನ್ನು ನೋಡಿದರು. ಅವರ ತಾಯಿಯೂ ಕೂಡ ಅಲ್ಲಿ ದುರ್ಲಭವಾದ ಗತಿಯನ್ನು ಹೊಂದಿದಳು. ೧೭

पुत्रैः सह विमानेन प्राप्ता लोकं सुदुर्लभम् ।
शुक्लतीर्थमिति ख्यातं कृष्णावेण्यां मुने श्रुणु ॥ १८ ॥

ಮಕ್ಕಳಿಂದ ಸಮೇತಳಾಗಿ ವಿಮಾನದಿಂದ ದುರ್ಲಭವಾದ ದೇವಲೋಕವನ್ನು ಪಡೆದಳು. ಆದ್ದರಿಂದ, ಎಲೈ ಮುನಿಯೇ! ಕೃಷ್ಣವೇಣಿಯಲ್ಲಿ ಈ ತೀರ್ಥವು ಶುಕ್ಲತೀರ್ಥವೆಂದು ಪ್ರಖ್ಯಾತವಾಯಿತು. ಕೇಳು. ೧೮

कृष्णाभिवृद्धिः मध्याह्ने सदा भवति यत्र तत् ।
यदा तु मुनयः सर्वे मध्याह्ने समुपस्थिते ॥ १९ ॥

ಮಧ್ಯಾಹ್ನವಾದಾಗ ಯಾವಾಗ ಮುನಿಗಳು ಬರುವರೋ, ಆಗ ಕೃಷ್ಣಾಜಲವು ಯಾವಾಗಲೂ ಅಭಿವೃದ್ಧವಾಗುವದು. ೧೯

गंगा गोदावरी तापी यमुना च सरस्वती ।
पुष्कराद्यानि तीर्थानि कृष्णां द्रष्टुं सदैव हि ॥ २० ॥

ಗಂಗಾ, ಗೋದಾವರೀ, ತಾಪೀ, ಯಮುನಾ, ಸರಸ್ವತೀ, ಪುಷ್ಕರವೇ ಮೊದಲಾದ ಎಲ್ಲ ತೀರ್ಥಗಳು ಕೃಷ್ಣಾಳನ್ನು ನೋಡಬೇಕೆಂದು ಯಾವಾಗಲೂ, ೨೦

धन्यास्ते ब्राह्मणाः सन्तो ये कृष्णातीरवासिनः ।
आयान्ति सर्वतीर्थानि गंगादीनि जगत्त्रयात् ॥ २२ ॥

ಕೃಷ್ಣಾತೀರದಲ್ಲಿರುವ ಸಜ್ಜನ ಬ್ರಾಹ್ಮಣರು ಧನ್ಯರು. ಮೂರು ಜಗತ್ತಿನಲ್ಲಿರುವ ಗಂಗಾದಿ ತೀರ್ಥಗಳು ಅಲ್ಲಿ ಬರುತ್ತವೆ. ೨೨

कृष्णवेणीं पापनुदां मध्याह्ने शुक्लतीर्थके ।
कदाचित् कृष्णवेण्यां यः शुक्लतीर्थे च दैवतैः ॥ २३ ॥

ಪಾಪ ಕಳೆಯುವ ಕೃಷ್ಣಾನದಿಗೆ ಮಧ್ಯಾಹ್ನದಲ್ಲಿ ಶುಕ್ಲತೀರ್ಥದಲ್ಲಿ ಎಂದಾದರೂ ಕೃಷ್ಣವೇಣಿಯಲ್ಲಿ, ದೇವತೆಗಳಿಂದ ಸಹಿತರಾಗಿ ೨೩

मध्याह्ने स्नाति स ब्रह्महत्यायाः मुच्यते क्षणात् ।
इति तद्वाक्यमाकर्ण्य याज्ञवल्क्यो महामुनिः ॥ २४ ॥

ಮಧ್ಯಾಹ್ನದಲ್ಲಿ ಸ್ನಾನಮಾಡುವನೋ, ಅವನು ಬ್ರಹ್ಮಹತ್ಯೆಯಿಂದ ಕ್ಷಣಾರ್ಧದಲ್ಲಿ ಮುಕ್ತನಾಗುವನು. ಹೀಗೆ ಅವರ ಮಾತು ಕೇಳಿ ಮಹಾಮುನಿಯಾದ ಯಾಜ್ಞವಲ್ಕ್ಯನು, ೨೪

शुक्लतीर्थे तदा स्नात्वा व्यासेन सह सुव्रतः ।
द्रष्टुं कोपेश्वरं लिंगं सर्वपापप्रणाशनम् ॥ २५ ॥

ವ್ಯಾಸರಿಂದ ಕೂಡಿ ಶುಕ್ಲತೀರ್ಥದಲ್ಲಿ ಸ್ನಾನಮಾಡಿ ಸುವ್ರತನಾಗಿ ಎಲ್ಲ ಪಾಪವನ್ನೂ ದೂರ ಮಾಡುವ ಕೋಪೇಶ್ವರಲಿಂಗವನ್ನು ನೋಡಲು, ೨೫

स्नापयित्वा रुद्रसूक्तैः भक्त्या मंत्रैः सबीजकैः ।
गंधपुष्पैश्च धूपैश्च संतोष्य विविधैः स्तवैः ॥ २६ ॥

ಭಕ್ತಿಯಿಂದ ಬೀಜಮಂತ್ರ ಸಹಿತವಾದ ರುದ್ರಸೂಕ್ತದಿಂದ ಸ್ನಾನಮಾಡಿ ಗಂಧ, ಪುಷ್ಪ, ಧೂಪ, ದೀಪ ಇವುಗಳಿಂದ ಹಾಗೂ ಅನೇಕ ಸ್ತೋತ್ರಗಳಿಂದ ಸಂತೋಷಪಡಿಸಿ, ೨೬

कृष्णावेण्यां चंद्रतीर्थं चंद्रेश्वरसमन्वितम् ॥ २८ ॥

ವೇದವ್ಯಾಸರು ತೀರ್ಥ ಮಾಹಾತ್ಮ್ಯವನ್ನು ಅವರಿಗೆ ಹೇಳಿದರು. ಕೃಷ್ಣವೇಣಿಯಲ್ಲಿ ಚಂದ್ರೇಶ್ವರನಿಂದ ಕೂಡಿದ ಚಂದ್ರತೀರ್ಥವಿದೆ. ೨೮

चंद्रमा यत्र मुक्तोऽभूत् गुरुतल्पकृतैनसः ।
तस्माच्चंद्रेति विख्यातं तत्तीर्थं पापनाशनम् ॥ २९ ॥

ಎಲ್ಲಿ ಚಂದ್ರನು ಗುರುತಲ್ಪಗಮನ ಜನಿತ ಪಾಪದಿಂದ ಮುಕ್ತನಾದನು. ಆದ್ದರಿಂದ ಪಾಪನಾಶಕವಾದ ಆ ತೀರ್ಥವು ಚಂದ್ರತೀರ್ಥ ಎಂದು ಪ್ರಖ್ಯಾತವಾಗಿದೆ. ೨೯

कृष्णावेण्यां तदा स्नात्वा चंद्रेशं संप्रपूज्य च ।
गयाक्षेत्रं जगामाशु कर्तुं रामगयाभिधाम् ॥ ३० ॥

ಕೃಷ್ಣವೇಣಿಯಲ್ಲಿ ಸ್ನಾನಮಾಡಿ, ಚಂದ್ರೇಶ್ವರನನ್ನು ಭಕ್ತಿಯಿಂದ ಪೂಜಿಸಿ, ಗಯಾಕ್ಷೇತ್ರವನ್ನು ರಾಮಗಯಾ ಎಂದು ಮಾಡಲು ಗಯಾಕ್ಷೇತ್ರಕ್ಕೆ ಹೋದರು. ೩೦

चतुर्भिः दिवसैः सर्वं याज्ञवल्क्यो महामुनिः ।
प्रेततीर्थे ततः स्नात्वा व्यासवाक्यात् सुभक्तिमान् ॥ ३१ ॥

ಮಹಾಮುನಿಗಳಾದ ಯಾಜ್ಞವಲ್ಕ್ಯರು ನಾಲ್ಕು ದಿವಸಗಳಿಂದ ವ್ಯಾಸರ ವಾಕ್ಯದಿಂದ ಅತ್ಯಂತ ಭಕ್ತಿ ಉಳ್ಳವರಾಗಿ ಪ್ರೇತತೀರ್ಥದಲ್ಲಿ ಸ್ನಾನಮಾಡಿ (ಹೋದರು ಇತಿಪೂರ್ವೇಣಾನ್ವಯ)

॥ इति श्रीस्कंदपुराणे कृष्णामाहात्ये शुक्लतीर्थवर्णनं नाम एकोनत्रिंशोऽध्यायः ॥

❀ ❀ ❀

## ॥ त्रिंशतितमोऽध्यायः ॥

याज्ञवल्क्य उवाच –

ಯಾಜ್ಞವಲ್ಕ್ಯರು ಅಂದರು

मुने प्रेतशिला चेयं प्रेतत्वान्मोचयेत् क्षणात् ।
अधोगतिं गतान् प्रेतान् यस्यां पिंडादिपातनैः ॥ २ ॥

ಹೇ ಮುನಿಯೇ ! ಇದು ಪ್ರೇತಶಿಲೆಯು. ಅಧೋಗತಿಗೆ ಹೋದ ಪ್ರೇತಗಳನ್ನು ಯಾವುದರಲ್ಲಿ ಪಿಂಡಾದಿಗಳನ್ನು ಹಾಕಿದರೆ, ಕ್ಷಣಾರ್ಧದಲ್ಲಿ ಪ್ರೇತತ್ವದಿಂದ ಮುಕ್ತಿ ಮಾಡುವದು. ೨

अत्रार्थे कथयिष्यामि इतिहासं पुरातनम् ।
भगीरथस्य संवादं राजर्षेः ऋषिभिः सह ॥ ३ ॥

ಈ ವಿಷಯದಲ್ಲಿ ಪ್ರಾಚೀನವಾದ ಒಂದು ಇತಿಹಾಸವಿದೆ. ರಾಜರ್ಷಿಯಾದ ಭಗೀರಥನ, ಋಷಿಗಳ ಜೊತೆ ಸಂವಾದ ಅದನ್ನು ಹೇಳುವೆ. ೩

कपिलेन पुरा सर्वे सगराः भस्मसात्कृताः ।
कोपयुक्तदृशा प्रेतभावं सर्वे समागताः ॥ ४ ॥

ಹಿಂದಕ್ಕೆ ಕಪಿಲ ಋಷಿಗಳಿಂದ ಸಗರನ ೬೦ ಸಾವಿರ ಮಕ್ಕಳು ಕೋಪದೃಷ್ಟಿಯಿಂದ ಭಸ್ಮವಾಗಿ ಮಾಡಲ್ಪಟ್ಟು ಪ್ರೇತದಶೆಯನ್ನು ಹೊಂದಿದರು. ೪

तां विज्ञाय गतिं राजा पूर्वजानां भगीरथः ।
गत्वा मुनीनथोवाच गतिं तेषां विचिंतयन् ॥ ५ ॥

ಭಗೀರಥನು ಪೂರ್ವಜರಿಗಾದ ಈ ದುರ್ಗತಿಯನ್ನು ತಿಳಿದು ಅವರಿಗೆ ಸುಗತಿ ಹೇಗಾಗುವದೆಂದು ಯೋಚಿಸುತ್ತಾ ಮುನಿಗಳ ಹತ್ತಿರ ಹೋಗಿ ಅಂದನು. ೫

भगीरथ उवाच –

ಭಗೀರಥನು ಅಂದನು –

भो भो मुनिगणा यूयं सर्वज्ञा हि कृपालवः ।
अतः पृच्छाम्यहं किंचित् युष्मान्प्रति विमूढधीः ॥ ६ ॥

श्राद्धानि शतसंख्यानि दत्तान्युद्दिश्य तान्मया ।
वृषो नीलोपि निर्मुक्तः प्रेतत्वान्मुक्तिदस्तु यः ॥ ८ ॥

ಅವರ ಉದ್ದೇಶ್ಯಕವಾಗಿ ನೂರಾರು ಶ್ರಾದ್ಧಗಳನ್ನು ನಾನು ಮಾಡಿದ್ದೇನೆ. ಪ್ರೇತಭಾವದಿಂದ ಮುಕ್ತಿಕೊಡುವ ನೀಲವೃಷೋತ್ಸರ್ಗವನ್ನು ಮಾಡಿದ್ದೇನೆ. ೮

प्रेतत्वान्न भवेन्मुक्तिः तेषां अद्यापि यत्नतः ।
अतो यथा भवेत्तेषां गतिस्तद्वक्तुमर्हथ ॥ ९ ॥

ಇಷ್ಟು ಪ್ರಯತ್ನಮಾಡಿದಾಗ್ಯೂ ಇಂದಿಗೂ ಪ್ರೇತಭಾವದಿಂದ ಅವರಿಗೆ ಮುಕ್ತಿಯಾಗಿಲ್ಲ. ಆದ್ದರಿಂದ ಅವರಿಗೆ ಹೇಗೆ ಗತಿ ಎಂಬುದನ್ನು ನೀವು ಹೇಳಲು ಯೋಗ್ಯರಿದ್ದೀರಿ. ೯

मुनय ऊचुः –

ಮುನಿಗಳು ಅಂದರು :–

भगीरथ महाबुद्धे त्वं पुत्रप्रवरो यतः ।
अहो यतसि निर्मुक्तौ पितृणां पितृवत्सल ॥ १० ॥

ಹೇ ಮಹಾಬುದ್ಧಿಉಳ್ಳ ಭಗೀರಥನೇ ! ನೀನು ಪಿತೃವತ್ಸಲನು, ಅವರ ಮುಕ್ತಿಗಾಗಿ ಪ್ರಯತ್ನ ಮಾಡುತ್ತಿರುವಿ. ಇದು ಆಶ್ಚರ್ಯ. ೧೦

पुत्रः स एव विज्ञेयो यः पितॄन् तारयेद्बहून् ।
औरसोऽप्यथवाऽन्यो वा पुत्रः स्यात् कथमग्रणीः ॥ ११ ॥

ಅನೇಕ ಪಿತೃಗಳನ್ನು ದಾಟಿಸುವವನೇ ಮಗನು ಎಂದು ತಿಳಿಯಬೇಕು. ಹೊಟ್ಟೆಯಿಂದ ಹುಟ್ಟುವನಾಗಲೀ, ದತ್ತಕಮಗನಾಗಲೀ ಇಲ್ಲವಾದರೆ ಹೇಗೆ ಶ್ರೇಷ್ಠನಾದಾನು. ೧೧

यतस्त्वं श्रद्धयाऽस्माकं आदरात् परिपृच्छसि ।
वदामोऽतः सुगोप्यं ते पितृणां मुक्तिसाधनम् ॥ १२ ॥

सजलं कुंभमास्फाट्य श्राद्धं कृत्वा सपिंडकम्।
गोभूतिलहिरण्यादि शक्त्या दत्वा यथाविधि ॥ १४ ॥

ನೀರಿನಿಂದ ತುಂಬಿದ ಕೊಡವನ್ನು ಒಡೆದು ಸಪಿಂಡಶ್ರಾದ್ಧ ಮಾಡಿ ಆಕಳು, ಭೂಮಿ, ಎಳ್ಳು, ಸುವರ್ಣ ಮೊದಲಾದವುಗಳನ್ನು ವಿಧಿಯಂತೆ ಶಕ್ತಿಯಿಂದ ಕೊಟ್ಟು. ೧೪

तिलमिश्रं सक्तुपिंडं ऊर्ध्वं तत्र विनिक्षिपेत्।
ये केचन गता यत्र अग्निमंत्रविवर्जिताः ॥ १५ ॥

ಎಳ್ಳಿನಿಂದ ಕೂಡಿದ ಹಿಟ್ಟಿನ ಪಿಂಡವನ್ನು ಅಲ್ಲಿ ಮೇಲೆ ಒಗೆಯಬೇಕು. ಮಂತ್ರಾಗ್ನಿ ಮೊದಲಾದವುಗಳಿಂದ ರಹಿತರಾಗಿ ಯಾರು ಹೋಗಿದ್ದಾರೋ. ೧೫

विषोद्बंधजलादिभ्यः ते गच्छन्तु गतिं शिले।
ततो रामगयां गत्वा कृत्वा श्राद्धं सपिंडकम् ॥ १६ ॥

ವಿಷ, ಉರಲು ಹಾಕಿಕೊಳ್ಳುವದು, ನೀರಿನಲ್ಲಿ ಮುಳುಗುವದು, ಇತ್ಯಾದಿಗಳಿಂದ ಹೋಗಿದ್ದಾರೋ, ಹೇ ಶಿಲೆ! ಅವರೆಲ್ಲರೂ ಗತಿಯನ್ನು ಹೊಂದಲಿ. ಎಂದು ಪ್ರಾರ್ಥಿಸಬೇಕು ಆಮೇಲೇ ರಾಮಗಯಾಕ್ಕೆ ಹೋಗಿ ಸಪಿಂಡಶ್ರಾದ್ಧ ಮಾಡಿ, ೧೬

संतर्पयेत् पितृन् तत्र दुग्धादिभिरतंद्रितः।
तत्रागत्य कृतं कर्म राज्ञा पितृविमुक्तये ॥ १७ ॥

ಅಲ್ಲಿ ಹಾಲು ಮೊದಲಾದವುಗಳಿಂದ ಪಿತೃಗಳನ್ನು ಸಂತೃಪ್ತಿ ಪಡಿಸಬೇಕು. ರಾಜನು ಇದನ್ನು ಕೇಳಿ ಅಲ್ಲಿ ಹೋಗಿ ಪಿತೃವಿಮುಕ್ತಿಗಾಗಿ ಕರ್ಮ ಮಾಡಿದನು. ೧೭

यदुक्तं ऋषिभिः प्रीतैः तत्सर्वं श्रद्धया युतम्।
कृत्वा तान् तारयामास प्रेतत्वात् सगरान् बहून् ॥ १८ ॥

ಋಷಿಗಳು ಪ್ರೀತರಾಗಿ ಏನು ಹೇಳಿದರೋ ಅದೆಲ್ಲವನ್ನು ಶ್ರದ್ಧಾಯುಕ್ತನಾಗಿ ಮಾಡಿ ಅನೇಕ ಸಗರನ ಮಕ್ಕಳನ್ನು ಪ್ರೇತತ್ವದಿಂದ ದಾಟಿಸಿದನು. ೧೮

सेयं प्रेतशिला यत्र प्रेतत्वात् सगरात्मजाः।

न शक्यते तत्पूर्णं हि मया वक्तुं चिरादपि ॥ २० ॥

ಹೇ ಮುನಿಗಳೇ ! ಈ ಪ್ರೇತಶಿಲೆಯ ಮಾಹಾತ್ಮ್ಯ ನಿರ್ಮಲವಾದದ್ದು, ಪೂರ್ಣ ವಾಗಿ ಹೇಳಲು ಬಹುಕಾಲವಾದರೂ ನನಗೂ ಶಕ್ಯವಿಲ್ಲ. ೨೦

**स्कंद उवाच –**

**ಸ್ಕಂದನು ಅಂದನು –**

माहात्म्यमिदमाख्याय शिलायाश्च ततो मुनिः ।
चक्रे स लोकशिक्षार्थं शिलायां सकलं विधिम् ॥ २१ ॥

ಈ ಶಿಲೆಯ ಮಾಹಾತ್ಮ್ಯವನ್ನು ಹೇಳಿ ಆ ಮುನಿಗಳು ಲೋಕಶಿಕ್ಷಣಾರ್ಥವಾಗಿ ಈ ಶಿಲಾದಲ್ಲಿ ಎಲ್ಲ ವಿಧಿಯನ್ನು ಮಾಡಿದರು. ೨೧

विष्णुतीर्थे नरः स्नात्वा वेदव्यासस्तपोनिधिः ।
याज्ञवल्क्येन मुनिना गयायां पिंडपातनम् ॥ २२ ॥

ತಪೋನಿಧಿಗಳಾದ ವೇದವ್ಯಾಸರು ಯಾಜ್ಞವಲ್ಕ್ಯರೊಡನೆ ವಿಷ್ಣುತೀರ್ಥದಲ್ಲಿ ಸ್ನಾನ ಮಾಡಿ ಗಯಾದಲ್ಲಿ ಪಿಂಡ ಹಾಕಿದರು ೨೨

विष्णोः पादौ समभ्यर्च भक्त्या तत्परमानसौ ।
रामलिंगं ततो गत्वा कृष्णायाः पश्चिमे मुनी ॥ २३ ॥

ವಿಷ್ಣುವಿನ ಪಾದಗಳನ್ನು ಭಕ್ತಿಯಿಂದ ನಮಿಸಿ ತತ್ಪರ ಮನಸ್ಸುಳ್ಳ ಆ ಮುನಿಗಳು ಕೃಷ್ಣಾ ಪಶ್ಚಿಮದಲ್ಲಿರುವ ರಾಮಲಿಂಗಕ್ಕೆ ಹೋಗಿ, ೨೩

पंचामृतसुगंधाद्यैः उपचारैः पृथक् पृथक् ।
एकादशानुवाकेन संस्नाप्य कनकोदकैः ॥ २४ ॥

ಪಂಚಾಮೃತ ಸುಗಂಧಾದಿ ಉಪಚಾರಗಳಿಂದ ಪ್ರತ್ಯೇಕವಾಗಿ ಏಕಾದಶ ಅನು ವಾಕಗಳಿಂದ ಹಾಗೂ ಕನಕೋದಕಗಳಿಂದ ಸ್ನಾನ ಮಾಡಿಸಿ, ೨೪

दंडवत् प्रणिपत्याथ स्तोत्रं लिंगस्य चाकरोत् ।

ದೇವದೇವನೂ ಭರ್ಗನೂ ಮಹಾಪರಾಕ್ರಮಿಯೂ, ೨೫

चंद्रभूषणमुन्नादं रामलिंगं नतोऽस्म्यहम् ।
भूतनाथं व्योमकेशं भवभीतिविनाशनम् ॥ २६ ॥

त्रिलोचनं शिवं शान्तमीप्सितार्थफलप्रदम् ।
धूर्जटिं शाश्वतं देवं शितिकंठं शिवं प्रभुम् ॥ २७ ॥

ಚಂದ್ರಭೂಷಣನೂ, ಮಹಾನಾದ ಉಳ್ಳವನೂ ಆದ ರಾಮಲಿಂಗನನ್ನು ನಾನು ನಮಿಸುವೆ. ಭೂತನಾಥನೂ, ವ್ಯೋಮಕೇಶನೂ, ಭವಭೀತಿನಾಶಕನೂ, ಮೂರು ಕಣ್ಣು ಉಳ್ಳವನೂ, ಶಿವನೂ, ಶಾಂತನೂ, ಇಷ್ಟಾರ್ಥಫಲಗಳನ್ನು ಕೊಡುವವನೂ, ಧೂರ್ಜಟಿಯೂ, ಶಾಶ್ವತದೇವನೂ, ನೀಲಕಂಠನೂ, ಪ್ರಭುವೂ, ಶಿವನೂ. ೨೬-೨೭

फणीन्द्रभूषणं कान्तं रामलिंगं नतोस्म्यहम् ।
कालकूटधरं त्र्यक्षं गंगाधरमनेनसम् ॥ २८ ॥

ಫಣೀಂದ್ರ ಭೂಷಣನೂ, ಮನೋಹರನೂ, ಆದ ರಾಮಲಿಂಗನಿಗೆ ನಾನು ನಮಿಸುವೆ. ಕಾಲಕೂಟಧರನೂ, ಮೂರು ಕಣ್ಣು ಉಳ್ಳವನೂ, ಗಂಗಾಧರನೂ, ಪಾಪರಹಿತನೂ, ೨೮

गिरिजापतिमीशानं रामलिंगं नतोस्म्यहम् ।
वेदवेद्यं महाकायं अचिन्त्यं विदितार्थकम् ॥ २९ ॥

ಗಿರಿಜಾಪತಿಯೂ, ಈಶನೂ ಆದ ರಾಮಲಿಂಗನನ್ನು ನಾನು ನಮಿಸುವೆನು. ವೇದವೇದ್ಯನೂ ಮಹಾಕಾಯನೂ ಆದ, ಅಚಿಂತ್ಯನೂ ಎಲ್ಲ ಅರ್ಥ ತಿಳಿದವನೂ ಆದ, ೨೯

शंकरं लोकहर्तारं रामलिंगं नतोस्म्यहम् ।
कपर्दिनमुदारांगं कृष्णातीरनिवासिनम् ।
अंधकासुरहंतारं रामलिंगं नतोस्म्यहम् ॥ ३० ॥

ಲೋಕಸಂಹಾರ ಮಾಡುವ ರಾಮಲಿಂಗನನ್ನು ನಾನು ನಮಿಸುವೆ. ಕಪರ್ದಿಯೂ,

ನಮಿಸುವೆ. ೩೧

त्रैलोक्यपूजितं नित्यं सद्भक्तगतिदायकम् ।
वांछितार्थप्रदं शर्वं रामलिंगं नतोस्म्यहम् ॥ ३२ ॥

ಮೂರು ಲೋಕದಿಂದ ನಿತ್ಯಪೂಜಿತನೂ, ಸದ್ಭಕ್ತರಿಗೆ ಗತಿಪ್ರದನೂ, ಇಷ್ಟಾರ್ಥಪ್ರದನೂ, ಶಿವನೂ ಆದ ರಾಮಲಿಂಗನನ್ನು ನಮಿಸುವೆ. ೩೨

स्तुत्वैवं रामलिंगं सः वेदव्यासो महामुनिः ।
प्रांजलिः याज्ञवल्क्येन तस्थौ तूष्णीं शिवं स्मरन् ॥ ३३ ॥

ಹೀಗೆ ಮಹಾಮುನಿಗಳಾದ ವೇದವ್ಯಾಸರು ರಾಮಲಿಂಗನನ್ನು ಸ್ತೋತ್ರಮಾಡಿ ಯಾಜ್ಞವಲ್ಕ್ಯರಿಂದ ಕೂಡಿ ಕೈ ಮುಗಿದುಕೊಂಡು ಶಿವನನ್ನು ಸ್ಮರಿಸುತ್ತ ನಿಂತರು. ೩೩

प्रहस्य लिंगमध्यात्तु सुस्वरं रोमहर्षणम् ।
व्यासं च याज्ञवल्क्यं च प्रोवाचेदं तपस्विनौ ॥ ३४ ॥

ಲಿಂಗದ ಮಧ್ಯದಿಂದ ಸುಸ್ವರದಿಂದ ರೋಮಾಂಚವಾಗುವಂತೆ ನಕ್ಕು, ತಪಸ್ವಿಗಳಾದ ವ್ಯಾಸ ಯಾಜ್ಞವಲ್ಕ್ಯರನ್ನು ಕುರಿತು ಈ ಮಾತು ಹೊರಟಿತು. ೩೪

स्तोत्रेणानेन सुप्रीतो याचे तां वरमुत्तमम् ।
मद्दर्शनं महात्मानौ फलदं नात्र संशयः ॥ ३५ ॥

ಈ ಸ್ತೋತ್ರದಿಂದ ನಾನು ಸುಪ್ರೀತನಾಗಿದ್ದೇನೆ. ಉತ್ತಮ ವರ ಕೇಳಿಕೊಳ್ಳಿರಿ. ಹೇ ಮಹಾತ್ಮರೇ! ನನ್ನ ದರ್ಶನವು ಫಲಪ್ರದವಾದುದು. ಇದರಲ್ಲಿ ಸಂದೇಹವಿಲ್ಲ. ೩೫

उभावूचतुः –

ಇಬ್ಬರೂ ಅಂದರು –

रामलिंगे सदा तिष्ठ यावद्भूः नागभूषण ।
यावद्रविः स्वभक्तानां फलदोऽस्मिन् सदा भव ॥ ३६ ॥

❀ ❀ ❀

## ॥ एकत्रिंशोऽध्यायः ॥

याज्ञवल्क्य उवाच –

ಯಾಜ್ಞವಲ್ಕ್ಯನು ಅಂದನು –

किं नामकमिदं तीर्थं अमरेन्द्रनिषेवितम् ।
तत्प्रभावं वद स्वामिन् कृपया ऋषिसत्तम ॥ १ ॥

ದೇವಶ್ರೇಷ್ಠರಿಂದ ಸೇವಿತವಾದ ಈ ತೀರ್ಥಕ್ಕೆ ಏನು ಹೆಸರು ? ಸ್ವಾಮಿ, ಶ್ರೇಷ್ಠ ಋಷಿಗಳೇ ! ಕರುಣೆಯಿಂದ ಅದರ ಪ್ರಭಾವವನ್ನು ಹೇಳಿರಿ. ೧

वेदव्यास उवाच –

ವೇದವ್ಯಾಸರು ಅಂದರು –

कृष्णावेण्यां महात्मानो रुद्रतीर्थं प्रचक्षते ।
विद्यते सर्वपापघ्नं स्नानाद्दर्शनतस्तथा ॥ २ ॥

ಮಹಾತ್ಮರು ಕೃಷ್ಣವೇಣಿಯಲ್ಲಿ ರುದ್ರತೀರ್ಥವೆಂದು ಹೇಳುತ್ತಾರೆ. ಸ್ನಾನದಿಂದಲೂ ದರ್ಶನದಿಂದಲೂ ಎಲ್ಲ ಪಾಪಗಳನ್ನು ನಾಶಮಾಡುವಂತಹದಿದೆ. ೨

सन्ति लिंगान्यनन्तानि यथा लोकेषु भावतः ।
तथेदं नैव मन्तव्यं लिंगं सर्वेश्वराभिदम् ॥ ३ ॥

ಲೋಕದಲ್ಲಿ ಅನೇಕ ಲಿಂಗಗಳೂ ಅವರವರ ಭಾವದಂತಿವೆ. ಅವುಗಳಂತೆ ಇದು ಎಂದು ತಿಳಿಯಬಾರದು. ಇದಕ್ಕೆ ಸರ್ವೇಶ್ವರ ಎಂದು ಹೆಸರು. ೩

येन रुद्रेश्वरं लिंगं रुद्रपादसमन्वितम ।

ಹೇಗೆ ದೇಹದಲ್ಲಿ ಶಿರಸ್ಸೇ ಮಹತ್ತರವಾದದ್ದೋ, ಹಾಗೆ ಎಲ್ಲ ಲಿಂಗಗಳಲ್ಲಿ ರುದ್ರೇಶ್ವರಲಿಂಗವು ಮಹತ್ತರವಾದದ್ದು. ೫

रुद्रेश्वरोयममले किल पुण्यतीर्थे
नृणां श्रुतौ हि गमनं प्रसमेत्य काले ।
स्नात्वा द्विजः सहकुलः प्रसमीक्ष्य गंगां
श्रीरुद्रपादममलं सुगतिं प्रयाति ॥ ६ ॥

ನಿರ್ಮಲವಾದ ಈ ಪುಣ್ಯತೀರ್ಥದಲ್ಲಿ ರುದ್ರೇಶ್ವರನು ಇರುವನು. ಮನುಷ್ಯರ ಶ್ರವಣ ವಿಷಯನಾಗಿ ಯೋಗ್ಯಕಾಲದಲ್ಲಿ ಬ್ರಾಹ್ಮಣನು ಗಂಗೆಯಲ್ಲಿ ಸ್ನಾನಮಾಡಿ ನಿರ್ಮಲವಾದ ರುದ್ರಪಾದವನ್ನು ನೋಡಿ, ತನ್ನ ಕುಲದಿಂದ ಕೂಡಿ ಸದ್ಗತಿಯನ್ನು ಹೊಂದುತ್ತಾನೆ. ೬

कृष्णावेण्या समं तीर्थं न भूतं न भविष्यति ।
तत्रापि रुद्रतीर्थस्य महिमा केन वर्ण्यते ॥ ७ ॥

ಕೃಷ್ಣವೇಣಿಗೆ ಸಮವಾದ ತೀರ್ಥ ಹಿಂದೆ ಮುಂದೆ ಎಂದೂ ಆಗಲಾರದು. ಅದರಲ್ಲಿಯೂ ಕೂಡ ರುದ್ರತೀರ್ಥದ ಮಹಿಮೆ ವರ್ಣನಾತೀತವಾದುದು. ೭

ततोऽग्निकुंडं संवीक्ष्य वह्निपादे तु पीडितः ।
त्रिःसप्त कुलमुद्धृत्य तैः साकं पदमाप्यते ॥ ८ ॥

ಆಮೇಲೆ ಅಗ್ನಿಕುಂಡವನ್ನು ನೋಡಿ ವಹ್ನಿಪಾದದಲ್ಲಿ ಪಿಂಡಹಾಕಿ, ಇಪ್ಪತ್ತೊಂದು ಕುಲವನ್ನು ಉದ್ಧರಿಸಿ ಅವುಗಳೊಡನೆ ಒಳ್ಳೆ ಸ್ಥಾನವನ್ನು ಪಡೆಯುವನು. ೮

विष्णुपादमथालक्ष्य पिंडं दत्वाऽथ मानवः ।
तारयेद्दुर्गतिगतान् स्वपितृन् आत्मना सह ॥ ९ ॥

ಅವರ ದಕ್ಷಿಣ ದಿಕ್ಕಿನಲ್ಲಿ ರಾಮತೀರ್ಥ ಎಂದು ಹೇಳುತ್ತಾರೆ. ಇಪ್ಪತ್ತೊಂದು ಸಾರೆ ಶ್ರೇಷ್ಠ ರಾಜರನ್ನು ಸಂಹರಿಸಿ ಅವರ ರಕ್ತದಿಂದ ಪಿತೃಗಳನ್ನು ಪಂಚನದಿಯಲ್ಲಿ ತರ್ಪಣಮಾಡಿದ ಪರಶು ರಾಮನು ಸಿಟ್ಟಿನಿಂದ ಬ್ರಾಹ್ಮಣರಿಂದ ಕೂಡಿ ಕೃಷ್ಣವೇಣಿಗೆ ಹೋದನು. ೧೦

यद्ब्राह्मणशरीरेण कृतं कर्म सुगर्हितम् ।
तच्छरीरेण कर्तव्या निष्कृतिः द्विजवाक्यतः ॥ ११ ॥

ಬ್ರಾಹ್ಮಣರ ಶರೀರದಿಂದ ಅತ್ಯಂತ ನಿಂದಿತವಾದ ರಾಜಹತ್ಯಾರೂಪ ಕರ್ಮ ಮಾಡಿದ್ದೇನೆ. ಆದ್ದರಿಂದ ಬ್ರಾಹ್ಮಣರ ಹೇಳಿಕೆಯಂತೆ, ಇದೇ ಶರೀರದಿಂದ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ೧೧

एवं विचार्य मनसा भार्गवो विष्णुरच्युतः ।
तर्पणं हि करिष्यामि पितृणां मुक्तये सताम् ॥ १२ ॥

ಹೀಗೆ ಮನಸ್ಸಿನಿಂದ ವಿಚಾರಮಾಡಿ ವಿಷ್ಣುರೂಪಿಯಾದ ಭಾರ್ಗವನು ಪಿತೃಗಳ ಮುಕ್ತಿಗಾಗಿ ಸಜ್ಜನರ ತೃಪ್ತಿಯನ್ನು ಮಾಡುವೆ ಎಂದು ಯೋಚಿಸಿ, ೧೨

क्षत्रहत्या सुनिर्विण्णचेतसा भार्गवस्तदा ।
मुनीन् पप्रच्छ दोषस्य शांतिं क्षत्रवधोद्भवाम् ॥ १३ ॥

ಕ್ಷತ್ರಿಯ ಹತ್ಯೆಯಿಂದ ನಿರ್ವಿಣ್ಣವಾದ ಮನಸ್ಸುಳ್ಳ ಭಾರ್ಗವನು ಕ್ಷತ್ರಿಯವಧ ಜನಿತ ದೋಷ ಹೇಗೆ ಶಾಂತವಾಗುವದು ?ಎಂದು ಮುನಿಗಳನ್ನು ಕೇಳಿದ್ದನು. ೧೩

सुखं यास्यामि हे विप्राः तथा नः पितरोऽपि च ।
वदध्वं तीर्थवर्यं मां कृष्णवेण्यां तपस्विनः ॥ १४ ॥

ಎಲೈ ಬ್ರಾಹ್ಮಣರೇ ! ನಾನು ಹಾಗೂ ನನ್ನ ಪಿತೃಗಳು ಹೇಗೆ ಸುಖಹೊಂದೇವು ?

रामलिंगस्य पुरतः पदं तत्तारकाभिदम् ॥ १५ ॥

ಕೃಷ್ಣವೇಣಿ ತಟದಲ್ಲಿ ಪಿತೃಗಳಿಗೆ ಮುಕ್ತಿಯನ್ನು ಕೊಡುವ ರಾಮ ಗಯಾ ಎಂಬ ಕ್ಷೇತ್ರವಿದೆ. ರಾಮಲಿಂಗದ ಎದುರು ಅದಕ್ಕೆ ತಾರಕ ಎಂಬ ಹೆಸರು. ೧೫

संसारशोकसंतप्तान् तारयेत् द्विविधांस्तु या ।
यत्रागत्य सुतीर्थानि निवसन्ति सदैव हि ॥ १६ ॥

ಸಂಸಾರದ ಎರಡು ವಿಧವಾದ ಶೋಕಗಳಿಂದ ಸಂತೃಪ್ತರಾದವರನ್ನು ಅದು ದಾಟಿಸುತ್ತದೆ. ಎಲ್ಲಿ ಎಲ್ಲ ತೀರ್ಥಗಳು ಬಂದು ಯಾವಾಗಲೂ ವಾಸಿಸುತ್ತವೆ. ೧೬

क्षेत्रमाहात्म्यमत्युच्चैः पंचक्रोशात्मकं ह्रदः ।
तारकेशः स्थितो यो वै रामलिंगेति गीयते ॥ १७ ॥

ಕ್ಷೇತ್ರಮಹಿಮೆಯು ಅತ್ಯಂತ ಶ್ರೇಷ್ಠವಾದುದು. ಇದು ಹರದಾರಿ ಪರಿಮಿತ ವಾಗಿದೆ. ಅಲ್ಲಿ ತಾರಕೇಶನು ರಾಮಲಿಂಗವೆಂಬ ಹೆಸರಿನಿಂದ ವಾಚ್ಯವಾಗಿದ್ದಾನೆ. ೧೭

यत्र चासौ दशरथः वालुकापिंडमुत्तमम् ।
सीताहस्तगतं प्राप्य लेभे पदमनुत्तमम् ॥ १८ ॥

ಎಲ್ಲಿ ದಶರಥನು ಸೀತೆಯ ಕೈಯಲ್ಲಿರುವ ಉತ್ತಮ ಉಸುಕಿನ ಪಿಂಡವನ್ನು ಹೊಂದಿ, ಉತ್ತಮಸ್ಥಾನವನ್ನು ಪಡೆದನು. ೧೮

इति तद्वाक्यमाकर्ण्य भार्गवः कृष्णवेणिकाम् ।
गत्वा च मुनिभिः सर्वैः रामोऽकार्षीत्तथा विधिम् ॥ १९ ॥

ಹೀಗೆ ಅವರ ಮಾತನ್ನು ಕೇಳಿ ಭಾರ್ಗವರಾಮರು ಕೃಷ್ಣವೇಣೀನದಿಗೆ ಹೋಗಿ ಎಲ್ಲ ಮುನಿಗಳಿಂದ ಕೂಡಿಕೊಂಡು ವಿಧಿಯನ್ನು ಮಾಡಿದರು. ೧೯

पितृन् संतृप्य विधिवत् जामदग्न्यः प्रतापवान् ।
ययौ स्वधाम सहसा आनंदित विभावनः ॥ २० ॥

विचार्यचित्ते किल कृष्णवेण्याः तीरे हि गच्छध्वमतिप्रचाराः ॥ २१ ॥

ಸ್ವರ್ಗ ಮೋಕ್ಷ ಕೊಡುವ ಬೇರೆ ಕ್ಷೇತ್ರ ರಾಮಗಯೆಗಿಂತ ಹೆಚ್ಚಿನದು ಇಲ್ಲ. ಇದು ಧನ್ಯವಾದುದು. ಮನಸ್ಸಿನಲ್ಲಿ ವಿಚಾರಮಾಡಿ ಕೃಷ್ಣವೇಣಿಯ ತೀರಕ್ಕೆ ಹೋಗಿರಿ. ಮತ್ತು ಈ ವಿಷಯವನ್ನು ಅತ್ಯಂತ ಪ್ರಚಾರಮಾಡಿರಿ. ೨೧

गृहे स्मशानेऽप्यथ चान्तरिक्षे महापथे वाऽप्यथ ब्राह्मगेहे ।
मृता भजंतीह न तद्विचित्रं गयापदं मुक्तजनावकीर्णम् ॥ २२ ॥

ಗೃಹದಲ್ಲಿ, ಸ್ಮಶಾನದಲ್ಲಿ, ಅಂತರಿಕ್ಷದಲ್ಲಿ ಅಥವಾ ಮಹಾಮಾರ್ಗದಲ್ಲಿ ಅಥವಾ ಬೇರೆ ಮನೆಯಲ್ಲಿ ಮೃತರಾದವರೂ ಕೂಡ ಗಯಾಸ್ಥಾನಕ್ಕೆ ಹೋಗಿ ಮುಕ್ತರಾಗುತ್ತಾರೆ. ಮುಕ್ತ ಜನರಿಂದ ಆ ಸ್ಥಾನವು ತುಂಬಿದೆ. ಇದು ಆಶ್ಚರ್ಯಕರವಲ್ಲ. ೨೨

इति चित्ते समालोक्य याज्ञवल्क्यो महातपाः ।
व्यासश्च सुमहातेजाः तद्विधिं च प्रचक्रतुः ॥ २३ ॥

ಹೀಗೆ ಮನಸ್ಸಿನಲ್ಲಿ ಆಲೋಚಿಸಿ ಮಹಾ ತಪಸ್ವಿಯಾದ ಯಾಜ್ಞವಲ್ಕ್ಯರು, ಮಹಾ ತೇಜಸ್ವಿಯಾದ ವ್ಯಾಸರು ಆ ವಿಧಿಯನ್ನು ಮಾಡಿದರು. ೨೩

तस्यैव निकरे तीर्थं धनुःषट्कान्तरेण वै ।
विद्यते मुद्गलं नाम मुद्गलेश्वरमंभसि ॥ २४ ॥

ಅದರ ಹತ್ತಿರವೇ ಆರು ಧನುಸ್ಸಿನ ಅಂತರದಲ್ಲಿ ಮುದ್ಗಲವೆಂಬ ತೀರ್ಥವಿದೆ. ನೀರಿನಲ್ಲಿ ಮುದ್ಗಲೇಶ್ವರನಿದ್ದಾನೆ. ೨೪

यज्ञभूमिर्मुद्गलस्य भाति भूति विभूषणा ।
तत्र स्नात्वा मुनीतीर्थे मुद्गलेश्वरमंभसि ॥ २५ ॥

ಮುದ್ಗಲರ ಯಜ್ಞಭೂಮಿ ಭಸ್ಮದಿಂದ ಅಲಂಕೃತವಾದದ್ದು ಆಗಿ ವಿರಾಜಿಸುತ್ತದೆ. ಆ ಮುನಿಗಳಿಬ್ಬರು ತೀರ್ಥದಲ್ಲಿ ಸ್ನಾನ ಮಾಡಿ ಮುದ್ಗಲೇಶ್ವರನನ್ನು ನೀರಿನಲ್ಲಿ, ೨೫

दृष्ट्वा नत्वार्चयित्वा तौ ययतुः पुरतो नदीम् ।
माहात्म्यं शृण्वतां नित्यं पठतां च सुमंगलम् ॥ २६ ॥

ನೋಡಿ, ನಮಿ . ಪೂಜಿಸಿ ಮು [illegible] . ಇವುಗಳ ಮಾಹಾತ್ .

अग्रे किं दृश्यते व्यास तीर्थं तन्महदुत्तमम्।
माहात्म्यं संगमस्यास्य कृष्णावेण्याः कथां वद ॥ १ ॥

ಹೇ ವ್ಯಾಸರೇ !ಎದುರಿಗೆ ಯಾವ ಮಹಾತೀರ್ಥವು ಕಾಣುವದು ?ಕೃಷ್ಣವೇಣೀಯ ಸಂಗಮದ ಕಥೆಯನ್ನು ಹೇಳಿರಿ. ೧

व्यास उवाच –

ವ್ಯಾಸರು ಅಂದರು –

याज्ञवल्क्य निबोधेदं वेदनद्याश्च संगमः।
संगमेश्वरलिंगं तु दर्शनात् पापनाशनम् ॥ २ ॥

ಯಾಜ್ಞವಲ್ಕ್ಯನೇ ! ಇದು ವೇದನದಿಯ ಸಂಗಮವೆಂದು ತಿಳಿ. ಸಂಗಮೇಶ್ವರಲಿಂಗವು ದರ್ಶನದಿಂದಲೇ ಪಾಪವನ್ನು ನಾಶ ಮಾಡುವದು. ೨

संगमे तु नरः स्नात्वा यः पश्येत् संगमेश्वरम्।
सर्वपापविनिर्मुक्तो गतिं प्राप्नोति दुर्लभम् ॥ ३ ॥

ಯಾವ ಮನುಷ್ಯನು ಸಂಗಮದಲ್ಲಿ ಸ್ನಾನ ಮಾಡಿ ಸಂಗಮೇಶ್ವರನನ್ನು ನೋಡುವನೋ ಅವನು ಎಲ್ಲ ಪಾಪರಹಿತನಾಗಿ ದುರ್ಲಭವಾದ ಗತಿಯನ್ನು ಹೊಂದುವನು. ೩

वेदेन साक्षाद्यदि संगता स्यात् सा चैव रम्या दुरितापहन्त्री।
श्रुतिस्वरूपा तिसृभिः शुचिः स्यात् किं वर्णनीयो विधिविष्णुरुद्रैः ॥ ४ ॥

ಅವಳು ಮೊದಲೇ ಪಾಪನಾಶಕಳು ಹಾಗೂ ರಮಣೀಯಳು, ಸಾಕ್ಷಾತ್ ವೇದದಂತಿರುವ ವದನದಿಂದ ಕೂಡಿಕೊಂಡಿದ್ದಾದರೆ ಕೇಳುವದೇನು ? ಶ್ರುತಿಸ್ವರೂಪಳು ವಿಧಿ ವಿಷ್ಣುರುದ್ರರಂತಿರುವ ಮೂರರಿಂದ ಪರಮಪವಿತ್ರವೆಂದು ಏನು ವರ್ಣಿಸುವದು. ೪

वेदगंगा शक्तिरूपा कृष्णा तु शिवरूपिणी।
उभयोर्यत्र योगः स्यात् संगमो ह्यतिपुण्यदः ॥ ५ ॥

वेदगंगा कृष्णवेण्योः संगमो ह्यतिपुण्यदः ।
तत्साधयित्वा यः स्नायात् नदीमध्ये सुधीर्नरः ॥ ७ ॥

देवान् पश्यत्यसौ सर्वान् मनोऽभीष्टवरप्रदान् ।
वेदनद्याः संगमस्तु सर्वजन्माघनाशनः ॥ ८ ॥

ವೇದಗಂಗಾ ಕೃಷ್ಣಾವೇಣೀ ಸಂಗಮವು ಅತಿ ಪುಣ್ಯಕರವಾದುದು. ಅದನ್ನು ಸಾಧಿಸಿ ಜ್ಞಾನಿಯಾದ ಮನುಷ್ಯನು ನದಿ ಮಧ್ಯದಲ್ಲಿ ಸ್ನಾನ ಮಾಡುವನೋ ಅವನು ಮನೋಭೀಷ್ಟ ವರಪ್ರದರಾದ ದೇವತೆಗಳನ್ನು ನೋಡುವನು. ವೇದನದಿಯ ಸಂಗಮವು ಎಲ್ಲ ಜನ್ಮದ ಪಾಪಗಳನ್ನು ದೂರಮಾಡುವದು. ೭–೮

प्रायश्चित्तार्थिनां तद्धि परमं शरणं विदुः ।
स्नात्वा तयोः संगमे तु गायत्रीं लक्षसंख्यया ॥ ९ ॥

ಪ್ರಾಯಶ್ಚಿತ್ತವನ್ನು ಬಯಸುವವರಿಗೆ ಅದು ಶ್ರೇಷ್ಠ ಆಶ್ರಯ ಎಂದು ತಿಳಿಯುವರು. ನದಿಗಳ ಸಂಗಮದಲ್ಲಿ ಸ್ನಾನಮಾಡಿ ಲಕ್ಷಗಾಯತ್ರೀ ಜಪಮಾಡುವವನು, ೯

जपन् कामानवाप्नोति मुक्तिं निष्कामतो द्विजः ।
अमायां सोमवारेण समुद्रस्नानतो भवेत् ॥ १० ॥

ಇಚ್ಛೆಗಳನ್ನು ಪಡೆಯುವನು, ನಿಷ್ಕಾಮನಿದ್ದರೆ ಮುಕ್ತಿಯನ್ನು ಪಡೆಯುವನು. ಅಮಾವಾಸ್ಯಾ ಸೋಮವಾರದಲ್ಲಿ ಸಮುದ್ರಸ್ನಾನದಿಂದ ಏನು ಪುಣ್ಯ ಬರುವದೋ. ೧೦

पुण्यं तदेव जानीहि उभयोः संगमे महत् ।
पंचक्रोशं पावनं क्षेत्रमेतत् सर्वाघौघच्छेदनं सज्जनानाम् ।
नानातीर्थाक्रान्तमर्थप्रकाशं तीर्थाग्र्यं वै कल्पकल्पांतरस्थम् ॥ ११ ॥

ಎರಡು ನದಿಗಳ ಸಂಗಮದಲ್ಲಿ ಆ ಮಹಾಪುಣ್ಯವಿದೆ ಎಂದು ತಿಳಿ. ಪಂಚಕ್ರೋಶ ಇದು ಪವಿತ್ರಕ್ಷೇತ್ರ. ಸಜ್ಜನರ ಎಲ್ಲ ಪಾಪಸಮುದಾಯವನ್ನು ನಾಶಮಾಡುವದು. ನಾನಾತೀರ್ಥ ಸಮುದಾಯಗಳಿಂದ ಕೂಡಿ ಅರ್ಥಪ್ರಕಾಶಕವಾದ ಕಲ್ಪ ಕಲ್ಪಾಂತರ

ವರ್ಣಿಸಬೇಕು ? ಜಗತ್ತಿಗೆ ಆಧಾರ. ಎಲ್ಲ ಜಗತ್ತಿನ ಮೂಲ ಪಾಪಗಳನ್ನು ನಾಶಮಾಡುವದು. ೧೨

पंचक्रोशे यत्र बाधा न भूयात् याम्यानां वा पापिनां वेतरेषाम् ।
नायं लोकः पामरः किन्तु नेयात् क्षेत्रं यत्तत् साधुतद्ब्रह्मबीजम् ॥ १३ ॥

ಪಂಚಕ್ರೋಶದಲ್ಲಿ ಯಮದೂತರ ಹಾಗೂ ಇತರ ಪಾಪಿಗಳ ಬಾಧೆಯಾಗುವದಿಲ್ಲ. ಈ ಜನರು ಪಾಮರರು. ಏನು ತೆಗೆದುಕೊಂಡು ಹೋಗುವರು ? ಈ ಕ್ಷೇತ್ರವು ಉತ್ತಮ ಬ್ರಹ್ಮಜ್ಞಾನ ಸಾಧನವು. ೧೩

एकभुक्तेन नक्तेन तथैवायाचितेन च ।
क्षेत्रं सतां मंडलं यत् दृष्ट्वा मुच्येत पातकैः ।
गवां कोटिप्रदानाच्च महीदानाद्यदाप्यते ॥ १४ ॥

ಏಕ ಭೋಜನದಿಂದಾಗಲೀ, ರಾತ್ರಿ ಭೋಜನದಿಂದಾಗಲೀ, ಅಯಾಚಿತ ವ್ರತದಿಂದಾಗಲೀ, ಸಜ್ಜನ ಸಮುದಾಯಾಶ್ರಯವಾದ ಈ ಕ್ಷೇತ್ರವನ್ನು ನೋಡಿ ಪಾಪಗಳಿಂದ ಮುಕ್ತನಾಗುವನು ಕೋಟಿ ಗೋದಾನಮಾಡಿದ ಹಾಗೂ ಪೃಥ್ವೀದಾನ ಮಾಡಿದ ಪುಣ್ಯವು. ೧೪

तल्लभ्यते स्नानकृतो ब्राह्मणानुज्ञयाऽत्र तु ।
भूमिप्रदाक्षिणाक्लेशैः यत्फलं लभते नरः.
तत्कोटिगुणितं पुण्यं तीर्थक्षेत्रनिषेवणात् ॥ १५ ॥

ಬ್ರಾಹ್ಮಣರ ಅನುಜ್ಞೆಯಿಂದ ಸ್ನಾನ ಮಾಡುವವನಿಗೆ ಇಲ್ಲಿ ಆ ಪುಣ್ಯವು ದೊರೆಯುವದು. ಭೂಮಿ ಪ್ರದಕ್ಷಿಣಾ ಕ್ಲೇಶಗಳಿಂದ ಯಾವ ಪುಣ್ಯವನ್ನು ಮನುಷ್ಯನು ಪಡೆಯುವನೋ ಅದಕ್ಕೂ ಕೋಟಿಪಟ್ಟು ಪುಣ್ಯವು ತೀರ್ಥಕ್ಷೇತ್ರ ಸೇವನೆಯಿಂದ ದೊರೆಯುವದು. ೧೫

॥ इति श्रीस्कन्दपुराणे कृष्णामाहात्म्ये वेदनदीसंगमेश्वरवर्णनं नाम
द्वात्रिंशोऽध्यायः ॥



महापापानि नश्यन्ति अरिष्टानि व्रजंति च ।
ब्रूहि व्यास पुमान्मुक्तः संगमस्यातिसेवनात् ॥ १ ॥

ಮಹಾಪಾಪಗಳು ನಾಶವಾಗುತ್ತವೆ. ಅರಿಷ್ಟಗಳು ದೂರವಾಗುತ್ತವೆ. ಹೇ ವ್ಯಾಸರೇ ! ಸಂಗಮದ ಅತ್ಯಂತ ಸೇವನೆಯಿಂದ ಯಾವ ಮನುಷ್ಯನು ಮುಕ್ತನಾಗಿದ್ದಾನೆ ? ಹೇಳಿರಿ. ೧

व्यास उवाच –

ವ್ಯಾಸರು ಅಂದರು –

साधु पृष्टं याज्ञवल्क्य द्विजानां तरणाय च ।
माहात्म्यं पुण्यजनकं निबोध्यं वेदकृष्णयोः ॥ २ ॥

ಹೇ ಯಾಜ್ಞವಲ್ಕ್ಯರೆ ! ಬ್ರಾಹ್ಮಣರ ಉದ್ಧಾರಕ್ಕಾಗಿ ಒಳ್ಳೆ ಪ್ರಶ್ನೆ ಮಾಡಿದಿರಿ. ವೇದಕೃಷ್ಣಾಗಳ ಮಾಹಾತ್ಮ್ಯವು ಪುಣ್ಯಜನಕವೆಂದು ತಿಳಿಯಬೇಕು. ೨

जीवन् स्नात्वा पुमान् भक्त्या कृष्णावेण्यश्च संगमे ।
वेदनद्याः पुण्यकृच्च मुच्यते सर्वपातकैः ॥ ३ ॥

ವೇದನದಿ ಮತ್ತು ಕೃಷ್ಣಾ ಸಂಗಮದಲ್ಲಿ ಭಕ್ತಿಯಿಂದ ಬದುಕಿದಾಗ ಸ್ನಾನಮಾಡಿದವನು ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ. ೩

अस्थिमात्रं पतेद्यस्य मुक्तः स भवति क्षणात् ।
सौरभे नगरे कश्चित् आसीज्जिह्मो द्विजाधमः ॥ ४ ॥

ಯಾವನ ಅಸ್ಥಿ ಬೀಳುವದೋ ಅವನು ಅದೇ ಕ್ಷಣದಲ್ಲಿ ಮುಕ್ತನಾಗುವನು. ಸೌರಭ ಎಂಬ ನಗರದಲ್ಲಿ ಒಬ್ಬ ಕಪಟಿಯಾದ ಅಧಮ ಬ್ರಾಹ್ಮಣನಿದ್ದನು. ೪

नानापापेषु संसक्तः परनिन्दासु तत्परः ।
ब्रह्महा पिशुनः क्रूरः सभायां कूटसाक्षिकः ॥ ५ ॥

ಯುಕ್ತನಾಗಿ ಅನುಭವಿಸುತ್ತ ಆಮೇಲೆ ತುಡುಗರಿಂದ ಕೂಡಿ ಬೇರೆಯವರ ಹಣವನ್ನು ಅಪಹರಿಸಿದನು. ೬

पापद्रव्यं निजगृहे पूरितं बहुवत्सरम् ।
गिरिद्रोण्यां वसन् मूढः पान्थानां हननोद्यतः ॥ ७ ॥

ಪಾಪದಿಂದ ಸಂಪಾದಿತ ಹಣವನ್ನು ಅನೇಕ ವರ್ಷಗಳವರೆಗೆ ತನ್ನ ಮನೆಯಲ್ಲಿ ತುಂಬಿದನು. ಪರ್ವತ ಪ್ರಾಂತಭಾಗದಲ್ಲಿ ಇರುತ್ತಿದ್ದನು. ಆ ಮೂಢನು ಹಾದಿಹೋಕರ ಸಂಹಾರದಲ್ಲಿ ಉದ್ಯುಕ್ತನಾದನು. ೭

ब्रह्महत्यादिकं तेन कृतं निर्घृणचेतसा ।
एवं बहुदिनं कृत्वा दैवान्मृतिमवाप सः ॥ ८ ॥

ನಿರ್ದಯ ಮನಸ್ಸುಳ್ಳ ಆವನು ಬ್ರಹ್ಮಹತ್ಯಾದಿಗಳನ್ನು ಮಾಡಿದನು. ಹೀಗೆ ಬಹುದಿವಸ ಮಾಡಿ ದೈವದಿಂದ ಮರಣ ಹೊಂದಿದನು. ೮

तत्पुत्रो ह्यतितेजस्वी ब्राह्मणो वेदपारगः ।
ज्ञानवान् शिवशर्मेति निर्विण्णः पितृकारणात् ॥ ९ ॥

ಆವನ ಮಗನು ತೇಜಸ್ವಿಯಾದ ಬ್ರಾಹ್ಮಣ ವೇದಪಾರಂಗತನು, ಜ್ಞಾನ ಉಳ್ಳವನು, ಶಿವಶರ್ಮ ಎಂಬುವನು. ತಂದೆಯ ಕಾರಣದಿಂದ ನಿರ್ವಿಣ್ಣನಾದನು. ೯

ब्राह्मणानुज्ञया कर्म वत्सरान्तं समाप्य सः ।
गृहीत्वास्थीनि सद्भक्त्या पित्रोर्गतिमपेक्षयन् ॥ १० ॥

ಬ್ರಾಹ್ಮಣರ ಆಜ್ಞೆಯ ಮೇರೆಗೆ ವರ್ಷದವರೆಗೆ ಕರ್ಮ ಮುಗಿಸಿ ತಂದೆ ತಾಯಿಗಳ ಗತಿಯನ್ನು ಬಯಸಿ ಭಕ್ತಿಯಿಂದ ಅಸ್ಥಿಯನ್ನು ಸ್ವೀಕರಿಸಿ, ೧೦

काशीं गन्तुं यदोद्युक्तः तदा विघ्नो महानभूत् ।
धनपुत्रादि सगृहं विनष्टं प्रतिवत्सरम् ॥ ११ ॥

ಕಾಶಿಗೆ ಹೋಗಬೇಕೆಂದು ಯಾವಾಗ ಹೊರಟನೋ, ಆಗ ಬಹಳ ವಿಘ್ನ ಉಂಟಾಯಿತು. ಪ್ರತಿವರ್ಷ ಹಣ, ಮಕ್ಕಳು, ಮನೆ ಇವು ನಷ್ಟವಾದವು. ೧೧

ತಂದೆ ತಾಯಿಗಳ ಆ ವ್ಯಾಪಾರವನ್ನು ಧಿಕ್ಕಾರಮಾಡಿ ಭಯದಿಂದ ಹೊರಟನು. ಅನೇಕ ಪರ್ವತಗಳನ್ನು ದಾಟಿ ಕೃಷ್ಣಾತೀರಕ್ಕೆ ಬಂದನು. ೧೩

अस्थिग्रंथिं समासाद्य कूले स्नातुं सभार्यकः ।
यावद्गतः संगमे तु प्रब्रुवन् मंत्रमुच्चकैः ॥ १४ ॥

ಅಸ್ಥಿಗಂಧಿಯನ್ನು ದಂಡೆಯ ಮೇಲೆ ಇಟ್ಟು ಹೆಂಡತಿಯಿಂದ ಕೂಡಿಕೊಂಡು ಸ್ನಾನಮಾಡಲು ಸಂಗಮಕ್ಕೆ ಹೋದನು. ದೊಡ್ಡ ಧ್ವನಿಯಿಂದ ಮಂತ್ರ ಹೇಳುತ್ತ ಇರುವಾಗ, ೧೪

तावद्ग्रन्थिः जंबुकेन चालितो भक्षणेच्छया ।
तस्मात् कूला तदा दैवात् अस्थि तीर्थे पपात तत् ॥ १५ ॥

ಅಷ್ಟರಲ್ಲಿ ಒಂದು ನರಿಯು, ತಿನ್ನಬೇಕೆಂಬ ಇಚ್ಛೆಯಿಂದ ಆ ಗಂಟನ್ನು ಅಲುಗಾಡಿಸಿತು. ಆ ಅಸ್ಥಿದಂಡೆಯಿಂದ ದೈವಯೋಗದಿಂದ ತೀರ್ಥದಲ್ಲಿ ಬಿತ್ತು. ೧೫

ह्रदे सत्संगमे मग्नं अलब्ध्वा दुःखितोऽभवत् ।
किमेतदिति संचित्य स स्वभार्यां ततोऽब्रवीत् ॥ १६ ॥

ಸಂಗಮದ ಮಡುವಿನಲ್ಲಿ ಮುಳುಗಿದ ಅಸ್ಥಿಯನ್ನು ಹುಡುಕಿದರೂ ಸಿಗದೆ ಅವನು ದುಃಖಿತನಾದನು. ಇದೇನೆಂದು ಯೋಚಿಸಿ ಅವನು ತನ್ನ ಹೆಂಡತಿಗೆ ಅಂದನು. ೧೬

धिक् पुत्रस्त्वीदृशाः पित्रोः गतिमिच्छुः विपर्ययात् ।
तूष्णीं तस्थौ तदा भार्या प्रोवाचेदं पतिं तदा ॥ १७ ॥

ತಂದೆ ತಾಯಿಗಳಿಗೆ ಗತಿಯನ್ನು ಇಚ್ಛಿಸುವ ಮಗನಾದ ನನಗೆ ಈ ರೀತಿ ವಿಪರೀತ ವಾಯಿತಲ್ಲ. ಧಿಃಕ್ಕಾರವಿರಲಿ. ಹೀಗೆ ಹೇಳುತ್ತ ಸುಮ್ಮನೆ ನಿಂತನು. ಆಗ ಆ ಹೆಂಡತಿಯು ಪತಿಯನ್ನು ಕುರಿತು ಅಂದಳು. ೧೭

या गतिः यस्य वै स्वामिन् कर्मरूपा दुरत्यया ।
देशतो दैवतः कालकर्मद्रव्यादिभिः भवेत् ॥ १८ ॥

ಸ್ವಾಮೀ, ಯಾವ ಗತಿಯು ಯಾರಿಗೋ,

तावद्दिव्यं विमानं तत् घंटाघोषसमन्वितम् ।
दिव्यैः दूतैः समानीतं तत्पित्रोः नयनाय वै ॥ २० ॥

ದಿವ್ಯವಾದ ಗಂಟೆಗಳ ಶಬ್ದದಿಂದ ಕೂಡಿದ ವಿಮಾನವು ಆವರ ತಂದೆ ತಾಯಿಗಳನ್ನು ಒಯ್ಯಲು ದೇವದೂತದಿಂದ ತರಲ್ಪಟ್ಟಿತು. ೨೦

तन्मातापितरौ तीर्थात् दिव्यदेहौ बभूवतुः ।
स्त्रीपुंसोः पश्यतोर्दूतौ विमाने चोपवेश्य तौ ॥ २१ ॥

ಆ ತೀರ್ಥದಿಂದ ಆವನ ತಾಯಿ ತಂದೆಗಳು ದಿವ್ಯ ದೆಹ ಉಳ್ಳವರಾದರು. ಆ ಸ್ತ್ರೀಪುರುಷರು ನೋಡುತ್ತಿದ್ದಂತೆ ವಿಮಾನದಲ್ಲಿ ದೇವದೂತರಿಂದ ಕೂಡಿಸಲ್ಪಟ್ಟು, ೨೧

नीतौ परपदं शीघ्रं यत्र देवो विमुक्तिदः ।
समभाषन्त तं दूताः संशयं मा कुरु द्विज ॥ २२ ॥

ಮೋಕ್ಷಕೊಡುವ ದೇವನಿರುವ ಪರಪದಕ್ಕೆ ಶೀಘ್ರದಲ್ಲಿ ಒಯ್ಯಲ್ಪಟ್ಟರು. ದೂತರು ಅವನಿಗೆ ಅಂದರು. ಹೇ ಬ್ರಾಹ್ಮಣನೇ !ಸಂದೇಹ ಮಾಡಬೇಡ. ೨೨

मा कुरुष्व गतौ पित्रोः संशयं पापिनोः कथम् ।
भागीरथी महागंगा यमुना चाघहारिणी ॥ २३ ॥

ಪಾಪಿಗಳಾದ ತಂದೆ ತಾಯಿಗಳಿಗೆ ಸದ್ಗತಿ ಹೇಗಾಯಿತೆಂದು ಸಂಶಯಬೇಡ ಭಾಗೀರಥಿ, ಮಹಾಗಂಗಾ, ಪಾಪಹರಳಾದ ಯಮುನೆ, ೨೩

सरस्वती तथा ब्रह्मन् तारयेत् सकलं जगत् ।
तथैव कृष्णा पापघ्नी मुक्तिदा स्पर्शमात्रतः ॥ २४ ॥

ಸರಸ್ವತೀ, ಇವರು ಎಲ್ಲ ಜಗತ್ತನ್ನು ಪಾಪಮುಕ್ತವನ್ನಾಗಿ ಮಾಡುವರು. ಹಾಗೆಯೇ ಸ್ಪರ್ಶಮಾತ್ರದಿಂದ ಪಾಪಕಳೆದು ಮುಕ್ತಿಕೊಡುವಳು ಈ ಕೃಷ್ಣವೇಣಿಯು. ೨೪

ಅತಿ ಪುಣ್ಯಪ್ರದವಾದ ಸಂಗಮವನ್ನು ಭೂಮಿಯಲ್ಲಿ ಯಾರು ವರ್ಣಿಸುವರು ? ಎಲ್ಲಿ ಯಾದರೂ ಮೃತವಾದ ಜಂತುವನ್ನು ಒಮ್ಮೆಲೇ ಉದ್ಧರಿಸುವಳು. ೨೬

कुटीं कृत्वा तदा विप्रो भार्यया मुक्तितत्परः ।
दानं कुर्वन् संगमे तु काले गतिमवाप्तवान् ॥ २७ ॥

ಹೆಂಡತಿಯಿಂದ ಕೂಡಿದ ಆ ಬ್ರಾಹ್ಮಣನು ತನಗೂ ಮುಕ್ತಿಯಾಗಬೇಕೆಂದು ಅಲ್ಲಿಯೇ ಗುಡಿಸಲು ಕಟ್ಟಿಕೊಂಡು ದಾನಮಾಡುತ್ತ ಸಂಗಮದಲ್ಲಿ ಇದ್ದು ಯೋಗ್ಯಕಾಲಕ್ಕೆ ಸುಗತಿಯನ್ನು ಹೊಂದಿದನು. ೨೭

संगमस्य च माहात्म्यं शृणुयात् श्रद्धयान्वितः ।
संगमस्नानजं पुण्यं पुमान् प्राप्नोति मुक्तिदम् ॥ २८ ॥

ಶ್ರದ್ಧೆಯಿಂದ ಕೂಡಿಕೊಂಡು ಸಂಗಮದ ಮಾಹಾತ್ಮ್ಯವನ್ನು ಕೇಳಿದರೆ ಸಂಗಮ ಸ್ನಾನದಿಂದ ಉಂಟಾಗುವ ಮುಕ್ತಿಪ್ರದ ಪುಣ್ಯವನ್ನು ಮನುಷ್ಯನು ಹೊಂದುವನು. ೨೮

॥ इति स्कांदे कृष्णामाहात्म्ये त्रयस्त्रिंशोऽध्यायः ॥

❀ ❀ ❀

## ॥ अथ चतुस्त्रिंशोऽध्यायः ॥

स्कंद उवाच –

ಸ್ಕಂದರು ಅಂದರು

व्यासेन गदितं चेदमाख्यानमतिपावनम् ।
याज्ञवल्क्योऽपि तच्छ्रुत्वा पुनः पप्रच्छ तं मुनिम् ॥ १ ॥

याज्ञवल्क्य उवाच –

ಯಾಜ್ಞವಲ್ಕ್ಯರು ಅಂದರು :–

कृष्णद्वैपायनमुने कृष्णवेण्यां वसन्ति हि ।

ವ್ಯಾಸರು ಅಂದರು –

संगमाद्धनुषोस्तीर्थं द्वयोर्मात्रं तु पावनम् ।
नागतीर्थमिति ख्यातं दद्रुकुष्ठादिरोगहम् ॥ ३ ॥

नागतीर्थे नरः स्नात्वा पश्येन्नागेश्वरं जले ।
न तस्य सर्पभीतिः स्यात्सर्वपापक्षयो भवेत् ॥ ४ ॥

ಸಂಗಮದಿಂದ ಎರಡು ಧನುಸ್ಸಿನ ಅಂತರದಲ್ಲಿ ಪವಿತ್ರವಾದ ನಾಗತೀರ್ಥವೆಂಬುದು ಇದೆ. ಅದು ದದ್ರು, ಕುಷ್ಠ ಮೊದಲಾದ ರೋಗಗಳನ್ನು ದೂರ ಮಾಡುವದು. ನಾಗತೀರ್ಥದಲ್ಲಿ ಮನುಷ್ಯರು ಸ್ನಾನಮಾಡಿ ನಾಗೇಶ್ವರನನ್ನು ನೋಡಿದರೆ ಅವನಿಗೆ ಸರ್ಪಭೀತಿ ಇಲ್ಲ. ಎಲ್ಲ ಪಾಪ ಕ್ಷಯವಾಗುವದು. ೩–೪

तस्यां वै पूर्ववाहिन्यां बाणयुग्मांतरेण हि ।
वायुतीर्थमिति ख्यातं वातेश्वरसमन्वितम् ॥ ५ ॥

ಅದೇ ಪೂರ್ವವಾಹಿನಿಯಲ್ಲಿ ಎರಡು ಬಾಣಗಳ ಅಂತರದಲ್ಲಿ ವಾತೇಶ್ವರನಿಂದ ಕೂಡಿಕೊಂಡ ಪ್ರಖ್ಯಾತವಾದ ವಾಯುತೀರ್ಥವೆಂಬುವದು ಇದೆ. ೫

तत्र स्नात्वा सर्वकामान् आप्नुयान्मोक्षमप्युत ।
ततश्च पूर्ववाहिन्यां कृष्णायामतिपावनम् ॥ ६ ॥

ಅಲ್ಲಿ ಸ್ನಾನ ಮಾಡಿ, ಎಲ್ಲ ಇಷ್ಟಗಳನ್ನೂ ಮೋಕ್ಷವನ್ನೂ ಹೊಂದುವನು. ಆ ಮೇಲೆ ಪೂರ್ವವಾಹಿನಿಯಾದ ಕೃಷ್ಣಾದಲ್ಲಿ ಅತ್ಯಂತ ಪವಿತ್ರವಾದ, ೬

गंधर्वसंज्ञकं तीर्थं सर्वकामफलप्रदम् ।
यो नरः प्रयतः स्नात्वा तीर्थे गंधर्वसंज्ञके ॥ ७ ॥

ಗಂಧರ್ವ ಎಂಬ ಹೆಸರಿನ ತೀರ್ಥವಿದೆ. ಅದು ಎಲ್ಲ ಇಚ್ಛಿತ ಫಲಗಳನ್ನು ಕೊಡುವದು. ಯಾವ ಮನುಷ್ಯನು ಇಂದ್ರಿಯನಿಗ್ರಹವುಳ್ಳವನಾಗಿ ಆ ಗಂಧರ್ವತೀರ್ಥದಲ್ಲಿ ಸ್ನಾನ ಮಾಡಿ. ೭

गंधर्वेश्वरमभ्यर्च्य सर्वपातकनाशनम् ।

तपश्चकार स मुनिः बहुकालमतंद्रितः ।

तदा प्रसन्ना तद्भक्त्या कृष्णा प्रोवाच तं मुनिम् ॥ १० ॥

ಎಲೈ ಮುನಿಯೇ ! ಗಂಗೆಯಲ್ಲಿ ಇರುವ ಪಾಪನಾಶನತೀರ್ಥವು ಮುಕ್ತಿಪ್ರದವಾದದ್ದು. ಅಲ್ಲಿಂದ ಮುಂದೆ ಕಹೋಲ ಮುನಿಯ ಆಶ್ರಮವಿರುವದು. ಆ ಮುನಿಯು ಆಲಸ್ಯವಿಲ್ಲದೆ ಬಹಳ ಕಾಲ ತಪಸ್ಸು ಮಾಡಿದನು. ಆಗ ಅವನ ಭಕ್ತಿಗೆ ಪ್ರಸನ್ನಳಾಗಿ ಕೃಷ್ಣಾದೇವಿಯು ಆ ಮುನಿಗೆ ಅಂದಳು. ೯-೧೦

कृष्णोवाच -

ಕೃಷ್ಣಾದೇವಿಯು ಅಂದಳು.

किमर्थं तप्यसे ब्रूहि वरं मनसि संभृतम् ।

मत्तीरे तपसाऽसाध्यं किं न यच्छामि देहिनाम् ॥ ११ ॥

ಏಕೆ ತಪಸ್ಸು ಮಾಡುವಿ ? ಮನಸ್ಸಿನಲ್ಲಿ ಏನು ವರ ಕೇಳಬೇಕೆಂದು ಇಚ್ಛೆ ಇದೆ ? ನನ್ನ ತೀರದಲ್ಲಿ ತಪಸ್ಸು ಮಾಡುವ ಮನುಷ್ಯರಿಗೆ ಏನು ಅಸಾಧ್ಯವನ್ನು ಯಾವದು ನಾನು ಕೊಡುವದಿಲ್ಲ ? ೧೧

यल्लोके दुर्लभतरं तद्दास्यामि न संशयः ।

ಲೋಕದಲ್ಲಿ ಯಾವುದು ದುರ್ಲಭತರವಾಗಿದೆಯೋ ಅದನ್ನು ಕೊಡುವೆನು. ಸಂದೇಹವಿಲ್ಲ.

कहोल उवाच -

ಕಹೋಲನು ಅಂದನು.

धन्योद्यदिवसो मातः धन्यं चेदं तपस्तथा ॥ १२ ॥

ತಾಯಿ ! ಈ ದಿನವು ಧನ್ಯವಾದದ್ದು. ಹಾಗೆ ಈ ತಪಸ್ಸು ಕೂಡ ಧನ್ಯವಾದುದು.
೧೨

धन्या मे पितरस्तुष्टाः भवद्दर्शनमात्रतः ।

आत्मना को नु पूयेत मर्त्यलोके सुरेश्वरि।
त्रियुगेषु स वै धर्मः तुरीये गतिसिद्धता ॥ १५ ॥

ಹೇ ದೇವೇಶ್ವರಿಯೇ! ಮರ್ತ್ಯಲೋಕದಲ್ಲಿ ತನ್ನಷ್ಟಕ್ಕೆ ತಾನು ಪವಿತ್ರನಾಗುವದು ಏನು ದೊಡ್ಡ ಮಹತ್ವ? ಮೂರು ಯುಗದಲ್ಲಿಯೂ ಅದೇ ಧರ್ಮವು. ಕೊನೆಯಲ್ಲಿ ಗತಿಯನ್ನು ಇಚ್ಛಿಸುವ ನಾನು, ೧೫

तपः कृतं परेषां वै तारणाय मया पुनः।
कलौ कलुषचित्तानां सर्वेषां पापिनां तथा ॥ १६ ॥

ಪರರ ಉದ್ಧಾರಕ್ಕಾಗಿ ತಪಸ್ಸು ಮಾಡಿದ್ದೇನೆ. ಕಲಿಯುಗದಲ್ಲಿ ಕಲುಷಚಿತ್ತರಾದ ಎಲ್ಲ ಪಾಪಿಗಳ ಉದ್ಧಾರವಾಗಬೇಕು. ೧೬

कृष्णावायुस्पर्श एव निःश्रेयसकरः परः।
कृते स्नाने कृष्णवेण्यां दत्ते दाने च भक्तितः ॥ १७ ॥

ಕೃಷ್ಣಾ ವಾಯು ಸ್ಪರ್ಶವೇ ಶ್ರೇಷ್ಠ, ಕ್ಷೇಮಕರವಾದದ್ದು. ಕೃಷ್ಣವೇಣಿಯಲ್ಲಿ ಸ್ನಾನಮಾಡಿ ಭಕ್ತಿಯಿಂದ ದಾನಕೊಟ್ಟರೆ, ೧೭

तद्र्येव सुगतिं मातः प्राप्यतां ब्राह्मणादयः।
एतदर्थं मानसिकं पापिनामपि पातकम् ॥ १८ ॥

ಬ್ರಾಹ್ಮಣಾದಿಗಳು, ತಾಯಿಯೇ! ಕೂಡಲೇ ಸದ್ಗತಿಯನ್ನು ಹೊಂದಲಿ. ಪಾಪಿಗಳ ಪಾಪವೂ ಹೋಗಬೇಕೆಂಬುದೇ ನನ್ನ ಮನಸ್ಸಿನಲ್ಲಿರುವದು. ೧೮

स्नानात् दानात् जपात् होमात् तीर्थश्राद्धात् सुकर्मतः।
सकृत् कृते क्षयं यातु तव तीरनिवासिनाम् ॥ १९ ॥

ಕೃಷ್ಣವೇಣೀ ಉವಾಚ:

ಹೇ ಮುನಿ ಶ್ರೇಷ್ಠನೇ ! ಹಾಗೇ ಆಗಲಿ, ಈ ತೀರ್ಥವು ನಿನ್ನ ಹೆಸರಿನಿಂದೇ ನನ್ನ ತಟದಲ್ಲಿ ಪ್ರಖ್ಯಾತಿಯನ್ನು ಹೊಂದುವದು. ಇದು ನಾನು ನಿನಗೆ ಕೊಡುವ ಎರಡನೇ ವರ. ೨೦

कुर्यात् पुमान् स्नानमादौ कहोले तीर्थे भक्त्या नित्यकर्मादिकं च ।
दूराद्यात्राकारिणां मुंडनं स्यात् गंगातीरे चोपवासे द्विजस्य ॥ २१ ॥

ಮೊದಲು ಪುರುಷನು ಕಹೋಲತೀರ್ಥದಲ್ಲಿ ಸ್ನಾನಮಾಡಿ ಭಕ್ತಿಯಿಂದ ನಿತ್ಯಕರ್ಮಾದಿಗಳನ್ನು ಮಾಡಬೇಕು. ದೂರದಿಂದ ಯಾತ್ರಾ ಮಾಡುವವರಿಗೆ ಮುಂಡನವಾಗಬೇಕು. ಗಂಗಾತೀರದಲ್ಲಿ ಬ್ರಾಹ್ಮಣನು ಉಪವಾಸ ಮಾಡಬೇಕು. ೨೧

पूर्वेद्युर्वा परेद्युर्वा विप्राणां भोजनं तथा ।
तत्पुण्यं हि मया शक्यं न वक्तुं वा मुनीश्वरैः ॥ २२ ॥

ಮೊದಲನೇ ದಿವಸವಾಗಲೀ, ಮೂರನೇ ದಿವಸವಾಗಲೀ ಬ್ರಾಹ್ಮಣಭೋಜನ ಮಾಡಿಸಬೇಕು. ಎಲೈ ಮುನೀಶ್ವರರೆ ! ಆ ಪುಣ್ಯವೆಷ್ಟು ಎಂದು ನನಗೆ ಹೇಳಲು ಶಕ್ಯವಿಲ್ಲ. ೨೨

तदा वरौ प्रगृह्याशु कृष्णावेण्याः प्रसादतः ।
चकार तीर्थं तन्नाम्ना कहोलं तु विमुक्तिदम् ॥ २३ ॥

ಆಗ ಕೃಷ್ಣವೇಣಿಯ ಅನುಗ್ರಹದಿಂದ ವರಗಳನ್ನು ಸ್ವೀಕಾರಮಾಡಿ ಮೋಕ್ಷಕೊಡುವ ಆ ತೀರ್ಥವನ್ನು ಕಹೋಲ ಎಂಬ ಹೆಸರಿನಿಂದ ಮಾಡಿದನು. ೨೩

आश्रमो विद्यते यत्र गंगातीरे मुनीश्वर ।
अत्याश्चर्यकरं यत्र शिलातीर्थं च विद्यते ॥ २४ ॥

ಹೇ ಮುನೀಶ್ವರನೇ ! ಗಂಗಾತೀರದಲ್ಲಿ ಎಲ್ಲಿ ಆಶ್ರಮವಿದೆ. ಆಶ್ಚರ್ಯಕರವಾದ ಶಿಲಾತೀರ್ಥವೂ ಕೂಡ ಅಲ್ಲಿ ಇದೆ. ೨೪

मज्जनात् यत्र षण्मासं अहर्निशमतन्द्रयात् ।

जायते हि शिलाकारं तच्छिलातीर्थमुच्यते ॥ २६ ॥

ಚೆನ್ನಾಗಿ ಆರು ತಿಂಗಳವರೆಗೆ ಎಲ್ಲಿ, ಬಿದ್ದ ತೃಣ, ಎಲೆ ಮೊದಲಾದದ್ದು ಕೂಡ ಶಿಲಾಕಾರವಾಗಿ ಆಗುವವೋ ಅದಕ್ಕೆ ಶಿಲಾತೀರ್ಥವೆಂದು ಹೇಳುತ್ತಾರೆ. ೨೬

आसमंतादुपतटं मुनीनामाश्रमस्तथा ।
सिद्धाश्च साधकाः सर्वे निवसंति तपस्विनः ॥ २७ ॥

ಸುತ್ತಲೂ ದಂಡೆಯ ಹತ್ತಿರ ಮುನಿಗಳ ಆಶ್ರಮವು, ಹಾಗೆ ಅಲ್ಲಿ ಸಿದ್ಧರೂ, ಸಾಧಕರೂ, ಎಲ್ಲರೂ ತಪಸ್ವಿಗಳು ಇರುವರು. ೨೭

श्रुत्वाध्यायमिदं सम्यक् प्रातः पर्वणि भक्तितः ।
कृष्णास्नानफलं तस्य याज्ञवल्क्य न संशयः ॥ २८ ॥

ಪ್ರಾತಃಕಾಲ ಪರ್ವಕಾಲದಲ್ಲಿ ಭಕ್ತಿಯಿಂದ ಈ ಅಧ್ಯಾಯವನ್ನು ಚೆನ್ನಾಗಿ ಕೇಳಿದವನಿಗೆ ಹೇ ಯಾಜ್ಞವಲ್ಕ್ಯನೇ ! ಕೃಷ್ಣಾಸ್ನಾನದ ಫಲವು ನಿಃಸಂದೇಹವಾಗಿ ಸಿಗುವದು. ೨೮

॥ इति श्री स्कांदे कृष्णामाहात्म्ये चतुस्त्रिंशतितमोऽध्यायः ॥

❀ ❀ ❀

## ॥ अथ पंचत्रिंशतितमोऽध्यायः ॥

स्कंद उवाच –

ಸ್ಕಂದನು ಅಂದನು –

माहात्म्यं कथयन्नेवं प्रीत्या यत्रेश्वरोद्भवः ।
मार्कंडेयादिलिंगानि पूजयित्वाऽशुभक्तितः ॥ १ ॥

ಹೀಗೆ ಪ್ರೀತಿಯಿಂದ ಮಾಹಾತ್ಮ್ಯವನ್ನು ಹೇಳುತ್ತಲೇ ಈಶ್ವರೋದ್ಭೂತನಾದ ಅವನು ಮಾರ್ಕಂಡೇಯಾದಿ ಲಿಂಗಗಳನ್ನು ಭಕ್ತಿಯಿಂದ ಪೂಜೆಮಾಡಿ, ೧

श्री भूत कृष्णवेणी सः उत्तीय व्यासमब्रवीत् ॥ ३ ॥

ಕೃಷ್ಣಾಜಲದಲ್ಲಿ ಸ್ನಾನಮಾಡಿ, ಆ ಮೇಲೆ ಭಕ್ತಿಯಿಂದ ಪಿತೃತರ್ಪಣ ಕೊಟ್ಟರು. ಮರುದಿನ ಕೃಷ್ಣವೇಣಿಯನ್ನು ದಾಟಿ ಅವರು ವ್ಯಾಸರಿಗೆ ಅಂದರು. ೩

अत्याश्चर्यकरं मास कृष्णातीरं विराजते ।
आसमंतात् तीर्थवृंदैः शोभितं सुमनोहरैः ॥ ४ ॥

ಹೇ ವ್ಯಾಸರೆ ! ಈ ಕೃಷ್ಣಾತೀರವು ಅತ್ಯಾಶ್ಚರ್ಯಕರವಾಗಿ ವಿರಾಜಿಸುತ್ತದೆ. ಸುತ್ತು ಮುತ್ತಲೂ ಮನೋಹರವಾದ ತೀರ್ಥಸಮುದಾಯಗಳಿಂದ ಶೋಭಿತವಾಗಿದೆ. ೪

गगनस्पर्धिभिःस्तब्धैः गोपुरैश्च विराजितम् ।
नानोद्यानश्रिया जुष्टं सर्वदेवनिषेवितम् ॥ ५ ॥

ಗಗನ ಚುಂಬಿಯಾದ ಸ್ತಬ್ಧವಾದ ಗೋಪುರಗಳಿಂದ ವಿರಾಜಿಸುವದು. ಅನೇಕ ವಿಧ ಉದ್ಯಾನದ ಐಶ್ವರ್ಯದಿಂದ ಯುಕ್ತವಾಗಿದೆ. ಎಲ್ಲ ದೇವತೆಗಳಿಂದಲೂ ನಿಷೇವಿತವಾದದ್ದು. ೫

दर्शनात् स्पर्शनात् वापि सर्वपापप्रणाशनम् ।
तद्दर्शनमहानंद करतालसमन्वितः ॥ ६ ॥

ನೋಡುವದರಿಂದಲೂ, ಮುಟ್ಟುವದರಿಂದಲೂ ಎಲ್ಲ ಪಾಪಗಳನ್ನು ಕಳೆಯುವಂತಹದು. ಅದರ ದರ್ಶನದಿಂದ ಉಂಟಾದ ಮಹಾನಂದದಿಂದ ಚಪ್ಪಾಳೆ ತಟ್ಟುತ್ತ, ೬

नर्तनोत्पुलकाक्रांत शरीरः संस्मरन् शिवम् ।
ब्रूहि व्यास महाभाग लिंगं त्रैलोक्यपावनम् ॥ ७ ॥

ನೃತ್ಯ ಮಾಡುತ್ತ ರೊಮಾಂಚನಯುಕ್ತ ಶರೀರ ಉಳ್ಳವನಾಗಿ ಶಿವನನ್ನು ಸ್ಮರಿಸುತ್ತ ಮಹಾಭಾಗ್ಯಶಾಲಿಗಳಾದ ಹೇ ವ್ಯಾಸರೇ ! ಮೂರು ಲೋಕವನ್ನು ಪವಿತ್ರಗೊಳಿಸುವ ಲಿಂಗವು. ೭

कस्माद्वै निम्नभूम्यां तु रम्यलिंगं स्थितं मुने ।

ಹೇ ಯಾಜ್ಞವಲ್ಕ್ಯರೇ ! ಕೃಷ್ಣವೇಣಿಯ ಶುಭ ತಟದಲ್ಲಿ ಇದು ಹೀಗೇಕೆ ಇದೆ ಎಂದುದನ್ನು ಕೇಳು. ೮

वीरभद्रस्य माहात्म्यं निदानं तु प्रयत्नतः ।
पुरा कल्पांतरे दक्षो यज्ञं कर्तुं समुद्यतः ॥ ९ ॥

ವೀರಭದ್ರನ ಮಾಹಾತ್ಮ್ಯವೇ ಕಾರಣ ಪ್ರಯತ್ನವೂ ಕೂಡ. ಹಿಂದಿನ ಕಲ್ಪದಲ್ಲಿ ದಕ್ಷನು ಯಜ್ಞಮಾಡಬೇಕೆಂದು ಹೊರಟನು. ೯

विष्णुना प्रेरितस्तत्र कृष्णातीरे तदाऽकरोत् ।
विना रुद्रेण चेर्ष्यातश्चक्रे देवर्षिसंयुतः ॥ १० ॥

ಭಗವಂತನಿಂದ ಪ್ರೇರಿತನಾಗಿ ಕೃಷ್ಣಾತೀರದಲ್ಲಿ ಯಾಗ ಮಾಡಿದನು. ಈರ್ಷೆಯಿಂದ ರುದ್ರನನ್ನು ಬಿಟ್ಟು ದೇವರ್ಷಿಗಳಿಂದ ಯುಕ್ತನಾಗಿ ಅದನ್ನು ಮಾಡಿದನು. ೧೦

ब्रह्मादिभिः तथा देवैः ऋषिभिः ब्रह्मवादिभिः ।
तं दृष्ट्वा नारदः क्रोधादवदत् दक्षसंसदि ॥ ११ ॥

ಬ್ರಹ್ಮನೇ ಮೊದಲಾದ ದೇವತೆಗಳಿಂದ ಬ್ರಹ್ಮವಾದಿಗಳಾದ ಋಷಿಗಳಿಂದ ಅದನ್ನು ನೋಡಿ, ಸಿಟ್ಟಿನಿಂದ ನಾರದರು ದಕ್ಷಸಭೆಯಲ್ಲಿ ಅಂದರು. ೧೧

विना रुद्रेण नो युक्तं यज्ञस्याचरणं विभो ।
ततश्चोपेक्षितस्तेन नारदो देवपूजितः ॥ १२ ॥

ಹೇ ಬ್ರಹ್ಮನೇ ! ರುದ್ರನಿಲ್ಲದೆ ಯಜ್ಞಮಾಡುವದು ಯುಕ್ತವಲ್ಲ. ಹೀಗೆ ಹೇಳಲು ದೇವಪೂಜಿತನಾದ ನಾರದರನ್ನು ಅವರು ಉಪೇಕ್ಷಿಸಿದರು. ೧೨

कैलासं स जगामाशु उमया सह शंकरम् ।
सर्वं तत् कथयामास दक्षयज्ञविचेष्टितम् ॥ १३ ॥

ಉಪೇಕ್ಷಿತರಾದ ನಾರದರು ಉಮಾಸಹಿತ ಶಂಕರನಿರುವ ಕೈಲಾಸಕ್ಕೆ ತೆರಳಿದರು. ದಕ್ಷಯಜ್ಞದ ಎಲ್ಲ ವ್ಯಾಪಾರವನ್ನು ಹೇಳಿದರು. ೧೩

आसनं प्रददौ रम्यं नारदाय शिवाज्ञया ॥ १५ ॥

ಸಿಟ್ಟಿನಿಂದ ಯುಕ್ತಳಾದ ಉಮಾದೇವಿ ಆಗಲೇ ಖಿನ್ನನಾದ ನಾರದನನ್ನು ನೋಡಿದಳು. ಶಿವನ ಅಪ್ಪಣೆಯಂತೆ ನಾರದನಿಗೆ ರಮಣೀಯವಾದ ಆಸನವನ್ನು ಕೊಟ್ಟಳು. ೧೫

पुनः पप्रच्छ तं देवी कुरु सर्वं निवेदितम् ।

नारद उवाच –

इंगितज्ञापि भवती सर्वेशां प्राणिनामुमे ॥ १६ ॥

ಮತ್ತೆ ದೇವಿಯು ಎಲ್ಲವನ್ನು ಹೇಳು ಎಂದು ನಾರದನನ್ನು ಕೇಳಿದಳು.

**ನಾರದನು ಅಂದನು**

ಎಲೈ ಪಾರ್ವತಿಯೇ! ನೀನು ಎಲ್ಲ ಪ್ರಾಣಿಗಳ ಮನೋಗತವನ್ನು ತಿಳಿದಿದ್ದಿ. ಆದರೂ ಕೂಡ ನಿನ್ನ ತಂದೆಯ ದುರ್ವಿಚಾರವನ್ನು ಹೇಳುವೆ. ೧೬

विना रुद्रं करोति स्म क्रतुं कृष्णातटेऽधुना ।
तच्छ्रुत्वा प्रार्थयामास गंतुं तत्र पुनः शिवम् ॥ १७ ॥

ಈಗ ದಕ್ಷನು ಕೃಷ್ಣಾತಟದಲ್ಲಿ ರುದ್ರನಿಲ್ಲದೆ ಯಜ್ಞಮಾಡುತ್ತಿದ್ದಾನೆ. ಅದನ್ನು ಕೇಳಿ ಪಾರ್ವತಿಯು ಅಲ್ಲಿ ಹೋಗಲು ಪುನಃ ರುದ್ರನನ್ನು ಪ್ರಾರ್ಥಿಸಿದಳು. ೧೭

साधूनां समचित्तानां द्वंद्वातीतहृदां सदा ।
न प्रयोजनमस्तीह उत्सवादिप्रदर्शने ॥ १८ ॥

ಸಮಚಿತ್ತರೂ, ದ್ವಂದ್ವಾತೀತವಾದ ಹೃದಯಉಳ್ಳವರೂ, ಆದ ಸಾಧುಗಳಿಗೆ ಉತ್ಸವಾದಿದರ್ಶನದಿಂದ ಪ್ರಯೋಜನವಿಲ್ಲ. ೧೮

स्वभावोऽपि भवेत् स्त्रीणां पित्रोर्गेहे न चेद्यदि ।
सन्मानोऽपि तथा नित्यं गंतव्यं कौतुकेच्छया ॥१९॥

ಹೋದಳು. ೨೦

न कल्याणं भवेदस्यां इति नन्दि शिवोऽवदत् ।
गच्छ नंदीन् तथा सार्धं सर्वतो रक्षणं कुरु ॥ २१ ॥

ಈಕೆಗೆ ಅಲ್ಲಿ ಕಲ್ಯಾಣವಾಗುವದಿಲ್ಲ. ಹೀಗೆ ಶಿವನು ನಂದಿಯನ್ನು ಕುರಿತು ಅಂದನು. ಹೇ ನಂದಿಯೇ! ನೀನು ಈಕೆಯ ಜೊತೆಗೆ ಹೋಗು. ಅಲ್ಲಿ ಎಲ್ಲ ಕಡೆಯಿಂದ ರಕ್ಷಣೆಯನ್ನು ಮಾಡು. ೨೧

नंदिना सा तदा गत्वा दृष्ट्वा शालांतरे मुनीन् ।
पितरं देवताः मातृः सुहृदो भगिनीस्तथा ॥ २२ ॥

ನಂದಿಯಿಂದ ಸಮೇತಳಾದ ಸತೀದೇವಿಯು ಶಾಲಾಂತರದಲ್ಲಿ ಮುನಿಗಳನ್ನು, ತಂದೆಯನ್ನು, ದೇವತೆಗಳನ್ನು, ತಾಯಂದಿರನ್ನು, ಗೆಳತಿಯರನ್ನು, ಅಕ್ಕತಂಗಿಯರನ್ನು ನೋಡಿ. ೨೨

तत्कृतानादरं दृष्ट्वा पितुरन्तिकमाययौ ।
शिवनिन्दाकरं मूढं हंसं वीक्ष्य रुषान्विता ॥ २३ ॥

ಅವರು ಮಾಡಿದ ಅನಾದರವನ್ನು ನೋಡಿ ತಂದೆಯ ಹತ್ತಿರ ಬಂದಳು. ಶಿವನನ್ನು ನಿಂದಿಸುವ ಮೂಢನಾದ ದಕ್ಷನನ್ನು ನೋಡಿ ಸಿಟ್ಟಿಗೆದ್ದ ಅವಳು. ೨೩

हुताग्नौ प्रविवेशाथ निष्कृतिं चाकरोत् सति ।
तन्नारदमुखात् श्रुत्वा जरायाः पुरुषोऽभवत् ॥ २४ ॥

क्रुद्धश्च व्योमकेशोऽथ वीरभद्रमथादिशत् ।
जहि मन्निन्दकं दक्षं सानुगं सपरिच्छदम् ॥ २५ ॥

ಹುತವಾದ ಅಗ್ನಿಯಲ್ಲಿ ಪ್ರವೇಶಮಾಡಿ ಸತಿಯು ಪ್ರಾಯಶ್ಚಿತ್ತವನ್ನು ಮಾಡಿಕೊಂಡಳು. ನಾರದರ ಮುಖದಿಂದ ಅದನ್ನು ಕೇಳಿ ಸಿಟ್ಟಿಗೆದ್ದ ಶಿವನು ಜಡೆಯಿಂದ ಒಬ್ಬ ಪುರುಷನನ್ನು ನಿರ್ಮಿಸಿದನು. ಅವನಿಗೆ ವೀರಭದ್ರನೆಂದು ಹೆಸರು. ನನ್ನ

ಆಗ ಅವನು ಯಜ್ಞಶಾಲೆಗೆ ಹೋಗಿ ಎಲ್ಲವನ್ನೂ ಮುರಿದು ಹಾಕಿದನು. ಶಾಸ್ತ್ರ ಬಿಟ್ಟು ವರ್ತಿಸುವ ದಕ್ಷನ ಶಿರಚ್ಛೇದವನ್ನು ಮಾಡಿದನು. ೨೬

प्रार्थितो वीरभद्रस्तैः अमोघं तव दर्शनम् ।
दुष्टकर्म कृते दक्षे शिवानंदकरे जडे ॥ २७ ॥

ಆಮೇಲೆ ವೀರಭದ್ರನು ಅವರಿಂದ ಪ್ರಾರ್ಥಿತನಾದನು. ನಿನ್ನ ದರ್ಶನವು ಅಮೋಘವಾದುದು. ಶಿವನಿಂದೆಮಾಡಿದ ದುಷ್ಟಕರ್ಮ ಮಾಡಿದ ಮೂರ್ಖ ದಕ್ಷನಲ್ಲಿ ಶಿಕ್ಷೆ ಮಾಡಿದ್ದು ಸರಿ. ೨೭

विना रुद्रविभागं तु कर्मकर्तरि शंकुतः ।
यत्कृतं भवता युक्तं प्रसन्नो भव चाधुना ॥ २८ ॥

ರುದ್ರ ದೇವರಿಗೆ ಭಾಗವಿಲ್ಲದಂತೆ ಕೆಲಸಮಾಡುತ್ತಿರಲು ಅವರಿಗೆ ಸುಖವು ಹೇಗೆ ದೊರಕೀತು ? ಏನು ಮಾಡಿದಿಯೋ ಅದು ಯುಕ್ತವೆ. ನೀನು ಈಗ ಪ್ರಸನ್ನನಾಗು. ೨೮

तां स्तुतिं सकलां श्रुत्वा वीरभद्रः प्रतापवान् ।
कैलासमगमत्सर्वं शिवायाकथयन्मुदा ॥ २९ ॥

ಆ ಎಲ್ಲ ಸ್ತುತಿಯನ್ನು ಕೇಳಿ ಪ್ರತಾಪಶಾಲಿಯಾದ ವೀರಭದ್ರನು ಕೈಲಾಸಕ್ಕೆ ಹೋಗಿ ಸಂತೋಷದಿಂದ ಅದೆಲ್ಲವನ್ನೂ ಹೇಳಿದನು. ೨೯

देवर्षिसंघाः यज्ञस्य भंगं दक्षवधं तथा ।
दृष्ट्वा ब्रम्हेंद्रप्रमुखाः कैलासं सहसाऽगमन् ॥ ३० ॥

ದೇವ ಋಷಿ ಸಮುದಾಯಗಳು ಯಜ್ಞದ ನಾಶ ವನ್ನೂ ದಕ್ಷನ ವಧೆಯನ್ನೂ ನೋಡಿ ಬ್ರಹ್ಮ ಇಂದ್ರನೇ ಮೊದಲಾದವರು ಕೈಲಾಸಕ್ಕೆ ಒಮ್ಮೆಲೇ ಹೋದರು. ೩೦

देवा ऊचुः –

**ದೇವತೆಗಳು ಅಂದರು –**

[illegible]
ಅನುಗ್ರಹ ಮಾಡುವವನೇ. ೩೨

कार्यकारणकर्तृज्ञ आत्मरूपभवान्तक ।
दक्षमेनं सदा मूढं दृष्ट्याप्यमृतकल्पया ॥ ३३ ॥

ಕಾರ್ಯ ಕಾರಣ ಕರ್ತೃ ಇವುಗಳ ಬಗ್ಗೆ ಜ್ಞಾನ ಉಳ್ಳವನೇ, ಮನೋನಿಯಾಮಕನೇ, ಸಂಸಾರ ನಾಶಕನೇ, ಮೂಢನಾದ ಈ ದಕ್ಷನನ್ನು ಅಮೃತಸದೃಶವಾದ ಈ ದೃಷ್ಟಿಯಿಂದ. ೩೩

सापराधं कबंधाद्यं यथाभूतं कुरुष्व भो ।
इति तद्वाक्यमाकर्ण्य सुराणां सतपस्विनाम् ॥ ३४ ॥

ಅಪರಾಧ ಮಾಡಿದ ಇವನು ಕಬಂಧದಿಂದ ಕೂಡಿಸಿ ಮೊದಲಿನಂತೆ ಮಾಡು. ತಪಸ್ವಿಗಳಿಂದ ಕೂಡಿದ ದೇವತೆಗಳ ಆ ಮಾತನ್ನು ಕೇಳಿ. ೩೪

हसन् प्रोवाच किमिदं प्रार्थितं तु सुदुःसहम् ।
तथापि भवतां देवाः वाक्यं श्रुत्वा ददामि तत् ॥ ३५ ॥

ನಗುತ್ತ ರುದ್ರದೇವನು ಅಂದನು. ಇದೇನು ಅಸಾಧ್ಯವಾದುದನ್ನು ಪ್ರಾರ್ಥಿಸಿದಿರಿ. ಆದರೂ ಎಲೈ ದೇವತೆಗಳೇ ! ನಿಮ್ಮ ವಾಕ್ಯವನ್ನು ಕೇಳಿ ಅದನ್ನು ಕೊಡುವೆ. ೩೫

यज्ञियस्य पशोच्छिन्नं शिरश्चानीय शंकरः ।
स्कंधे दक्षस्य संयोज्य संजीविन्या ह्यजीवयत् ॥ ३६ ॥

ಯಜ್ಞಪಶುವಿನ ಕತ್ತರಿಸಿದ ಆ ತಲೆಯನ್ನು ತಂದು ಶಂಕರನು ದಕ್ಷನ ಧಡಕ್ಕೆ ಅದನ್ನು ಅಂಟಿಸಿ ಮೃತಸಂಜೀವಿನೀ ವಿದ್ಯೆಯಿಂದ ಬದುಕಿಸಿದನು. ೩೬

तदा दृष्ट्वा वीरभद्रं शांतं सन्मुक्तिकारकम् ।
दक्षस्तुष्टाव सद्भक्त्या गद्गदाक्षरमादृतः ॥ ३७ ॥

ದೇವೇಶನಾದ ಮೂರುಕಣ್ಣುಳ್ಳ ಶಿವನೇ ! ಭಕ್ತರ ರಕ್ಷಣೆಯಲ್ಲಿ ಆಸಕ್ತನೇ, ದೇವ ದೇವೇಶನೇ, ಹೇ ವೀರಭದ್ರನೇ ! ನಿನಗೆ ನಮಸ್ಕಾರವಿರಲಿ. ನೀನು ನನ್ನನ್ನು ರಕ್ಷಿಸು. ೩೮

**नीलकंठ महारुद्र भुवनार्तिविनाशन ।**
**शांतचित्तैः सदावंद्य वीरभद्र नमोऽस्तु ते ॥ ३९ ॥**

ಜಗತ್ತಿನ ದುಃಖವನ್ನು ನಾಶಮಾಡುವ ನೀಲವಾದ ಕಂಠವುಳ್ಳ ಮಹಾರುದ್ರನೇ ! ಶಾಂತಮನಸ್ಸುಳ್ಳ ಜನರಿಂದ ಯಾವಾಗಲೂ ವಂದ್ಯನಾದ ಹೇ ವೀರಭದ್ರನೇ, ನಿನಗೆ ನಮಸ್ಕಾರವಿರಲಿ. ೩೯

**जटाजूटसमुद्भूत दुष्टानामपहारक ।**
**सद्भक्तिसेवितपद वीरभद्र नमोऽस्तु ते ॥ ४० ॥**

ಜಡೆಯ ಸಮುದಾಯದಿಂದ ಜನಿಸಿದವನೇ, ದುಷ್ಟರನ್ನು ನಾಶಮಾಡುವವನೇ, ಒಳ್ಳೇ ಭಕ್ತಿಯಿಂದ ಸೇವಿತವಾದ ಪಾದ ಉಳ್ಳವನೇ, ಹೇ ವೀರಭದ್ರನೇ ! ನಿನ್ನಗೋಸುಗ ನಮಸ್ಕಾರವಿರಲಿ. ೪೦

**यज्ञहेलनया कर्म कृतं रुद्रं विना प्रभो ।**
**दृष्टप्रभावस्त्वामद्य शरणं समुपागताः ॥ ४१ ॥**

ರುದ್ರನಿಲ್ಲದೆ ಹೇ ಪ್ರಭುವೇ, ಯಜ್ಞರೂಪವಾದ ಕರ್ಮ ಮಾಡಿದೆ. ನಿನ್ನ ಪ್ರಭಾವವು ವ್ಯಕ್ತವಾಯಿತು. ಇಂದು ನಿನ್ನನ್ನು ಶರಣಾಗತನಾಗಿದ್ದೇನೆ. ೪೧

**त्वं वै पितासि देवेश क्षमस्व करुणानिधे ।**
**वीरभद्र महादैत्यनाशन त्वां नमाम्यहम् ॥ ४२ ॥**

ಹೇ ದೇವೇಶನೇ, ಕರುಣಾನಿಧಿಯೇ, ನೀನು ತಂದೆ ಇರುವಿ, ಕ್ಷಮಿಸು. ಮಹಾದೈತ್ಯರನ್ನು ನಾಶಮಾಡುವ, ಹೇ ವೀರಭದ್ರನೇ, ನಾನು ನಿನ್ನನ್ನು ನಮಿಸುವೆ. ೪೨

**इति स्तुत्वा वचो दीनं दक्षिणोक्तं सदाशिवः ।**

मा कुरुश्व परद्रोहं शिवनिन्दां सुदुःखदाम् ॥ ४४ ॥

ಏಳು ಏಳು ! ನೀನು ಸಿದ್ಧನಾಗಿರುವಿ. ಶಿವನಲ್ಲಿ ಯಾವಾಗಲೂ ಭಕ್ತಿಯನ್ನು ಮಾಡು. ಪರದ್ರೋಹವನ್ನು, ಅತ್ಯಂತ ದುಃಖಕರವಾದ, ಶಿವನಿಂದೆಯನ್ನು ಮಾಡಬೇಡ. ೪೪

भक्तिं कुरु सदा भुंक्ष्व मुक्तिबीजं विशेषतः ।
अंगीचकार दक्षस्तु वीरभद्रस्य वाक्यतः ॥ ४५ ॥

ಮುಕ್ತಿಗೆ ಬೀಜದಂತಿರುವ ಭಕ್ತಿಯನ್ನು ಮಾಡು. ವಿಶೇಷವಾಗಿ ಭಕ್ತಿಫಲ ಅನುಭವಿಸು. ವೀರಭದ್ರನ ವಾಕ್ಯದಿಂದ ದಕ್ಷನು ಹಾಗೇ ಆಗಲಿ, ಎಂದು ಅಂಗೀಕರಿಸಿದನು. ೪೫

सर्वदेवान्नमस्कृत्य द्वारे तिष्ठन्महेशितुः ।
श्रुत्वाऽध्यायमिमं पुण्यं दक्षस्य चरितं शुभम् ॥ ४६ ॥
सर्वपापविनिर्मुक्तः शिवलोके महीयते ॥ ४७ ॥

ಎಲ್ಲ ದೇವತೆಗಳನ್ನು ನಮಿಸಿ, ಮಹಾದೇವನ ದ್ವಾರದಲ್ಲಿ ನಿಂತು ದಕ್ಷನ ಶುಭವಾದ ಚರಿತ್ರೆಯನ್ನು ಹೇಳುವ ಪುಣ್ಯಕರವಾದ ಈ ಅಧ್ಯಾಯವನ್ನು ಕೇಳಿ ಎಲ್ಲ ಪಾಪಗಳಿಂದ ರಹಿತನಾಗಿ ಶಿವಲೋಕದಲ್ಲಿ ಗೌರವಿಸಲ್ಪಡುವನು. ೪೬–೪೭

॥ इति स्कांदे कृष्णामाहात्म्ये पंचत्रिंशोऽध्यायः ॥

❀ ❀ ❀

## ॥ अथ षट्त्रिंशोऽध्यायः ॥

स्कंद उवाच –

ಸ್ಕಂದನು ಅಂದನು –

क्षेत्रेऽस्मिन्कृष्णवेणायाः तीरे देवानुकंपया ।
यज्ञरूपोऽसि यस्मात्त्वं तिष्ठ यज्ञे प्रजापतेः ॥ २ ॥

ಕೃಷ್ಣವೇಣಿಯ ತೀರದಲ್ಲಿರುವ ಈ ಕ್ಷೇತ್ರದಲ್ಲಿ ಹೇ ದೇವದೇವನೇ ! ದಯೆಯಿಂದ ನೀನು ಯಜ್ಞರೂಪನಾಗಿದ್ದಿ. ಆದ್ದರಿಂದ ಪ್ರಜಾಪತಿಯ ಯಜ್ಞದಲ್ಲಿ ನೀನು ಇರು. ೨

लोकानां वरदानार्थं गतिं दातुं च योगिनाम् ।
दर्शनात् पूजनात् देव स्पर्शनाच्च सुभक्तितः ॥ ३ ॥

ಜನರಿಗೆ ನೀನು ಇಲ್ಲಿ ಹಾಗೂ ಯೋಗಿಗಳಿಗೆ ಗತಿಕೊಡಲು ದರ್ಶನ ಸ್ಪರ್ಶನ ಭಕ್ತಿಯಿಂದ ಪೂಜೆ ಮಾಡುವವರಿಗೆ ವರಕೊಡಲು ಇರು. ೩

इति तद्वाक्यमाकर्ण्य वीरभद्रः प्रतापवान् ।
ओमित्युक्त्वा च सहसा तत्रैवान्तरधीयत ॥ ४ ॥

ಹೀಗೆ ಅವರ ಮಾತನ್ನು ಕೇಳಿ ಪ್ರತಾಪಿಯಾದ ವೀರಭದ್ರನು ಓಂ ಎಂದು ಹೇಳಿ ಒಮ್ಮೆಲೇ ಅಲ್ಲಿಯೇ ಅದೃಶ್ಯನಾದನು. ೪

पश्यतां सर्वदेवानां यज्ञकुंडात् समुत्थितः ।
स्वयंभूर्भगवान् देवो जटामंडलमंडितः ॥ ५ ॥

ಎಲ್ಲ ದೇವತೆಗಳು ನೋಡುತ್ತಿರುವಂತೆ ಜಟಾ ಸಮುದಾಯದಿಂದ ಅಲಂಕೃತನಾದ ಸ್ವಯಂಭುವಾದ ದೇವನು ಯಜ್ಞಕುಂಡದಿಂದ ಎದ್ದನು. ೫

तदा देवाः समायाताः तस्थुः प्रांजलयोऽग्रतः ।
ववर्षुः पुष्पधाराभिः दीपैः गुग्गुलधूपकैः ॥ ६ ॥

ಆಗ ಎಲ್ಲ ದೇವತೆಗಳು ಬಂದು ಕೈಮುಗಿದುಕೊಂಡು ಎದುರಿಗೆ ನಿಂತರು. ಧಾರಾಕಾರವಾಗಿ ಪುಷ್ಪವೃಷ್ಟಿ ಮಾಡಿದರು. ದೀಪಗಳಿಂದ ಗುಗ್ಗುಲ ಧೂಪಗಳಿಂದ. ೬

ब्राह्मणैः ज्ञानसंपन्नैः लिंगं स्थाप्य स्वयंभुवम्।
ततः प्रसन्नो देवेशः सर्वानिवाब्रवीत् वचः ॥ ९ ॥

ಜ್ಞಾನಸಂಪನ್ನರಾದ ಬ್ರಾಹ್ಮಣರಿಂದ ಸ್ವಯಂಭೂಲಿಂಗವನ್ನು ಸ್ಥಾಪಿಸಿದರು. ಆಮೇಲೆ ಪ್ರಸನ್ನನಾದ ದೇವೇಶನು ಅವರೆಲ್ಲರನ್ನು ಕುರಿತು ಈ ಮಾತನ್ನು ಅಂದನು. ೯

यस्तवेन भवद्भिस्तु कृतेन पुरुषोऽर्चयेत्।
तस्याहं सकलां बाधां नाशयिष्यामि तत्क्षणात् ॥ १० ॥

ನೀವು ಮಾಡಿದ ಸ್ತೋತ್ರದಿಂದ ಯಾವ ಪುರುಷನು ನನ್ನನ್ನು ಪೂಜಿಸುವನೋ ಅವನ ಎಲ್ಲ ಬಾಧೆಗಳನ್ನು ತತ್ಕ್ಷಣದಲ್ಲಿ ನಾಶಮಾಡುವೆನು. ೧೦

मदीयं सकलं चैतदाख्यानं यः पठेन्नरः।
सर्वान् कामान् अवाप्नोति जीवेच्च शरदां शतम् ॥ ११ ॥

ನನ್ನ ಎಲ್ಲ ಈ ಆಖ್ಯಾನವನ್ನು ಯಾವ ಮನುಷ್ಯನು ಪಠಿಸುವನೋ ಅವನು ಎಲ್ಲ ಇಷ್ಟಗಳನ್ನು ಹೊಂದುತ್ತಾನೆ. ನೂರು ವರ್ಷ ಬದುಕುವನು. ೧೧

फाल्गुने मासि यात्रायां स्नायात् कृष्णोदकेऽमले।
दर्शनं वीरभद्रस्य यः करिष्यति मानवः ॥ १२ ॥

ಫಾಲ್ಗುನ ಮಾಸದ ಯಾತ್ರೆಯಲ್ಲಿ ನಿರ್ಮಲವಾದ ಕೃಷ್ಣಾ ಜಲದಲ್ಲಿ ಸ್ನಾನಮಾಡಿ ಯಾವ ಮನುಷ್ಯನು ವೀರಭದ್ರನ ದರ್ಶನ ಮಾಡುವನೋ. ೧೨

शक्त्या संपूज्य मां भक्त्या कुर्यात् ब्राह्मणभोजनम्।
तस्य दास्यामि सहसा मुक्तिरूपं चतुर्विधम् ॥ १३ ॥

ಶಕ್ತ್ಯಾನುಸಾರ ನನ್ನನ್ನು ಪೂಜಿಸಿ, ಭಕ್ತಿಯಿಂದ ಬ್ರಾಹ್ಮಣ ಭೋಜನವನ್ನು ಮಾಡಿಸುವನೋ ಅವನಿಗೆ ನಾಲ್ಕು ವಿಧವಾದ ಮುಕ್ತಿರೂಪವನ್ನು ಕೊಡುವೆ. ೧೩

इति तद्वाक्यमाकर्ण्य समंतात् तस्थिरे सुराः।

दक्षयज्ञविध्वंसनवर्णनं नाम षट्त्रिंशोऽध्यायः ॥

❀ ❀ ❀

# ॥ अथ सप्तत्रिंशतितमोऽध्यायः ॥

स्कंद उवाच –

ಸ್ಕಂದನು ಅಂದನು –

याज्ञवल्क्यस्तदा श्रुत्वा विस्मयं परमं गतः ।
व्यासेन सहितः श्रीमान् वीरभद्रं ददर्श ह ॥ १ ॥

ಇದನ್ನು ಕೇಳಿ ಪರಮಾಶ್ಚರ್ಯವನ್ನು ಹೊಂದಿದ ಯಾಜ್ಞವಲ್ಕ್ಯನು ವ್ಯಾಸರಿಂದ ಕೂಡಿ ವೀರಭದ್ರನನ್ನು ನೋಡಿದನು. ೧

तुष्टाव परया भक्त्या याज्ञवल्क्यः शिवं मुनिः ।

याज्ञवल्क्य उवाच –

वीरभद्र जगतां पते विभो दक्षयज्ञहनने हितार्थद ।
चंद्रभूषण विमुक्तिभुक्तिद कृष्णवेणितटभूमिसंश्रय ॥ २ ॥

ಯಾಜ್ಞವಲ್ಕ್ಯ ಮುನಿಯು ಮಹಾಭಕ್ತಿಯಿಂದ ಶಿವನನ್ನು ಸ್ತೋತ್ರಮಾಡಿದನು.

ಯಾಜ್ಞವಲ್ಕ್ಯನು ಅಂದನು

ಜಗತ್ತಿಗೆ ಒಡೆಯನಾದ ಹೆ ವೀರಭದ್ರ, ವಿಭುವೇ, ದಕ್ಷಯಜ್ಞ ಸಂಹಾರದಿಂದ ಜಗತ್ತಿಗೆ ಹಿತಾರ್ಥವನ್ನು ಕೊಟ್ಟವನೇ, ಚಂದ್ರಭೂಷಣನೇ, ಭುಕ್ತಿಮುಕ್ತಿಗಳನ್ನು ಕೊಡುವವನೇ, ಕೃಷ್ಣವೇಣಿತಟದಲ್ಲಿ ಇರುವವನೇ. ೨

हराय त्र्यंबकेशाय निजभक्तिप्रदाय च ।
दर्शनान्मुक्तिदात्रे ते वीरभद्र नमो नमः ॥ ४ ॥

ಮೂರುಕಣ್ಣುಳ್ಳ ಹರನೇ, ವೀರಭದ್ರನೇ, ನಿಜವಾದ ಭಕ್ತಿಯನ್ನು ಕೊಡುವವನೇ, ನಿನಗೆ ನಮಸ್ಕಾರವು. ೪

स्तुत्वैवं वीरभद्रं तं याज्ञवल्क्यो महामुनिः ।
व्यासेन सहितो भेजे पूजनं तच्चकार ह ॥ ५ ॥

ಹೀಗೆ ಮಹಾಮುನಿಯಾದ ಯಾಜ್ಞವಲ್ಕ್ಯನು ವೀರಭದ್ರನನ್ನು ಸ್ತೋತ್ರಮಾಡಿ, ವ್ಯಾಸರಿಂದ ಸಹಿತನಾಗಿ ಭಜಿಸಿದನು ಮತ್ತು ಪೂಜಿಸಿದನು. ೫

रुद्रानुवाकैरुत रुद्रसूक्तैः श्रीरुद्रियैः व्यासविधिप्रयोगैः ।
श्रीवीरभद्रं सहसोपचारैः संस्नाप्य पंचामृतमंत्रपूतैः ॥ ६ ॥

ರುದ್ರಾನುವಾಕಗಳಿಂದ, ರುದ್ರಸೂಕ್ತಗಳಿಂದ, ನ್ಯಾಸವಿಧಿ ಪ್ರಯೋಗಗಳಿಂದ ರುದ್ರಮಂತ್ರಗಳಿಂದ ವೀರಭದ್ರನನ್ನು ಪಂಚಾಮೃತಗಳಿಂದಲೂ ಸ್ನಾನ ಮಾಡಿಸಿ, ೬

श्रीचंदनैः कृष्णसारैः पुष्पैः धूपैः सदीपकैः ।
नैवद्यैः विविधैः भोगैः नमस्कारैः यथाविधि ॥ ७ ॥

ಚಂದನಗಳಿಂದ, ಕೃಷ್ಣಸಾರಗಳಿಂದ, ಪುಷ್ಪ, ಧೂಪ, ದೀಪ, ನೈವೇದ್ಯ, ವಿವಿಧ ಭೋಗಗಳು, ನಮಸ್ಕಾರಗಳು ಇವುಗಳಿಂದ ಯಥಾವಿಧಿಯಾಗಿ, ೭

तपस्ययैवं संपूज्य गृहीत्वा ज्ञानमुत्तमम् ।
व्यासेन सहितो यायात् कृष्णवेणीं पुनर्मुनिः ॥ ८ ॥

ತಪಸ್ಸಿನಿಂದ ಪೂಜಿಸಿ, ಉತ್ತಮಜ್ಞಾನವನ್ನು ಪಡೆದು ಕೊಂಡು, ವ್ಯಾಸರಿಂದ ಕೂಡಿಕೊಂಡು ಮತ್ತೆ ಕೃಷ್ಣವೇಣಿಗೆ ಹೋದರು. ೮

लिंगतीर्थे त संस्नाप्य रुद्रतीर्थमथोऽभ्यगात

ತೀರ್ಥದಲ್ಲಿ ಸ್ನಾನಮಾಡಿ. ೧೦

संपूज्य परया भक्त्या कृष्णवेण्यां मुनीश्वरौ ।
तीर्थे पाराशरे गत्वा नित्यकर्म समाप्य च ॥ ११ ॥

ಮಹಾಭಕ್ತಿಯಿಂದ ಮುನೀಶ್ವರರು ಪೂಜಿಸಿ, ಕೃಷ್ಣವೇಣಿಯಲ್ಲಿರುವ ಪಾರಾಶರ ತೀರ್ಥಕ್ಕೆ ಹೋಗಿ ನಿತ್ಯಕರ್ಮ ಮುಗಿಸಿ. ೧೧

पराशराभिधं लिंगं जले दृष्टं महत्तरम् ।
जाज्वल्यरूपं तपसा सर्वकामफलप्रदम् ॥ १२ ॥

ನೀರಿನಲ್ಲಿ ಪ್ರಕಾಶಮಾನವಾದ ಎಲ್ಲರ ಇಷ್ಟಫಲ ಕೊಡುವ ಮಹಾಲಿಂಗವನ್ನು ತಪಸ್ಸಿನಿಂದ ನೀರಿನಲ್ಲಿ ನೋಡಿ. ೧೨

संपूज्य याज्ञवल्क्यं च व्यास ऊचे कथानकम् ।

व्यास उवाच–

याज्ञवल्क्य निबोधेद इतिहासं पुरातनम् ॥ १३ ॥

ಪೂಜಿಸಿ, ವ್ಯಾಸರು ಯಾಜ್ಞವಲ್ಕ್ಯರನ್ನು ಕುರಿತು ಈ ಕಥೆ ಹೇಳಿದರು.

ವ್ಯಾಸರು ಅಂದರು.

ಯಾಜ್ಞವಲ್ಕ್ಯನೇ ! ಈ ಪ್ರಾಚೀನವಾದ ಇತಿಹಾಸವನ್ನು ಕೇಳಿ. ೧೩

कल्पांते मत्पिता पूर्वं तपश्चक्रे सुदारुणम् ।
सूर्यमंडलमध्यस्थं हरिं पश्यन् सतां प्रभुम् ॥ १४ ॥

ಕಲ್ಪದ ಕೊನೆಗೆ ನಮ್ಮ ತಂದೆಯು ಅತ್ಯಂತ ದಾರುಣವಾದ ತಪಸ್ಸನ್ನು ಮಾಡಿದನು. ಸಜ್ಜನರಿಗೆ ಒಡೆಯನಾದ ಸೂರ್ಯ ಮಂಡಲದಲ್ಲಿರುವ ಹರಿಯನ್ನು ನೋಡುತ್ತ. ೧೪

शैलवन्निश्चलो भूत्वा बहुकालं समाधिना ।

ಕುಂಡಲ, ಕವಚ, ವನಮಾಲಾದಿಗಳಿಂದ ವಿರಾಜಿತನಾದ. ೧೬

मेघश्यामं प्रसन्नास्यं चारुसर्वांगमंडनम् ।
एवं बहुतिथे काले तपसा ह्यतिकर्शितः ॥ १७ ॥

ಮೇಘದಂತೆ ಶ್ಯಾಮವರ್ಣನಾದ ಪ್ರಸನ್ನ ಮುಖ ಉಳ್ಳ ಸುಂದರ ಸರ್ವಾಂಗಗಳಲ್ಲಿ ಅಲಂಕಾರ ಧರಿಸಿದ ಹರಿಯನ್ನು ಧ್ಯಾನಿಸಿದನು (ಇತಿ ಪೂರ್ವಾನ್ವಯ) ಹೀಗೆ ಅನೇಕ ಸಮಯ ಕಳೆಯಲು ತಪಸ್ಸಿನಿಂದ ಅತ್ಯಂತ ಕೃಶರಾದರು. ೧೭

अस्तिमात्रं वर्ष्म दृष्ट्वा शंकरे हि दयान्वितः ।
अग्रे मुनेः तदा तस्थौ वरं दातुं यदा पुनः ॥ १८ ॥

ಅಸ್ಥಿ ಮಾತ್ರ ಇರುವ ಶರೀರವನ್ನು ನೋಡಿ ದಯಾಯುಕ್ತನಾದ ಶಂಕರನು ಮುನಿಯ ಎದುರಿನಲ್ಲಿ ನಿಂತು ವರಕೊಡಲು ಹೊರಟಾಗ. ೧೮

श्रीमहादेव उवाच –

ಮಹಾದೇವನು ಅಂದನು –

धन्योऽसि कृतकृत्योऽसि वरं वरय सुव्रत ।
तपसा तव संतुष्टो वरान् दातुमिहागतः ॥ १९ ॥

ಎಲೈ ವ್ರತ ಉಳ್ಳವನೇ ! ನೀನು ವಂದ್ಯನು ಹಾಗೂ ಕೃತಕೃತ್ಯನು. ನಿನ್ನ ತಪಸ್ಸಿಗೆ ಸಂತುಷ್ಟನಾಗಿ ವರಗಳನ್ನು ಕೊಡಲು ಇಲ್ಲಿ ಬಂದಿದ್ದೇನೆ. ೧೯

इत्युक्तवंतं श्रीकंठं प्रोवाचेदं पराशरः ।
हरिरूपं हरं जाने शिवं नारायणात्मकम् ॥ २० ॥

ಹೀಗೆ ಹೇಳಿದ ಶಿವನಿಗೆ ಪರಾಶರನು ಅಂದನು. ನಾರಾಯಣನಲ್ಲಿ ಮನಸ್ಸುಳ್ಳ ಹೇ ಶಿವನೇ ! ನೀನು ಭಗವತ್ಸನ್ನಿಧಾನ ಪಾತ್ರನು. ೨೦

तथापि देवदेवेश नारसिंहं विना वरम् ।
[illegible] ॥ २१ ॥

शीघ्रं ते दास्यति हरिः दर्शनं भक्तवत्सलः ।
इत्युक्त्वा शंकरो लिंगे लीनोऽभूज्जलसंप्लवे ॥ २३ ॥

ಭಕ್ತವತ್ಸಲನಾದ ಶ್ರೀಹರಿಯು ನಿನಗೆ ಶ್ರೀಘ್ರದಲ್ಲಿಯೇ ದರ್ಶನ ಕೊಡುತ್ತಾನೆ ಎಂದು ಹೇಳಿ ಶಂಕರನು ನೀರಿನಲ್ಲಿರುವ ಲಿಂಗದಲ್ಲಿ ಅದೃಶ್ಯನಾದನು. ೨೩

यदा पुनस्तदा भक्त्या तपः कर्तुं पराशरः ।
नारसिंहं तदा ध्यायन् कृष्णातीरे मुनीश्वरः ॥ २४ ॥

ಆವಾಗ್ಗ ಮುನೀಶ್ವರನಾದ ಪರಾಶರನು ಭಕ್ತಿಯಿಂದ ನೃಸಿಂಹನನ್ನು ಧ್ಯಾನ ಮಾಡುತ್ತ ಕೃಷ್ಣಾತೀರದಲ್ಲಿ ತಪಸ್ಸು ಮಾಡಲು ಸುರು ಮಾಡಿದನು. ೨೪

कोटिसूर्य प्रतीकाशं तेजोमंडलमध्यगम् ।
ब्रह्मादिसिद्धसंघातैः संसेवितपदांबुजम् ॥ २५ ॥

ಕೋಟಿ ಸೂರ್ಯನಂತೆ ಹೊಳೆಯುವ, ತೇಜೋಮಂಡಲ ಮಧ್ಯದಲ್ಲಿರುವ, ಬ್ರಹ್ಮದೇವನೇ ಮೊದಲಾದ ಸಿದ್ಧಸಮುದಾಯದಿಂದ ಸಂಸೇವಿತ ಪಾದಕಮಲ ಉಳ್ಳ, ೨೫

नूपुरैः भूषितपदं पीनदोर्दंडमंडितम् ।
सप्तपातालसल्लग्नजानुयुगमं तपोमयम् ॥ २६ ॥

ನೂಪುರಗಳಿಂದ ಭೂಷಿತವಾದ ಕಾಲು, ಪುಷ್ಟವಾದ ದೋರ್ದಂಡಗಳಿಂದ ಅಲಂಕೃತನಾದ ಸಪ್ತಪಾತಾಲಗಳಲ್ಲಿ ಸಂಬದ್ಧವಾದ ಜಾನುಯುಗಲ ಉಳ್ಳ ತಪೋಮಯನಾದ, ೨೬

किंकिणीजालशोभाढ्यं कटिसूत्रसुशोभितम् ।
तपोमयहृदाकाशं ब्रह्मांडांतस्थितं विभुम् ॥ २७ ॥

ಕಿರು ಗಂಟೆಗಳ ಸಾಲುಗಳಿಂದ ಶೋಭಿತವಾದ ಕಟಿಸೂತ್ರ (ಉ ದಾರ) ದಿ

ಪ್ರಕಾಶಮಾನವಾದ ಹದಿನಾರು ಭುಜಗಳಿಂದ ಹಾಗೂ ಪೀತಾಂಬರದಿಂದ ಅಲಂಕೃತನಾದ ಶಂಖ, ಚಕ್ರ, ಗದಾ, ಪದ್ಮ, ಶಾರ್ಙ್ಗ, ಪಾಶ, ಖಡ್ಗ, ಕುಂತ. ೨೮

वरदाभयपीयूष पात्रचर्मधरैः शुभैः ।
अक्षमालादिसहित-यज्ञसूत्रैः सुखेटकैः ॥ २९ ॥

ವರದ ಅಭಯ, ಪೀಯೂಷಪಾತ್ರ ಚರ್ಮಗಳನ್ನು ಧರಿಸಿದ ಮಂಗಳಕರವಾದ ಅಕ್ಷಮಾಲಾದಿಗಳಿಂದ ಸಹಿತವಾದ ಯಜ್ಞಕ್ಷೇತ್ರ, ಖೇಟ. ೨೯

एतैरायुधजालैश्च सुशोभिकरमंडलम् ।
श्रीवत्सलांछनोपेतं वनमालाविराजितम् ॥ ३० ॥

ಇವೇ ಮೊದಲಾದ ಆಯುಧ ಸಮುದಾಯಗಳಿಂದ ವಿರಾಜಮಾನವಾದ ಕರಸಮುದಾಯ ಉಳ್ಳ, ಶ್ರೀವತ್ಸ ಎಂಬ ಚಿನ್ಹದಿಂದ ಕೂಡಿದ ವನಮಾಲೆಯಿಂದ ವಿರಾಜಿತನಾದ. ೩೦

ज्वलन्मणिशिखाव्याप्तमुकुटाटोपशोभितम् ।
पद्मपत्रेक्षणं शांतं मकराकारकुंडलम् ॥ ३१ ॥

ಪ್ರಜ್ವಲಿತವಾದ ಮಣಿಗಳ ಕಾಂತಿಯಿಂದ ವ್ಯಾಪ್ತವಾದ ಮುಕುಟದಿಂದ ಅಲಂಕೃತನಾದ ಪದ್ಮಪತ್ರದಂತೆ ಕಣ್ಣುಳ್ಳ, ಶಾಂತನಾದ, ಮಕರಾಕಾರವಾದ ಕುಂಡಲ ಉಳ್ಳ. ೩೧

कंठे हिरण्यकशिपोः असुरस्य इतस्ततः ।
आंत्रमालाधरं देवं वरदानैकशेवधिम् ॥ ३२ ॥

ಕಂಠದಲ್ಲಿ ಅತ್ತಿತ್ತ ಹಿರಣ್ಯಕಶಿಪು ಎಂಬ ದೈತ್ಯನ ಕರುಳುಮಾಲೆಯನ್ನು ಧರಿಸಿದ ವರಕೊಡುವವರಿಗೆ ಅವಧಿಭೂತನಾದ. ೩೨

ददर्श रूपं सहसा प्रणम्य भुवि सादरः ।
अद्य मे सफलं जन्म तपो मे सफलं तथा ॥ ३३ ॥

ಶ್ರೀನೃಸಿಂಹನ ರೂಪವನ್ನು ನೋಡಿ ಒಮ್ಮೆಲೇ ಆದರದಿಂದ ನಮಿಸಿ, ಇಂದು ನನ್ನ

ಹೇ ಮಹಾಬುದ್ಧಿಯುಳ್ಳ ಪರಾಶರನೇ ! ನಿನಗೆ ಇಷ್ಟವಾದ ವರ ಕೊಡಲು ನಾನು ಬಂದಿದ್ದೇನೆ. ದೇವತೆಗಳಿಗೂ ದುರ್ಲಭವಾದ ವರವನ್ನು ಇಂದು ಕೇಳು. ೩೫

पराशर उवाच –

राज्यं स्वर्गोपवर्गो वा नश्वरं नृहरे यतः ।
अयमेव वरोऽस्माकं भवान् पुत्रो भवाशु मे ॥ ३६ ॥

ಪರಾಶರರು ಅಂದರು

ಹೇ ನೃಸಿಂಹನೇ !ರಾಜ್ಯ, ಸ್ವರ್ಗ, ಜನೋಲೋಕಾದಿಗಳು ನಶ್ವರವಾದ್ದರಿಂದ ನೀನೇ ನನಗೆ ಮಗನಾಗು ಬೇಗನೇ. ಇದೇ ನನ್ನ ವರವು ಎಂದು ಅಂದನು. ೩೬

तथेत्युक्त्वा नारसिंहो निजभक्तजनप्रियः ।
भविष्यामि मुने पुत्रस्तपसा ते सुतोषितः ॥ ३७ ॥

ತನ್ನ ಭಕ್ತಜನರಿಗೆ ಪ್ರಿಯವಾದ ನಾರಸಿಂಹನು ಹಾಗೇ ಆಗಲಿ. ಹೇ ಮುನಿಯೇ ! ನಿನ್ನ ತಪಸ್ಸಿನಿಂದ ನಾನು ಅತ್ಯಂತ ಸಂತುಷ್ಟನಾಗಿದ್ದೇನೆ. ನಿನ್ನ ಮಗನಾಗುವೆ. ೩೭

ये पठंतीदमाख्यानं नृहरेर्वरदायकम् ।
श्रुणुयात् श्रावयेद्वा यः स नृसिंहप्रियो भवेत् ॥ ३८ ॥

ನೃಸಿಂಹನು ವರಕೊಟ್ಟ, ಈ ಆಖ್ಯಾನವನ್ನು ಯಾರು ಪಠಿಸುವರೋ ಯಾರು ಕೇಳುವರೋ ಯಾರು ಹೇಳುವರೋ ಅವರು ನೃಸಿಂಹ ದೇವರಿಗೆ ಪ್ರಿಯರಾಗುವರು. ೩೮

॥ इति श्री स्कांदे कृष्णामाहात्म्ये नृसिंहकथानिरूपणं नाम
सप्तत्रिंशतितमोऽध्यायः ॥

❀ ❀ ❀

श्रृणुध्वं मुनयः सर्वे याज्ञ्यवल्क्यो महामुनिः ।
व्यासं पप्रच्छ तच्चित्रं सेतिहासं कथानकम् ॥ १ ॥

ಎಲೈ ಮುನಿಗಳೇ! ಕೇಳಿರಿ. ಮಹಾಮುನಿಯಾದ ಯಾಜ್ಞವಲ್ಕ್ಯನು ವ್ಯಾಸರಿಗೆ ಆಶ್ಚರ್ಯಕರ ಪ್ರಾಚೀನ ಕಥೆಯನ್ನು ಕೇಳಿದನು. ೧

वक्तव्या भवता व्यास स्वोत्पत्तिः निर्व्यलीकतः ।
कल्पांते यदभूत्पूर्वं दयया सर्वमादृतः ॥ २ ॥

ನಿರ್ವ್ಯಾಜವಾಗಿ ನಿಮ್ಮ ಜನ್ಮ ಹೇಗಾಯಿತು ?ಎಂಬುದನ್ನು, ಕಲ್ಪದ ಕೊನೆಗೆ ಹಿಂದೆ ಏನಾಯಿತು, ಎಂಬುದನ್ನು, ದಯೆಯಿಂದ ಹೇ ಆದೃತರಾದ ವ್ಯಾಸರೇ! ತಾವು ಹೇಳಬೇಕು. ೨

व्यास उवाच –

ವ್ಯಾಸರು ಅಂದರು –

श्रृणु चैकमनाः स्वामिन् विचित्रं सुमनोहरम् ।
स्वोत्पत्तिं ते समाख्यास्ये सर्वलोकहितावहम् ॥ ३ ॥

ಒಂದೇ ಮನಸ್ಸಿನಿಂದ ವಿಚಿತ್ರವೂ ಮನೋಹರವೂ ಆದ ಎಲ್ಲ ಲೋಕಕ್ಕೆ ಹಿತಕರವಾದ ನನ್ನ ಜನ್ಮವನ್ನು ಹೇಳುವೆ. ಸ್ವಾಮಿ!ಏಕಾಗ್ರನಾಗಿ ಕೇಳಿ. ೩

स्वाश्रमे निवसन्नेवं कदाचिन्मुनिसत्तमः ।
कृष्णावेण्यां गतः स्नातुं सपत्नीकः पराशरः ॥ ४ ॥

ನನ್ನ ಆಶ್ರಮದಲ್ಲಿ ಇರುವಾಗ ಒಂದು ದಿನ ಮುನಿಶ್ರೇಷ್ಠರಾದ ಪರಾಶರರು ಹೆಂಡತಿಯಿಂದ ಕೂಡಿಕೊಂಡು ಕೃಷ್ಣವೇಣಿಯಲ್ಲಿ ಸ್ನಾನಕ್ಕೆ ಹೋದರು. ೪

तां पुण्यवाहिनीं गत्वा साक्षात् विष्णुस्वरूपिणीम् ।
सस्नौ तस्यास्तटे कृष्णाजिने चोपविवेश सः ॥ ५ ॥

स्नानार्थं तज्जले याता मत्स्यद्वंद्वं ददर्श सा ।
स्वप्रजासहितं तत्र रममाणं सकौतुकम् ॥ ७ ॥

ಸ್ನಾನಕ್ಕಾಗಿ ಹೋದಳು. ಮತ್ತು ಅವಳು ನೀರಿನಲ್ಲಿ ಎರಡು ಮೀನುಗಳನ್ನು ತಮ್ಮ ಪ್ರಜೆಗಳಿಂದ ಕೂಡಿ ರಮಿಸುವುದನ್ನು ಕುತೂಹಲದಿಂದ ನೋಡಿದಳು. ೭

कामयुक्ता तदा मेने मत्स्यजन्मसुखावहम् ।
तावत् कालोऽतिचक्राम कंपं याता मुनेर्भयात् ॥ ८ ॥

ಕಾಮಯುಕ್ತಳಾದ ಅವಳು ಮೀನಿನ ಜನ್ಮವೇ ಸುಖಕರವೆಂದು ತಿಳಿದಳು. ಅಷ್ಟರಲ್ಲಿ ಕಾಲವು ಕಳೆಯಿತು. ಮುನಿಗಳ ಭಯದಿಂದ ಆಕೆಗೆ ಕಂಪವು ಉಂಟಾಯಿತು. ೮

जातो विलंबः किमिति तां शशाप पराशरः ।
ज्ञानदृष्ट्या मत्स्यरत्यामासक्तं हृदयं तव ॥ ९ ॥

ಪರಾಶರರು ತಡವೇಕೆ ಮಾಡಿದಿ. ಎಂದು, ಜ್ಞಾನದೃಷ್ಟಿಯಿಂದ, ಮೀನದ ವಿಹಾರದಲ್ಲಿ ನಿನ್ನ ಹೃದಯವು ಆಸಕ್ತವಾಗಿದೆ. ಆದ್ದರಿಂದ. ೯

शमाप्नु हि तदेव त्वं मत्स्यजन्म मुदावहम् ।
इति शापाद्धि सा भीता पादौ धृत्वा मुनेर्मुहुः ॥ १० ॥

ನಿನಗೆ ಸಂತೋಷಕರವಾದ ಮತ್ಸ್ಯಜನ್ಮವನ್ನೇ ತಾಳು ಎಂದು ಶಪಿಸಿದರು. ಆಗ ಶಾಪದಿಂದ ಭೀತಳಾದ ಅವಳು ಮುನಿಯ ಪಾದಗಳನ್ನು ಹಿಡಿದು ಮತ್ತೆ ಮತ್ತೆ, ೧೦

उच्छापं कुरु मां नाथ अपराधं क्षमस्व भो ।
अनिवार्यं खिलैतद्धि मानसं प्रियपातकम् ॥ ११ ॥

ನನ್ನನ್ನು ಶಾಪರಹಿತಳನ್ನಾಗಿ ಮಾಡು. ಹೇ ನಾಥನೇ ! ನನ್ನ ಅಪರಾಧವನ್ನು ಕ್ಷಮಿಸು. ಹೇ ಪ್ರಿಯನೇ ! ಮನಸ್ಸಿನ ಈ ಪಾಪವು ಅನಿವಾರ್ಯವಾದುದು. ೧೧

अल्पपातकतया मे शिक्षा हि महती कृता ।

ಸತ್ಯವತಿಯು ಹೇಳಿದ ಆ ವಾಕ್ಯವನ್ನು ಕೇಳಿದ, ದೀನರ ಮೇಲೆ ದಯಮಾಡುವ ಅವರು ಕೃಪಾಯುಕ್ತರಾಗಿ ಅಂದರು. ೧೩

पराशर उवाच –

**ಪರಾಶರರು ಅಂದರು –**

श्रृणु भद्रे वचो मत्तः किंचिदुक्तं न तन्मृषा।
भवेत्तथापि कृपया ब्रुवे शापविमोचनम् ॥ १४ ॥

ಹೇ ಮಂಗಲಕರಳೇ ! ನನ್ನ ಮಾತು ಯಾವುದೇ ಹೇಳಿದ್ದರೂ ಸುಳ್ಳಾಗುವದಿಲ್ಲ. ಆದರೂ ಕೂಡ ಕೃಪಾದಿಂದ ಶಾಪವಿಮೋಚನವನ್ನು ಹೇಳುವೆ. ೧೪

मत्स्यगर्भेऽपि ते जन्म स्यान्मानुष्यं सुदुर्लभम्।
महात्मनो वचस्तथ्यं त्वमवेहि पतिव्रते ॥ १'; ॥

ಮತ್ಸ್ಯದ ಉದರದಲ್ಲಿ ನೀನು ಬಂದರೂ, ನಿನಗೆ ದುರ್ಲಭವಾದ ಮಾನುಷ್ಯವು ಬರುತ್ತದೆ. ಹೇ ಪತಿವ್ರತೆಯೇ ! ಮಹಾತ್ಮರ ಮಾತು ಸತ್ಯವೆಂದು ತಿಳಿ. ೧೫

सत्यवत्युवाच –

**ಸತ್ಯವತಿಯು ಅಂದಳು –**

तपसाऽऽराधितो विष्णुः भवता करुणात्मना।
भवतस्तपसो वीर्यात् मय्येवास्तां महान् सुतः ॥ १६ ॥

ಕರುಣಾಮಯರಾದ ತಾವು ತಪಸ್ಸಿನಿಂದ ವಿಷ್ಣುವನ್ನು ಆರಾಧಿಸಿದ್ದೀರಿ. ನಿಮ್ಮ ತಪಃ ಸಾಮರ್ಥ್ಯದಿಂದ ಹುಟ್ಟುವ ಮಹಾಪುತ್ರನು ನನ್ನಲ್ಲೇ ಜನಿಸಲಿ. ೧೬

पराशरस्तदा वाक्यं प्रियायाः श्रुतवान् मुदा।
तथा भवतु मत्तस्त्वय्यास्तां कामप्रदः सुतः ॥ १७ ॥

ಶ್ರೇಷ್ಠತೀರ್ಥ ವಾಯಿತು. ೧೮

मंजुलेशं तत्र जातं लिंगं कृष्णातटे शुभम् ।
दर्शनात् सर्वपापघ्नं दुष्टानां गतिदायकम् ॥ १९ ॥

ಅಲ್ಲಿಯೇ ಕೃಷ್ಣಾತಟದಲ್ಲಿ ಮಂಜುಲೇಶ ಎಂಬ ಲಿಂಗವು ಆಯಿತು. ದರ್ಶನದಿಂದಲೇ ಎಲ್ಲ ಪಾಪವನ್ನು ನಾಶಮಾಡುವ ದುಷ್ಟರಿಗೂ ಗತಿಕೊಡುವಂತಹುದು. ೧೯

मंजुले तीर्थवर्ये यः स्नानं कुर्यात् यथाविधि ।
दानं जपं यथा शक्त्या गतिं प्राप्नोति दुर्लभम् ॥ २० ॥

ಮಂಜುಲ ಎಂಬ ಶ್ರೇಷ್ಠತೀರ್ಥದಲ್ಲಿ ಯಾರು ಯಥಾವಿಧಿ ಸ್ನಾನ ಮಾಡುವರೋ ಯಥಾಶಕ್ತಿ ದಾನ ಜಪಗಳನ್ನು ಮಾಡುವರೋ ಅವರು ದುರ್ಲಭವಾದ ಗತಿಯನ್ನು ಹೊಂದುವರು. ೨೦

॥ इति श्री स्कांदे कृष्णामाहात्म्ये मंजुलतीर्थवर्णनं नाम
अष्टत्रिंशतितमोऽध्यायः ॥

❀ ❀ ❀

## ॥ अथ एकोनचत्वारिंशोऽध्यायः ॥

याज्ञवल्क्य उवाच –

ಯಾಜ್ಞವಲ್ಕ್ಯರು ಅಂದರು –

भवता त्वत्पितुः प्रोक्तः प्रभावो विस्मयावहः ।
त्वन्मातुः मत्स्यजातौ तु नृजन्माभूत् कथं मुने ॥ १ ॥

ತಾವು ತಮ್ಮ ತಂದೆಯವರ ಆಶ್ಚರ್ಯಕರ ಪ್ರಭಾವವನ್ನು ಹೇಳಿದಿರಿ.

ವಲ್ಲವನ್ನು ಹೇಳಿರಿ. ೨

व्यास उवाच –

ವ್ಯಾಸರು ಅಂದರು –

साधु पृष्टं याज्ञवल्क्य जनकस्य निवेशनम् ।
गमिष्यामि तदाह्वानात् यज्ञार्थं सत्वरे मुने ॥ ३ ॥

ಹೇ ಯಾಜ್ಞವಲ್ಕ್ಯರೇ! ಒಳ್ಳೇದು ಕೇಳಿದಿ! ಆದರೆ ಅವರೇ ಕರೆದದ್ದರಿಂದ ಯಜ್ಞಕ್ಕಾಗಿ ತಂದೆಯ ಮನೆಗೇ ನಾನು ಗಡಿಬಿಡಿಯಿಂದ ಹೊರಟಿದ್ದೇನೆ. ೩

श्रोतुमिच्छसि चेद्वृत्तं कृष्णामाहात्म्यमप्युत ।
उत्तंकस्याश्रमं गत्वा परिपृच्छ हि तं मुनिम् ॥ ४ ॥

ನೀವು ಈ ವೃತ್ತಾಂತವನ್ನು ಕೇಳಬೇಕೆಂದು ಹಾಗೂ ಕೃಷ್ಣಾಮಾಹಾತ್ಮ್ಯವನ್ನು ಕೇಳಬೇಕೆಂದೂ ಇಚ್ಛಿಸುತ್ತಿದ್ದರೆ, ಉತ್ತಂಕರ ಆಶ್ರಮಕ್ಕೆ ಹೋಗಿ, ಆ ಮಹಾಮುನಿಯನ್ನು ಕೇಳಿರಿ. ೪

कृष्णातटस्थं सर्वज्ञं शापानुग्रहकारकम् ।
इत्युक्त्वाऽन्योन्यमाश्लिष्य बाष्पमुज्जहतुर्मुनी ॥ ५ ॥

ಅವರು ಕೃಷ್ಣಾತಟವಲ್ಲಿದ್ದು ಶಾಪಾನುಗ್ರಹವನ್ನು ಮಾಡುವವರೂ, ಸರ್ವಜ್ಞರೂ, ಇರುವರು. ಹೀಗೆ ಹೇಳಿ, ಆ ಮುನಿಗಳು ಪರಸ್ಪರ ಆಲಿಂಗನಮಾಡಿಕೊಂಡು ಆನಂದಾಶ್ರುಗಳನ್ನು ಉದುರಿಸಿದರು. ೫

साधुदर्शनजं पुण्यं वर्णयित्वा पुनः पुनः ।
याज्ञ्यवल्क्यं ततो नत्वा विदेहमगमन्मुनिः ॥ ६ ॥

ಮತ್ತೆ ಮತ್ತೆ ಸಜ್ಜನದರ್ಶನದಿಂದ ಉಂಟಾಗುವ ಪುಣ್ಯವನ್ನು ವರ್ಣಿಸುತ್ತ ಯಾಜ್ಞವಲ್ಕ್ಯರಿಂದ ನಮಸ್ಕೃತರಾಗಿ ವಿದೇಹಕ್ಕೆ ವ್ಯಾಸಮುನಿಗಳು ಹೋದರು. ೬

याज्ञ्यवल्क्यः तमुत्तंकं कृष्णातीरनिवासिनम्

ಜನರಿಂದ ಸಹಿಸಲು ಅಸಾಧ್ಯನಾದ ಮೂಢನಾದ ಧುಂಧು ಎಂಬ ದೈತ್ಯನ ವಧೆಯನ್ನು ಸಮುದ್ರನೀರಿನಲ್ಲಿ ಯೌವನಾಶ್ವನಿಂದ ಮಾಡಿಸಿ, ೮

तत्पातकविनाशार्थं सह्याद्रेः यानि सर्वतः ।
तीर्थानि यानि गंगायां दृष्ट्वा स्पृष्ट्वा स उग्रधीः ॥ ९ ॥

ಆ ಪಾಪನಾಶಕ್ಕಾಗಿ ಸಹ್ಯ ಪರ್ವತದಲ್ಲಿ ಯಾವ ಯಾವ ತೀರ್ಥಗಳಿವೆಯೋ ಗಂಗಾದಲ್ಲಿ ಯಾವ ಯಾವ ತೀರ್ಥಗಳಿವೆಯೋ ಅವುಗಳನ್ನೆಲ್ಲ ನೋಡಿ ಅಲ್ಲಿ ಸ್ನಾನ ಮಾಡಿ ಉಗ್ರವಾದ ಬುದ್ಧಿ ಉಳ್ಳ, ೯

कृष्णातीरे याम्यभागे कुटीं चक्रे तदा मुनिः ।
तुलसीमंजरीभिश्च सहितां स हरेर्मुनिः ॥ १० ॥

ಆ ಮಹಾ ಮುನಿಗಳು ಕೃಷ್ಣಾತೀರದ ದಕ್ಷಿಣ ಭಾಗಕ್ಕೆ ಗುಡಿಸಲು ಕಟ್ಟಿಕೊಂಡು ತುಲಸೀಮಂಜರಿಗಳಿಂದ ಸಮೇತವಾದ ಶ್ರೀಹರಿಯ, ೧೦

प्रत्यहं चाकरोत् पूजां स्नात्वा कृष्णाजलेन्वहम् ।
यतः समंजरीजालैः तुलस्याः तत्र पूजितः ॥ ११ ॥

ಪೂಜೆಯನ್ನು ನಿತ್ಯ ಕೃಷ್ಣಾಜಲದಲ್ಲಿ ಸ್ನಾನಮಾಡಿ ಪ್ರತಿನಿತ್ಯವೂ ಮಾಡಿದನು. ತುಲಸೀ ಮಂಜರಿಗಳಿಂದ ಅಲ್ಲಿ ಶ್ರೀ ಹರಿಯು ಪೂಜಿತನಾದ್ದರಿಂದ, ೧೧

हरिस्तन्मंजरीतीर्थं जातं तत्र ऋषेस्तपात् ।
तीर्थे स्नात्वा दैवयोगात् मंजरीशं च योऽर्चयेत् ॥ १२ ॥

ಆ ಋಷಿಯ ತಪಃ ಪ್ರಭಾವದಿಂದ ಅದು ಮಂಜರೀತೀರ್ಥ ಎಂದು ಪ್ರಸಿದ್ಧವಾಯಿತು. ತೀರ್ಥದಲ್ಲಿ ಸ್ನಾನಮಾಡಿ ದೈವಯೋಗದಿಂದ ಮಂಜರೀಶನನ್ನು ಯಾರು ಪೂಜಿಸುವರೋ, ೧೨

कोटिमंजिरिसंघैश्च पूजनं कृतमंजसा ।

ಹೀಗೆ ಯಾಜ್ಞವಲ್ಕ್ಯರು ತಿಳಿದು, ಆ ತೀರ್ಥದಲ್ಲಿ ಸ್ನಾನ ಮಾಡಿದರು. ಮುನಿಗಳು ಉತ್ತಂಕರ ಆಶ್ರಮವನ್ನು ನೋಡಲು ಗಡಬಿಡಿಯಿಂದ ಹೋದರು. ೧೪

ददर्श सुखमासीनं ध्यानयोगसमन्वितम्।
वपुः सुतपसा दीप्तं धारयंतं मुनीश्वरम् ॥ १५ ॥

ಧ್ಯಾನಯೋಗದಿಂದ ಯುಕ್ತರಾದ, ಸುಖವಾಗಿ ಕುಳಿತುಕೊಂಡ, ತಪಸ್ಸಿನಿಂದ ದೀಪ್ತವಾದ ಶರೀರ ಉಳ್ಳ, ಈಶ್ವರನನ್ನು ಧ್ಯಾನಮಾಡುವ, ಮುನಿಗಳನ್ನು ನೋಡಿದರು. ೧೫

धन्योयमिति संचित्य धन्योऽहमिति चावदत्।
साधूनां दर्शनात् यांति चेतांसि स्वच्छतां यतः ॥ १६ ॥

ಇವರು ಧನ್ಯರೆಂದು ಯೋಚಿಸಿ ಸಜ್ಜನರ ದರ್ಶನದಿಂದ ಮನಸ್ಸು ಸ್ವಚ್ಛವಾಗುವವಾದ್ದರಿಂದ ನಾನು ಧನ್ಯನೆಂದು ಅಂದರು. ೧೬

तीर्थीभूतानि तीर्थानि भुवनांतर्गतानि च।
भौमतीर्थे बहिः शुद्धिः महापातकिनां किल ॥ १७ ॥

ಭೂಮಿಯಲ್ಲಿರುವ ಎಲ್ಲ ತೀರ್ಥಗಳು ಪವಿತ್ರವಾದುವುಗಳು. ಆದರೆ ಮಹಾಪಾತಕಿಗಳು ಸ್ನಾನಮಾಡಿದಾಗ ಅವರ ಬಾಹ್ಯಶರೀರ ಶುದ್ಧವಾಗುವದು. ೧೭

साधुसंगसमुद्भूतं पुण्यं तीर्थोत्तमं विदुः।
मनोनैर्मल्यमायाति चापं नश्यति तत्क्षणात् ॥ १८ ॥

ಸಜ್ಜನ ಸಂಗದಿಂದ ಉಂಟಾಗುವ ಪುಣ್ಯವು ಶ್ರೇಷ್ಠತೀರ್ಥವೆಂದು ಹೇಳುವರು. ಮನಸ್ಸು ನಿರ್ಮಲವಾಗುವದು. ಪಾಪವು ಅದೇ ಕ್ಷಣದಲ್ಲಿ ನಾಶವಾಗುವದು. ೧೮

इति संचित्य योगीशः तस्यांतिकमुपाययौ।
सहसोत्थाय तं दृष्ट्वा उत्तंको मुनिसत्तमः ॥ १९ ॥

ददौ योगीश्वरायाऽसौ आसनं तपसार्जितम्।
पादौ प्रक्षाल्य कृष्णायाः सलिलैः पावनैः शुभैः ॥ २१ ॥

ಯೋಗೀಶ್ವರರಾದ ಅವರಿಗೆ ತಪಸ್ಸಿನಿಂದ ಅರ್ಜಿತವಾದ ಆಸನವನ್ನು ಕೊಟ್ಟರು. ಕೃಷ್ಣಾನದಿಯ ಪವಿತ್ರ ಮಂಗಲ ಜಲಗಳಿಂದ ಕಾಲುಗಳನ್ನು ತೊಳೆದು. ೨೧

तीर्थं च जगृहे भक्त्या चंदनैः कुसुमैस्तथा।
मधुपर्कोक्तविधिना पूजयामास तं मुनिम् ॥ २२ ॥

ಭಕ್ತಿಯಿಂದ ತೀರ್ಥ ಸ್ವೀಕರಿಸಿ ಮಧುಪರ್ಕದಲ್ಲಿ ಹೇಳಿದ ರೀತಿಯಿಂದ ಚಂದನ ಹಾಗೂ ಹೂಗಳಿಂದ ಈ ಮುನಿಯನ್ನು ಪೂಜಿಸಿದರು. ೨೨

सुखोपविष्टं पप्रच्छ याज्ञ्यवल्क्यो महामुनिः।
किंचित् विज्ञप्तुकामोऽस्मि कुर्वन् यात्रां महामुने ॥ २३ ॥

ಸುಖೋಪವಿಷ್ಟರಾದ ಯಾಜ್ಞವಲ್ಕ್ಯ ಮಹಾಮುನಿಗಳು ಪ್ರಶ್ನೆ ಮಾಡಿದರು. ಒಂದು ವಿಜ್ಞಾಪಿಸಬೇಕೆಂದಿದ್ದೇನೆ. ಹೇ ಮಹಾಮುನಿಗಳೇ ! ಯಾತ್ರೆ ಮಾಡುತ್ತ, ೨೩

व्यासवाक्यादाश्रमं ते विस्मयादागतोऽस्म्यहम्।
व्यासावतारं किल वै विशेषतः त्वं वेत्सि भूमौ त्वतिचित्रतास्पदम्।
स सत्यवत्याः कथमुद्गतोऽभूत् पराशरात् ज्ञानविदां वरिष्ठात् ॥ २४ ॥

ವ್ಯಾಸರನ್ನು ಕಂಡೆ. ಅವರ ಹೇಳಿಕೆಯ ಮೇರೆಗೆ ಆಶ್ಚರ್ಯದಿಂದ ನಿಮ್ಮ ಆಶ್ರಮಕ್ಕೆ ಬಂದೆ. ನೀವು ವ್ಯಾಸಾವತಾರವನ್ನು ವಿಶೇಷವಾಗಿ ಭೂಮಿಯಲ್ಲಿ ಅತ್ಯಾಶ್ಚರ್ಯಕರವಾದದ್ದನ್ನು ತಿಳಿದಿದ್ದೀರಿ. ಜ್ಞಾನಿಶ್ರೇಷ್ಠರಾದ ಪರಾಶರರಿಂದ ಹಾಗೂ ಸತ್ಯವತಿಯಿಂದ ಅವರು ಹೇಗೆ ವ್ಯಕ್ತರಾದರು ? ೨೪

इति तद्वाक्यमाकर्ण्य याज्ञवल्क्यस्य धीमतः।
व्यासं प्रणम्य मनसा प्रवक्तुमुपचक्रमे ॥ २५ ॥

ಹೀಗೆ ಬುದ್ಧಿವಂತರಾದ ಯಾಜ್ಞವಲ್ಕ್ಯರ ಮಾತನ್ನು ಕೇಳಿ ಆ ಉತ್ತುಂಕರು ಮನಸ್ಸಿನಿಂದ ವ್ಯಾಸರನ್ನು ನಮಿಸಿ ಹೇಳಲು ಹೊರಟರು. ೨೫

पराशरस्य शापेनात्यजद्योगेन सा वपुः ।
मुनेस्तपस्विनो वीर्यात् भारद्वाजस्य योगिनः ॥ १ ॥

ಪರಾಶರರ ಶಾಪದಿಂದ ಅವಳು ಯೋಗದಿಂದ ದೇಹಬಿಟ್ಟಳು. ಭಾರದ್ವಾಜರೆಂಬ ತಪಸ್ವೀ ಯೋಗಿಯ ಮುನಿಯ ವೀರ್ಯದಿಂದ. ೧

स्नातुं गते कृष्णवेण्यां तेजश्चस्कंद निर्मलम् ।
तदा वीर्यं याज्ञवल्क्य मत्स्ययोन्यामुपाविशत् ॥ २ ॥

ಕೃಷ್ಣವೇಣಿಯಲ್ಲಿ ಸ್ನಾನಕ್ಕೆ ಹೋದಾಗ ಅವರ ನಿರ್ಮಲವಾದ ತೇಜಸ್ಸು ಸ್ಖಲಿತವಾಯಿತು. ಹೇ ಯಾಜ್ಞವಲ್ಕ್ಯರೇ !ಆ ವೀರ್ಯವು ಮತ್ಸ್ಯ ಯೋನಿಯನ್ನು ಸೇರಿತು. ೨

स मत्स्योदकवेगेन वहमानो विपुष्टधीः ।
शफर्यां तेज आधत्त दैवान्मत्स्यः तदैव हि ॥ ३ ॥

ಆ ವೀರ್ಯವನ್ನು ಗ್ರಾಸಮಾಡಿದ ಮತ್ಸ್ಯವು ನೀರಿನ ವೇಗದಿಂದ ಹೋಗುತ್ತ ಅತ್ಯಂತ ಪುಷ್ಟವಾದ ಬುದ್ಧಿ ಉಳ್ಳದ್ದಾಗಿ ದೈವಯೋಗದಿಂದ ಆಗಲೇ ಒಂದು ಮೀನಿನಲ್ಲಿ ಗರ್ಭಾಧಾನ ಮಾಡಿತು. ೩

शफरी जालकेनाथ धृता सा धीवरैस्तथा ।
शस्त्रेणापि द्विधा छिन्ना मत्स्यघातिभिरेव च ॥ ४ ॥

ಜಾಲಗಾರರು ಜಾಲದಿಂದ ಆ ಮೀನನ್ನು ಹಿಡಿದರು. ಮೀನು ತಿನ್ನುವವರು ಅದನ್ನು ಶಸ್ತ್ರದಿಂದ ಭಾಗಮಾಡಿದರು. ೪

कन्यां मत्स्योदरे दृष्ट्वा परमाश्चर्यसंयुताः ।
धीवराः स्वगृहं नीत्वा पालयामासुरादृताः ॥ ५ ॥

ಮೀನಿನ ಹೊಟ್ಟೆಯಲ್ಲಿ ಕನ್ನಿಕೆಯನ್ನು ನೋಡಿ ಮಹಾ ಆಶ್ಚರ್ಯ ಯುಕ್ತರಾದರು. ಆ ಜಾಲಗಾರರು ತಮ್ಮ ಮನೆಗೆ ತೆಗೆದುಕೊಂಡು ಹೋಗಿ ಆದರದಿಂದ ಪಾಲಿಸಿದರು. ೫

ಹೇ ಮುನೀಶ್ವರನೇ ! ಕರ್ಮಾನುರೂಪವಾಗಿ ಅವಳಿಗೆ ಬುದ್ಧಿ ಉಂಟಾಯಿತು. ಗಡ್ಡೆ ಗೆಣಸುಗಳನ್ನು ಸೇವಿಸುತ್ತ ಕೃಷ್ಣಾತೀರದಲ್ಲಿ ಯಾವಾಗಲೂ ವಾಸಮಾಡಿದಳು. ೭

दैवात्तद्वपुषि ह्यासीत् मत्स्यगंधोऽति दुःसहः ।
अतो नामांतरं तस्याः मत्स्यगंधेति भूतले ॥ ८ ॥

ದೈವಯೋಗದಿಂದ ಆಕೆಯ ಶರೀರದಲ್ಲಿ ದುಃಸಹವಾದ ಮತ್ಸ್ಯಗಂಧವು ಇದ್ದಿತು. ಆದ್ದರಿಂದ ಆಕೆಗೆ ಮತ್ಸ್ಯಗಂಧಾ ಎಂದು ಇನ್ನೊಂದು ಹೆಸರು, ಭೂಮಿಯಲ್ಲಿ ಪ್ರಸಿದ್ಧವಾಯಿತು. ೮

एवं तां पालयामासुः तीरे नौकोपजीविनः ।
पोषकस्य गृहे सा हि यौवनं समपद्यत ॥ ९ ॥

ಹೀಗೆ, ನೌಕಾದಿಂದ ಉಪಜೀವಿಸುವ ಅವರು ದಂಡೆಯಲ್ಲಿ ಆಕೆಯನ್ನು ಪಾಲಿಸಿದರು. ಹೀಗೆ ಸಾಕಿದವನ ಮನೆಯಲ್ಲಿ ಆಕೆಯು ಯೌವನವನ್ನು ಪಡೆದಳು. ೯

पोषकेणादरेणाऽथ विवाहार्थं स्वजातिषु ।
वरः संशोधितोऽत्यन्तं नानादेशोद्भवेषु च ॥ १० ॥

ಪೋಷಕನಾದವನು, ಆದರದಿಂದ ವಿವಾಹ ಮಾಡಬೇಕೆಂದು ತನ್ನ ಜಾತಿಯಲ್ಲಿ, ನಾನಾದೇಶದಲ್ಲಿ, ಹುಟ್ಟಿದವರಲ್ಲಿ ವರನ ಶೋಧವನ್ನು ಅತ್ಯಂತವಾಗಿ ಮಾಡಿದನು. ೧೦

न तथा चानुरूपस्तु वरो लब्धः कृतोद्यमैः ।
अतो विवाहविषयं न प्राप्ता मत्स्यगंधिका ॥ ११ ॥

ಇಷ್ಟು ಉದ್ಯೋಗ ಮಾಡಿದಾಗ್ಯೂ ಅನುರೂಪನಾದ ವರನು ದೊರೆಯಲಿಲ್ಲ. ಆದ್ದರಿಂದ ಮತ್ಸಗಂಧಾ ಇವಳು ವಿವಾಹವನ್ನು ಪಡೆಯದೆ, ೧೧

दुर्गंधा नाविकैर्युक्ता कृष्णावेण्यास्तटे शुभे ।
स्वोचितं तदनुज्ञातं कुर्वती तपकर्शिता ॥ १२ ॥

ನಾವಿಕರಿಂದ ಯುಕ್ತಳಾಗಿ ದುಷ್ಟಗಂಧ ಉಳ್ಳ ಅವಳು ಶುಭವಾದ ಕೃಷ್ಣವೇಣಿ

ಕೃಪಾಯುಕ್ತವಾದ ಹೃದಯ ಉಳ್ಳವರಾಗಿ ತಮ್ಮ ಕರ್ತವ್ಯವನ್ನು ಸ್ಮರಿಸುತ್ತ. ೧೩

पराशरः ततः कर्तुं सत्यमुत्तरमात्मनः ।
यत्र नौकावृत्तिकरी तत्रागच्छद्दयानिधिः ॥ १४ ॥

ತಮ್ಮ ಉತ್ತರವನ್ನು (ಉಶ್ಶಾಪ) ಸತ್ಯವನ್ನಾಗಿ ಮಾಡುತ್ತ, ಎಲ್ಲಿ ನೌಕಾವೃತ್ತಿಯನ್ನು ಮಾಡುತ್ತಿದ್ದಳೋ, ದಯಾನಿಧಿಗಳು ಅಲ್ಲಿಗೆ ಬಂದರು. ೧೪

तां दृष्ट्वा स ऋषिः प्राह नौकायां त्वं मया सह ।
स्थित्वाशु पारं नय मां तीर्त्वा कृष्णातटात् शुभे ॥ १५ ॥

ಆಕೆಯನ್ನು ನೋಡಿ ಆ ಋಷಿಗಳು, ಹೇ ಮಂಗಲಕರಳೇ ! ನೌಕೆಯಲ್ಲಿ ನನ್ನಿಂದ ಕುಳಿತುಕೊಂಡು, ಕೃಷ್ಣೆಯ ಈ ದಂಡೆಯಿಂದ ಆ ದಂಡೆಗೆ ಕರೆದುಕೊಂಡು ಹೋಗು. ಎಂದು ಅಂದರು. ೧೫

अंगीचकार दुर्गंधा पोते तं विनिवेश्य च ।
कृष्णायां नावमुल्लंघ्य नयंतीऽमोघदर्शनम् ॥ १६ ॥

ದುರ್ಗಂಧವುಳ್ಳ ಆಕೆಯು ಒಪ್ಪಿ ನೌಕಾದಲ್ಲಿ ಅವರನ್ನು ಕೂಡಿಸಿಕೊಂಡು ಅಮೋಘದರ್ಶನರಾದ ಅವರನ್ನು ಕೃಷ್ಣಾದಲ್ಲಿ ನಾವು ನಡೆಸುತ್ತಿದ್ದಳು. ೧೬

कृष्णायाः मध्यमार्गे तु तां रतुं चकमे मुनिः ।
निर्माय तपसा श्वभ्रं आलोक्य लज्जिता मुनिम् ॥ १७ ॥

ಕೃಷ್ಣಾಮಧ್ಯದಲ್ಲಿ ಬಂದಾಗ ಆ ಮುನಿಗೆ ಆಕೆಯೊಡನೆ ರಮಿಸಬೇಕೆಂಬ ಇಚ್ಛೆಯಾಯಿತು. ಕೂಡಲೇ ಮೇಘನಿರ್ಮಾಣ ಮಾಡಿದ್ದನ್ನು ನೋಡಿ ಲಜ್ಜಿತಳಾಗಿ, ಮುನಿಯನ್ನು, ೧೭

वृत्तांतं परिपप्रच्छ तव जन्म वृथा कथम् ।
कथं नांगीचकार त्वं जातिधर्मं भृशं कृशा ॥ १८ ॥

ಸುಂದರಿಯೇ ! ಕೇಳು. ೧೯

एवमुक्त्वा मुनिस्तत्र जग्राह कृपयान्वितः।
तत्करस्पर्शनात्सा तु सुगंधा ह्यतिसुंदरी ॥ २० ॥

ಹೀಗೆ ಹೇಳಿ ಆ ಮುನಿಯು ಅಲ್ಲಿಯೇ ಕೃಪಾಯುಕ್ತನಾಗಿ ಸ್ವೀಕರಿಸಿದನು. ಅವರ ಕರಸ್ಪರ್ಶ ಮಾತ್ರದಿಂದ, ಆಕೆಯು, ಸುಗಂಧ ಉಳ್ಳವಳೂ, ಅತ್ಯಂತ ಸುಂದರಿಯೂ. ೨೦

जाता यौवनमर्मज्ञा प्रणम्य शिरसा मुनिम्।
ज्ञानं तदापि तस्यासीत् ज्ञात्वा तत्संगमुत्तमम् ॥ २१ ॥

ಯೌವನದ ರಹಸ್ಯ ತಿಳಿದವಳೂ ಆಗಿ, ಶಿರಸಾ ಮುನಿಗೆ ನಮಸ್ಕರಿಸಿದಳು. ಆಗ್ಯೂ ಅವಳಿಗೆ ಜ್ಞಾನವಿತ್ತು. ಅವರ ಉತ್ತಮ ಸಂಗವನ್ನು ತಿಳಿದು, ೨೧

तस्यां स निदधे वीर्यं प्रसह्य चिरसंभृतम्।
अमोघाच्च ततो वीर्यात् मुनेः संगात् क्षणात्ततः ॥ २२ ॥

ಬಹು ಕಾಲದಿಂದ ಸಂಗ್ರಹಿಸಿದ ವೀರ್ಯವನ್ನು, ಆಕೆಯಲ್ಲಿ ಆಧಾನ ಮಾಡಿದರು. ಮುನಿಗಳ ಸಂಗದಿಂದ, ಅಮೋಘ ವೀರ್ಯದಿಂದ ಅದೇ ಕ್ಷಣದಲ್ಲಿ, ೨೨

तदैव गर्भचिह्नं तु दृष्ट्वा तस्यां पराशरः।
आविर्भावं हरेर्ज्ञात्वा आनंदाब्धौ ममज्ज सः ॥ २३ ॥

ಗರ್ಭ ಚಿಹ್ನವನ್ನು ಕಂಡು ಪರಾಶರರು, ಶ್ರೀಹರಿಯೇ ಆವಿರ್ಭೂತನಾಗುವನೆಂದು ತಿಳಿದು, ಆನಂದ ಸಮುದ್ರದಲ್ಲಿ ಮುಳುಗಿದರು. ೨೩

तपःसामर्थ्यमास्थाय आविर्भूतस्तदा हरिः।
पोताल्लोकहितार्थाय व्यासरूपी जगत्प्रभुः ॥ २४ ॥

ತನ್ನ ಸಾಮರ್ಥ್ಯ ವಿಶೇಷದಿಂದ ವ್ಯಾಸರೂಪಿಯಾದ, ಜಗತ್ಪ್ರಭುವು ಲೋಕಹಿತಕ್ಕಾಗಿ ನೌಕಾದಲ್ಲಿಯೇ ಆವಿರ್ಭವಿಸಿದನು. ೨೪

पराशरो जगामाशु तीर्थाटनपरो गुरुः।

ಶಿರಸಾ ಅವರ ಚರಣಗಳನ್ನು ನಮಿಸಿ ನನ್ನನ್ನು ಬಿಟ್ಟು ಎಲ್ಲಿ ಹೋಗುವಿರಿ ? ನನ್ನ ಕೌಮಾರ್ಯವನ್ನು ನಾಶ ಮಾಡಿದ್ದೀರಿ. ಆದ್ದರಿಂದ ನೀವೇ ನನಗೆ ಪತಿಗಳಾಗಿರಿ. ೨೬

नोचेत् कुरु कुमारीं मां यथापूर्वं कृपानिधे ।
समुद्वहेद्यथा चान्यः चक्रवर्ती सदैव माम् ॥ २७ ॥

ಇಲ್ಲವಾದರೆ, ಹೇ ಕೃಪಾನಿಧಿಗಳೇ ! ಮೊದಲಿನಂತೆ ನನ್ನನ್ನು ಕುಮಾರಿಯನ್ನಾಗಿ ಮಾಡಿರಿ. ಇನ್ನೊಬ್ಬ ಚಕ್ರವರ್ತಿ ನನ್ನನ್ನು ಲಗ್ನವಾಗುವಂತೆ ಯಾವಾಗಲೂ ಅನುಗ್ರಹಿಸಿರಿ. ೨೭

एवमुक्तः तया तत्र तामुवाच मुनीश्वरः ।
तव यत्कामितं सुभ्रु तद्भविष्यति नान्यथा ॥ २८ ॥

ಹೀಗೆ ಹೇಳಿಸಿಕೊಂಡ ಆ ಮುನಿಶ್ವರನು, ಅಲ್ಲಿ ಅವಳಿಗೆ ಅಂದನು. ಹೇ ಸುಂದರಿ ! ನೀನು ಇಷ್ಟಪಟ್ಟಂತೆ ಆಗುವದು, ಬೇರೆ ಇಲ್ಲ. ೨೮

यत्र व्यासः समुत्पन्नः कृष्णातीरे सुनिर्मले ।
तदासीत् व्यासतीर्थं हि ख्यातं लोकैकपावनम् ॥ २९ ॥

ನಿರ್ಮಲವಾದ ಕೃಷ್ಣಾತೀರದಲ್ಲಿ ಎಲ್ಲಿ ವ್ಯಾಸರು ಉದಯಿಸಿದರೋ, ಅಲ್ಲಿ ಲೋಕೈಕ ಪವಿತ್ರವಾದ ವ್ಯಾಸತೀರ್ಥವೆಂಬ ಹೆಸರಿನ ತೀರ್ಥವಾಯಿತು. ೨೯

जनानां पावनार्थाय बभौ खलखलेश्वरः ।
व्यासतीर्थे नरः स्नात्वा स्मृत्वा खलखलेश्वरम् ॥ ३० ॥

ಜನರ ಪಾವಿತ್ರ್ಯಕ್ಕಾಗಿ ಅಲ್ಲಿ ಖಲಖಲೇಶ್ವರನು ಆವಿರ್ಭವಿಸಿದನು. ಮನುಷ್ಯನು ವ್ಯಾಸತೀರ್ಥದಲ್ಲಿ ಸ್ನಾನ ಮಾಡಿ ಖಲಖಲೇಶ್ವರನನ್ನು ಸ್ಮರಿಸಿದರೆ, ೩೦

अज्ञानं नश्यति क्षिप्रं ज्ञानं प्राप्नोति निर्मलम् ॥ ३१ ॥

ಅವನ ಅಜ್ಞಾನವು ಕೂಡಲೇ ನಾಶವಾಗುವದು. ಮತ್ತು ನಿರ್ಮಲ ಜ್ಞಾನವು ಪ್ರಾಪ್ತವಾಗುವದು. ೩೧

॥ इति श्री स्कांदे कृष्णामाहात्म्ये व्यासोत्पत्तिकथनं नाम चत्वारिंशोऽध्यायः ॥

उत्तंक महदाख्यानं श्रुत्वा त्वन्मुखपंकजात्।
न तृप्तिमधिगच्छामि पुनर्ब्रूहि कथानकम् ॥ १ ॥

ಹೇ ಉತ್ತಂಕರೇ! ನಿಮ್ಮ ಮುಖದಿಂದ ಮಹಾಖ್ಯಾನವನ್ನು ಕೇಳಿ ನನಗೆ ತೃಪ್ತಿಯಾಗಿಲ್ಲ ಮತ್ತೆ ಕಥೆ ಹೇಳಿರಿ. ೧

उत्तंक उवाच –

ಉತ್ತಂಕರು ಅಂದರು –

तपस्विन् श्रुणु चाख्यान सेतिहासं पुरातनम्।
पराशरस्य तपसः प्रभावं जनदुर्लभम् ॥ २ ॥

ಹೇ ತಪಸ್ವಿಯೇ! ಪ್ರಾಚೀನ ಇತಿಹಾಸದಿಂದ ಕೂಡಿದ ಜನದುರ್ಲಭವಾದ ತಪಃ ಪ್ರಭಾವದಿಂದ ಕೂಡಿದ, ಪರಾಶರರ ಕಥೆಯನ್ನು ಕೇಳು. ೨

स्वार्चामूर्तिं नृसिंहस्य गृहीत्वा मुनिसत्तमः।
कृष्णवेण्यां च यान्येव सन्ति निर्वाणदानि च ॥ ३ ॥

ತಮ್ಮ ಪೂಜೆಯ ಮೂರ್ತಿಯಾದ ನೃಸಿಂಹನನ್ನು ಸ್ವೀಕರಿಸಿ, ಆ ಶ್ರೇಷ್ಠ ಮುನಿಯು, ನೇಳಿವರು. ಕೃಷ್ಣವೇಣಿಯಲ್ಲಿರುವ ಮೋಕ್ಷಪ್ರದ ತೀರ್ಥಗಳನ್ನು, ೩

तान्यालोक्य मनःस्थैर्यं यत्र तिष्ठामि तत्तटे।
ततः सती तदा देवी तेजोरूपेण संस्थिता ॥ ४ ॥

ಅವುಗಳನ್ನು ನೋಡಿ, ಎಲ್ಲಿ ಮನಸ್ಸು ಸ್ಥಿರವಾಗಿ ಇರುವದೋ, ಆ ತಟದಲ್ಲಿ, ಆ ಮೇಲೆ ಸತೀ ದೇವಿಯು ತೇಜೋರೂಪದಿಂದ ಎಲ್ಲಿರುವಳೋ, ೪

सुगंधे तीर्थवर्ये यः स्नात्वा प्रयतमानसः।
रुद्रसूक्तैश्चोपचारैः ततः खलखलेश्वरम् ॥ ५ ॥

ಅಂಥ ಸುಗಂಧ ಎಂಬ ತೀರ್ಥದಲಿ ಸ್ನಾನ ಮಾಡಿ, ಏಕಾಗ್ರ ಮನಸಿನಿಂದ

ಭಕ್ತಿಯಿಂದ ಪೂಜಿಸಿದವರು, ಮುಕ್ತರಾಗುವರು. ಇದರಲ್ಲಿ ಬೇರೆ ವಿಚಾರವಿಲ್ಲ. ೬

व्यासोऽपि भगवान् तस्यां आविर्भूतः तपोबलात्।
मातरं प्रत्युवाचेदं भक्त्या परमया मुनिः ॥७॥

ತಪೋಬಲದಿಂದ ಆವಿರ್ಭೂತರಾದ ಭಗವಾನ್ ವ್ಯಾಸ ಮುನಿಗಳು, ಪರಮ ಭಕ್ತಿಯಿಂದ ತಾಯಿಯನ್ನು ಕುರಿತು ಹೀಗೆ ಅಂದರು. ೭

त्वयि संकटमापन्ने स्मरणं मे विधीयताम्।
दास्यामि दर्शनं मातः तथैव वरमुत्तमम् ॥८॥

ತಾಯೀ, ನಿನಗೆ ಏನಾದರೂ ಸಂಕಟಬಂದಾಗ ನನ್ನ ಸ್ಮರಣವನ್ನು ಮಾಡು. ಕೂಡಲೇ ನಾನು ದರ್ಶನ ಕೊಡುವೆ. ಇದೇ ನಾನು ನಿನಗೆ ಕೊಡುವ ವರ. ೮

इत्युक्त्वा जननीं नत्वा तत्राश्रममकारयत्।
कृत्वा स लोकशिक्षार्थं तीर्थं त्रैलोक्यपावनम् ॥९॥

ಹೀಗೆ ಹೇಳಿ ತಾಯಿಯನ್ನು ನಮಸ್ಕರಿಸಿ, ಅಲ್ಲಿ ಆಶ್ರಮವನ್ನು ಮಾಡಿದರು. ಅಲ್ಲಿ ಲೋಕ ಕ್ಷಣಾರ್ಥಕ್ಕಾಗಿ ತ್ರೈಲೋಕ್ಯಪಾವನ ಎಂಬ ತೀರ್ಥವನ್ನು ಮಾಡಿದರು. ೯

तत्र तस्थौ महातेजाः व्यासो नारायणोऽव्ययः।
व्यस्य वेदान् सेतिहासान् पुराणानि महामुनिः ॥१०॥

ಮಹಾತೇಜಸ್ವಿಯಾದ, ನಾಶರಹಿತರಾದ ನಾರಾಯಣ ರೂಪರಾದ ವ್ಯಾಸರು, ಅಲ್ಲಿ ಇದ್ದರು. ಹಾಗೂ ವೇದಗಳನ್ನು ವಿಭಾಗ ಮಾಡಿ ಇತಿಹಾಸ ಪುರಾಣಗಳನ್ನು ಮಹಾಮುನಿಗಳು ನಿರ್ಮಿಸಿದರು. ೧೦

तन्मातापि जगामाशु कुरुदेशान् यदृच्छया।
ऋषेरनुग्रहात् सापि प्राप्य जन्म द्वितीयकम् ॥११॥

ಅವರ ತಾಯಿಯು ಯದೃಚ್ಛೆಯಿಂದ ಕುರುದೇಶಕ್ಕೆ ಹೋದಳು. ಋಷಿಗಳ ಅನುಗ್ರಹದಿಂದ ಎರಡನೇ ಜನ್ಮವನ್ನು ಹೊಂದಿ. ೧೧

योगमार्गेण तपसा कुमारीत्वमवाप सा।
तद्राष्ट्राधिपतिं प्राप्य शंतनुं शांतविग्रहम् ॥१२॥

त्रैलोक्याभयदं महाकलिमलप्रध्वंसि सेव्यं जनैः
कृष्णातीरकथामृतं परपदप्राप्तेर्महत्साधनम् ॥ १४ ॥

ಈ ವ್ಯಾಸೋಪಾಖ್ಯಾನವು ಎಲ್ಲ ಐಶ್ವರ್ಯಕ್ಕೆ ಆಧಾರ ಭೂತವಾದುದು. ನನ್ನಿಂದ ಪಾಪನಾಶಕವಾದ ಮೋಕ್ಷ ಪ್ರದವಾದ ಇದನ್ನು ತಿಳಿದು ಆಗಮಗಳಂತೆ ಪಠಿಸು. ಇದು ಮೂರು ಲೋಕದಲ್ಲಿ ಅಭಯಪ್ರದವು. ಮಹತ್ತರ ಕಲಿಕೃತ ಪಾಪನಾಶಕವು. ಕೃಷ್ಣಾತೀರದ ಕಥಾಮೃತವು ಪರಪದಪ್ರಾಪ್ತಿಗೆ ಮಹಾಸಾಧನವಾದುದು. ಆದ್ದರಿಂದ ಜನರು ಇದನ್ನು ಸೇವಿಸಬೇಕು. ೧೪

॥ इति श्री स्कांदे कृष्णामाहात्म्ये त्रैलोक्य पावनतीर्थ वर्णनं नाम
एकचत्वारिंशत्तमोऽध्यायः ॥

❀ ❀ ❀

## ॥ द्विचत्वारिंशोऽध्यायः ॥

उत्तंक उवाच –

ಉತ್ತಂಕರು ಅಂದರು –

कृष्णाद्वैपायनस्यैवं उत्पत्तिः पावनी श्रुता ।
लोकानां च हितार्थाय किं भूयः श्रोतुमिच्छसि ॥ १ ॥

ಕೃಷ್ಣದ್ವೈಪಾಯನರ ಪವಿತ್ರವಾದ ಜನ್ಮವನ್ನು ಕೇಳಿದಿರಿ. ಲೋಕಹಿತಕ್ಕಾಗಿ ಮತ್ತೇನು ಕೇಳಬೇಕೆಂದು ಇಚ್ಛಿಸುವಿರಿ ? ೧

याज्ञवल्क्य उवाच –

ಯಾಜ್ಞವಲ್ಕ್ಯರು ಅಂದರು –

उत्तंकवर्य सकलागमतीर्थसार

ಉತ್ತಂಕರು ಅಂದರು –

मुने श्रुणु महत्तीर्थं सर्वलोकैकपावनम् ।
संत्यनन्तानि तीर्थानि कृष्णवेण्यां च यद्यपि ॥ ३ ॥

ಹೇ ಮುನಿಗಳೇ ! ಕೃಷ್ಣವೇಣಿಯಲ್ಲಿ ಒಂದು ವೇಳೆ ಅನೇಕ ತೀರ್ಥಗಳಿವೆ. ಆದರೂ ಲೋಕೈಕ ಪಾವನಕರ ತೀರ್ಥಗಳ ಬಗ್ಗೆ ಹೇಳುವೆ. ಕೇಳಿರಿ. ೩

तथापि कानिचित् वक्ष्ये पवित्राणि यथातथम् ।
व्यासतीर्थात् धनुष्षट्कप्रयाणं अतिपावनम् ॥ ४ ॥

ಅವರಲ್ಲಿ ಪವಿತ್ರವಾದ ಕೆಲವುಗಳನ್ನೇ ಹೇಳುವೆ. ವ್ಯಾಸತೀರ್ಥದಿಂದ ಆರು ಧನುಸ್ಸಿನಪ್ರಮಾಣದಲ್ಲಿ ಅತ್ಯಂತ ಪವಿತ್ರವಾದತೀರ್ಥ, ೪

ब्रह्मतीर्थमिति ख्यातं स्नात्वा ब्रह्मत्वदं नृणाम् ।
ब्रह्मतीर्थात् पुरोभागे धनुः पंचप्रमाणतः ॥ ५ ॥

ಬ್ರಹ್ಮತೀರ್ಥವೆಂದು ಖ್ಯಾತವಾದುದು. ಅಲ್ಲಿ ಸ್ನಾನಮಾಡಿದವನಿಗೆ ಬ್ರಹ್ಮತ್ವವನ್ನು ಕೊಡುವದು. ಮುಂದಿನ ಭಾಗದಲ್ಲಿ ಐದು ಧನುಸ್ಸಿನ ಪ್ರಮಾಣದಲ್ಲಿ. ೫

वालखिल्याभिधं तीर्थं सर्वपापप्रणाशनम् ।
वालखिल्यगणास्तत्र निवसन्ति सहस्रशः ॥ ६ ॥

ವಾಲಖಿಲ್ಯ ಎಂಬ ತೀರ್ಥವು ಎಲ್ಲ ಪಾಪಗಳನ್ನು ನಾಶಮಾಡುವಂತಹುದು. ಅಲ್ಲಿ ಸಾವಿರಾರು ಮಂದಿ ವಾಲಖಿಲ್ಯರು ವಾಸಿಸುತ್ತಾರೆ. ೬

वालखिल्याभिधे तीर्थे स्नानं कृत्वा यथाविधि ।
ब्रह्मयज्ञादिकं कुर्वन् वैकुंठं प्राप्नुयान्नरः ॥ ७ ॥

ವಾಲಖಿಲ್ಯ ಎಂಬ ತೀರ್ಥದಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿ ಬ್ರಹ್ಮಯಜ್ಞಾದಿಗಳನ್ನು ಮಾಡುವ ನರನು ವೈಕುಂಠವನ್ನು ಹೊಂದುವನು. ೭

ಆ ತೀರ್ಥಕ್ಕಿಂತ ಶ್ರೇಷ್ಠವಾದ ಸಂತೋಷಕರವಾದದ್ದು ಶುಕತೀರ್ಥವು. ಶುಕತೀರ್ಥಕ್ಕೆ ಹೋದ ಮನುಷ್ಯನು ಆದರ ದರ್ಶನದಿಂದಲೇ ಸಜ್ಜನತ್ವವನ್ನು ಹೊಂದುತ್ತಾನೆ. ೮

तीर्थमन्यत् प्रवक्ष्यामि यत्तु तत्सन्निधौ परम् ।
विख्यातं कृष्णवेण्यां तु नारसिंहाभिधं परम् ॥ ९ ॥

ಅವರ ಹತ್ತಿರದಲ್ಲಿಯೇ ಇರುವ ಇನ್ನೊಂದು ತೀರ್ಥದ ಬಗ್ಗೆ ಹೇಳುವೆ. ಕೃಷ್ಣವೇಣಿಯಲ್ಲಿ ಅದು ಪ್ರಖ್ಯಾತವಾದದ್ದು. ಆದಕ್ಕೆ ನೃಸಿಂಹತೀರ್ಥ ಎಂದು ಹೆಸರು. ೯

आराध्य तपसा तत्र नारसिंहं पराशरः ।
तद्वरार्थं समायातो नृहरिस्तत्र सत्वरम् ॥ १० ॥

ಪರಾಶರರು ಅಲ್ಲಿ ನೃಸಿಂಹದೇವರನ್ನು, ತಪಸ್ಸಿನಿಂದ ಆರಾಧನ ಮಾಡಿದರು. ಅವರಿಗೆ ವರಕೊಡುವದಕ್ಕಾಗಿ ನೃಸಿಂಹನು ಅಲ್ಲಿ ಗಡಿಬಡಿಯಿಂದ ಬಂದನು. ೧೦

ज्वालाकारं नृसिंहास्यं दृष्ट्वा मुनिरुदारधीः ।
प्रणम्य शिरसा देवं ज्वालामालातिभीषणम् ॥ ११ ॥
स्तुतिं चकार सहसा भक्तराजः तदा हरेः ॥ १२ ॥

ಅಗ್ನಿಜ್ವಾಲೆಯಂತಿರುವ ನರಸಿಂಹದೇವರ ಮುಖವನ್ನು ನೋಡಿ ಉದಾರ ಬುದ್ಧಿಉಳ್ಳ ಮುನಿಗಳು, ಶಿರಸಾ ಜ್ವಾಲೆಯ ಮಾಲೆಯಿಂದ ಭಯಂಕರನಾದ ದೇವನನ್ನು ನಮಿಸಿ. ಭಕ್ತಶ್ರೇಷ್ಠರಾದ ಅವರು, ಆಗ ಶ್ರೀಹರಿಯ ಸ್ತೋತ್ರ ಮಾಡಿದರು. ೧೧-೧೨

पराशर उवाच –

नमामि देवं भुवनैकसुंदरम् सुरासुरैर्वन्दितपादपंकजम् ।
निरंजनं निर्विषयैकवत्सलं कृष्णातटस्थं नृहरिं जगद्गुरुम् ॥ १३ ॥

ಪರಾಶರರು ಅಂದರು.

ದೇವದಾನವರಿಂದ ವಂದಿತ ಪಾದಕಮಲ ಉಳ್ಳಜಗತ್ತಿಗೆ ಏಕ ಸುಂದರನಾದ ದೇವನನ್ನು ನಾನು ನಮಿಸುವೆ.

ದುಃಖದೂರ ಮಾಡುವ ಭಕ್ತಜನರಿಂದ ವ್ಯಾಪ್ತವಾದ ಕೃಷ್ಣಾತಟದಲ್ಲಿರುವ ಜಗದ್ಗುರುವಾದ ನೃಸಿಂಹನನ್ನು ನಮಿಸುವೆ. ೧೪

कृपां कुरु मयि स्वामिन् रोषं त्यज सुदुःसहम् ।
अमृतस्निग्धया दृष्ट्या विश्वं पश्य दयानिधे ॥ १५ ॥

ಸ್ವಾಮಿ, ನನ್ನಲ್ಲಿ ಕೃಪೆಮಾಡು. ದುಃಸಹವಾದ ಸಿಟ್ಟನ್ನು ಬಿಡು. ಅಮೃತದಂತೆ ಸ್ನೇಹಯುಕ್ತ ದೃಷ್ಟಿಯಿಂದ ಹೇ ದಯಾನಿಧೆ ! ಜಗತ್ತನ್ನು ನೋಡು. ೧೫

त्राहि त्राहि नृसिह त्वं ज्वालामालाकुलादिशः ।
तेजः संहृत्य हे स्वामिन् स्वात्मन्येव वशं नय ॥ १६ ॥

ಹೇ ನೃಸಿಂಹ ! ರಕ್ಷಿಸು, ರಕ್ಷಿಸು, ದಿಕ್ಕುಗಳು ಜ್ವಾಲೆಗಳ ಮಾಲೆಗಳಿಂದ ವ್ಯಾಪ್ತವಾಗಿವೆ. ಹೇ ಸ್ವಾಮಿ ! ಈ ತೇಜಸ್ಸನ್ನು ನಿನ್ನಲ್ಲಿಯೇ ಇಟ್ಟುಕೊ. ೧೬

इति स्तुत्वा नृसिंहं तं तत्र पाराशरो मुनिः ।
नाम ज्वालानृसिंहेति चक्रे भुवनसंमतम् ॥ १७ ॥

ಹೀಗೆ ಆ ಪರಾಶರರು ನೃಸಿಂಹದೇವರನ್ನು ಸ್ತೋತ್ರ ಮಾಡಿ ಲೋಕಸಂಮತವಾದ ಜ್ವಾಲಾನೃಸಿಂಹ ಎಂದು ನಾಮಕರಣ ಮಾಡಿದರು. ೧೭

ऋषेर्वाक्यं तदा श्रुत्वा नृसिंहो ह्यतिभीषणः ।
मुनिं पराशरं भक्त्या प्रोवाच करुणानिधिः ॥ १८ ॥

ಅತ್ಯಂತ ಭಯಂಕರನಾದ ನೃಸಿಂಹನು ಆಗ ಋಷಿಗಳ ವಾಕ್ಯವನ್ನು ಕೇಳಿ ಕರುಣಾನಿಧಿಯಾದ್ದರಿಂದ ಶಾಂತನಾಗಿ ಸ್ನೇಹದಿಂದ ಪರಾಶರ ಮುನಿಗಳನ್ನು ಕುರಿತು ಅಂದನು. ೧೮

तीर्थे मां स्थापयाशु त्वं ज्वलदग्निशिखोपमम् ।
शांतिं यास्यामि कृष्णायां दहेन्नोचेज्जगत्त्रयम् ॥ १९ ॥

ಪ್ರಜ್ವಲಿತವಾದ ಅಗ್ನಿಶಿಖೆಯಂತಿರುವ ನನ್ನನ್ನು ಕೃಷ್ಣಾತೀರ್ಥದಲ್ಲಿ ಸ್ಥಾಪಿಸು.

ಕೃಷ್ಣಾತೀರ್ಥದಲ್ಲಿ ಬಿದ್ದ ಆ ಮೂರ್ತಿಯು ಸರ್ವ ಭಕ್ತರಿಗೆ ಜ್ಞಾನ ಕೊಡುವಂತಹುದು. ಎಲ್ಲ ಜನರ ದುಃಖ ದೂರ ಮಾಡುವಂತಹದೂ ಆಯಿತು. ೨೧

पराशरः ततो गच्छन् तीर्थानि विविधानि च ।
यावत्सागरसंयोगं हृदि देवं सदा स्मरन् ॥ २२ ॥

ಪರಾಶರರು ಆಮೇಲೆ ಅನೇಕ ತೀರ್ಥಗಳಿಗೆ ಹೋದರು. ಸಮುದ್ರದವರೆಗೆ ಹೃದಯದಲ್ಲಿ ದೇವರನ್ನು ಯಾವಾಗಲೂ ಸ್ಮರಿಸುತ್ತ, ೨೨

उत्तंको याज्ञवल्क्यं च वर्णयित्वा पुनः पुनः ।
संपूज्य परया भक्त्या कृष्णां द्रष्टुं पुनर्ययौ ॥ २३ ॥

ಉತ್ತಂಕರು ಯಾಜ್ಞವಲ್ಕ್ಯರಿಗೆ ಮತ್ತೆ ಮತ್ತೆ ವರ್ಣಿಸಿ ಮಹಾಭಕ್ತಿಯಿಂದ ಪೂಜಿಸಿ ಕೃಷ್ಣಾನದಿಯನ್ನು ನೋಡಬೇಕೆಂದು ಮತ್ತೆ ಹೋದರು. ೨೩

कृष्णायां यानि तीर्थानि पवित्राणि महांति च ।
दृष्ट्वा स्पृष्ट्वा च योगीशः मुनेराश्रममभ्यगात् ॥ २४ ॥

ಕೃಷ್ಣಾದಲ್ಲಿ ಮಹಾಪವಿತ್ರವಾದ ತೀರ್ಥಗಳು ಯಾವವು ಇರುವವೋ ಅವುಗಳನ್ನು ನೋಡುತ್ತ ಹಾಗೂ ಸ್ನಾನಮಾಡುತ್ತ ಮುನಿಗಳ ಆಶ್ರಯಕ್ಕೆ ಹೋದರು. ೨೪

श्रुत्वाख्यानमिदं सर्वे श्रावयेद्वा समाहितः ।
नृहरेः कृपया तस्य वांछितं वै भवेत् द्विजाः ॥ २५ ॥

ಹೇ ಬ್ರಾಹ್ಮಣರೇ ! ಈ ಆಖ್ಯಾನವನ್ನು ಕೇಳಿದವರು ಏಕಾಗ್ರದಿಂದ ಹೇಳಿದವರು ಅವರೆಲ್ಲರ ಇಚ್ಛೆಗಳು ನೃಸಿಂಹದೇವರ ಕೃಪೆಯಿಂದ ಪೂರ್ಣವಾಗುವವು. ೨೫

॥ इति श्रीस्कंदपुराणे कृष्णामाहात्म्ये द्विचत्वारिंशोध्यायः ॥



पूज्यस्त्वमेव त्रिषु लोकनाथ तीर्थावली श्रेष्ठतमा हि वाच्या ॥ १ ॥

ಹೇ ಜಗದೀಶನೇ ! ಈ ಮಾತು ನಿನಗೆ ಯೋಗ್ಯವು. ಇದು ಜಗತ್ತಿಗೆ ಪ್ರವೃತ್ತಿಯನ್ನೂ ಮೋಕ್ಷವನ್ನು ಕೊಡುವದು. ಹೇ ಲೋಕನಾಥರೇ ! ಮೂರು ಲೋಕಗಳಲ್ಲಿ ನೀನೇ ಪೂಜ್ಯನು, ಶ್ರೇಷ್ಠ ತೀರ್ಥಸಮುದಾಯಗಳ ಬಗ್ಗೆ ಹೇಳು. ೧

इत्थं निशम्य स तदा ऋषीणां वाक्यमंजसा।
प्रोवाच प्रीतिसंयुक्तः स्कंदः किंचित् हसन् तदा ॥ २ ॥

ಹೀಗೆ ಋಷಿಗಳ ವಾಕ್ಯವನ್ನು ಚನ್ನಾಗಿ ಕೇಳಿ ಪ್ರೀತಿಯುಕ್ತನಾದ ಸ್ಕಂದನು ಮಂದಹಾಸ ಮಾಡುತ್ತ ಅಂದನು. ೨

स्कंद उवाच –

ಸ್ಕಂದನು ಅಂದನು –

मुनयः सन्ति तीर्थानि कृष्णायां कोटिशस्तथा।
तथापि वक्तुं कः शक्तः ज्वालातीर्थं महत्तरम् ॥ ३ ॥

ಹೇ ಮುನಿಗಳೇ ! ಕೃಷ್ಣಾನದಿಯಲ್ಲಿ ಕೋಟಿಗಟ್ಟಲೆ ತೀರ್ಥಗಳು ಇರುತ್ತವೆ. ಅವೆಲ್ಲವನ್ನು ಹೇಳಲು ಯಾರು ಸಮರ್ಥರು ? ಅವರಲ್ಲಿ ಜ್ವಾಲಾತೀರ್ಥವು ಮನೋಹರವಾದುದು. ೩

म्रियमाणस्य दैवात्तु तीर्थमेतत् परायणम्।
पतितोपि मृतो यत्र गच्छत्येवापुनर्भवम् ॥ ४ ॥

ದೈವಯೋಗದಿಂದ ಸಾಯುವವನಿಗೆ ಈ ತೀರ್ಥವು ಶ್ರೇಷ್ಠಸ್ಥಾನವು. ಪತಿತನಾದರೂ ಇಲ್ಲಿ ಮರಣಹೊಂದಿದರೆ ಮೋಕ್ಷಕ್ಕೆ ಹೋಗುತ್ತಾನೆ. ೪

केदारे जलपानाच्च सोमपानात् यदाप्यते।
कृष्णवेणीजलस्पर्शात् तदाप्नोति न संशयः ॥ ५ ॥

ಕೇದಾರದಲಿ ೀರು ಕುಡಿಯುವದರಿಂ ಸೋ ಪಾನಮಾ ವದರಿಂದ ಏ

विष्वक्सेनादयः सर्वे पार्षदाः सुरसत्तमाः।
वसन्ति तत्र संसिद्धा हरेः प्रियचिकीर्षया ॥७॥

ವಿಷ್ವಕ್ಸೇನ ಮೊದಲಾದ ಎಲ್ಲ ಪಾರ್ಷದರು ದೇವಶ್ರೇಷ್ಠರು ಭಗವಂತನಿಗೆ ಪ್ರಿಯ ಉಂಟು ಮಾಡಬೇಕೆಂದು ಅಲ್ಲಿ ಚನ್ನಾಗಿ ಸಿದ್ಧರಾದವರೂ ಇದ್ದಾರೆ. ೭

ज्ञानिनश्च महाभागाः मुक्तस्तत्र वसंति हि।
ज्ञात्वा तीर्थवरं पुण्यं इहामुत्र फलप्रदम् ॥८॥

ಅನೇಕ ಭಾಗ್ಯಶಾಲಿಗಳಾದ ಜ್ಞಾನಿಗಳು ಮುಕ್ತರಾದವರು ಅಲ್ಲಿ ಇರುತ್ತಾರೆ. ಇಹ ಪರದಲ್ಲಿಯೂ ಮಹಾಫಲಪ್ರದವಾದ ಪುಣ್ಯಕರವಾದ ಶ್ರೇಷ್ಠ ತೀರ್ಥವನ್ನು ತಿಳಿದು, ೮

यत्र पिंडप्रदानेन मुक्ति यांत्यतिपापिनः।
गयायां पिंडदानेन एकस्यैव भवेद्गतिः ॥९॥

ಮಹಾಪಾಪಿಗಳೂ ಕೂಡ ಇಲ್ಲಿ ಪಿಂಡಪ್ರದಾನ ಮಾಡುವದರಿಂದ ಮುಕ್ತಿಯನ್ನು ಹೊಂದುತ್ತಾರೆ. ಗಯಾದಲ್ಲಿ ಪಿಂಡ ಕೊಡೋಣದರಿಂದ ಒಬ್ಬನಿಗೇನೆ ಸದ್ಗತಿಯಾಗುವುದು. ೯

कुलानां इह सप्तानां गतिर्भवति शाश्वती।
एको देवः त्रिधा भूत्वा नारसिंहोऽतिभीषणः ॥१०॥

ಇಲ್ಲಿ ಏಳು ಕುಲಗಳಿಗೆ ಶಾಶ್ವತವಾದ ಗತಿಯು ಉಂಟಾಗುವದು. ಒಬ್ಬನೇ ಭಯಂಕರನಾದ ನೃಸಿಂಹನು ಮೂರುರೂಪನಾಗಿ ಇದ್ದಾನೆ. ೧೦

तीर्थे नृसिंहनामास्ये रूपमेकं प्रचक्षते।
मंत्रमूर्तिर्द्वितीयाख्या जानीथ ऋषिसत्तमाः ॥११॥

ನೃಸಿಂಹತೀರ್ಥದಲ್ಲಿ ಒಂದು ರೂಪವಿದೆ. ಎರಡನೆಯದು ಮಂತ್ರನೇ ಮೂರ್ತಿ. ಹೇ ಋಷಿಗಳೇ ! ತಿಳಿಯಿರಿ. ೧೧

ಈ ವಿಷಯದಲ್ಲಿ ಒಂದು ಮಂಗಳಕರವಾದ ದೇವಶ್ರೇಷ್ಠರಾದ ನೃಸಿಂಹದೇವರ ಪವಿತ್ರವಾದ ಪಾಪಹಾರಕವಾದ ಕಥೆ ಹೇಳುತ್ತೇನೆ. ೧೩

नंदिग्रामे महानासीत् ब्राह्मणो वैभवैर्युतः ।
विष्णुशर्मेति विख्यातो विष्णुव्रतपरायणः ॥ १४ ॥

ನಂದಿಗ್ರಾಮ ಎಂಬಲ್ಲಿ ಐಶ್ವರ್ಯವುಳ್ಳ ಬ್ರಾಹ್ಮಣನಿದ್ದನು. ವಿಷ್ಣುವ್ರತದಲ್ಲಿ ಆಸಕ್ತನಾದ ಅವನಿಗೆ ವಿಷ್ಣುಶರ್ಮ ಎಂಬ ಹೆಸರು. ಅವನು ಪ್ರಖ್ಯಾತನಾಗಿದ್ದನು. ೧೪

पंचरात्रागमज्ञश्च सत्यवाक्ये च तत्परः ।
ज्ञानी च निर्ममोदारः तितिक्षुः मोहवर्जितः ॥ १५ ॥

ಪಂಚರಾತ್ರಾಗಮವನ್ನು ತಿಳಿದವನೂ ಸತ್ಯವಾಕ್ಯದಲ್ಲಿ ತತ್ಪರನೂ ಜ್ಞಾನಿಯೂ ನಿರ್ಮಮನೂ ಉದಾರನೂ ಸಹನಶೀಲನೂ ಮೋಹ ರಹಿತನೂ ಆಗಿದ್ದನು. ೧೫

अर्जितं तेन तद्द्रव्यं कोटिसंख्याधिकं तदा ।
तस्य भार्या सुदुर्वृत्ता धर्मकार्यपराङ्मुखी ॥ १६ ॥

ಕೋಟಿಗಿಂತ ಹೆಚ್ಚು ಹಣವನ್ನು ಅವನು ಗಳಿಸಿದ್ದನು. ಅವನ ಹೆಂಡತಿಯು ದುರಾಚಾರಿಣಿಯೂ ಧರ್ಮಕಾರ್ಯದಲ್ಲಿ ವಿಮುಖಳೂ ಆಗಿದ್ದಳು. ೧೬

धनव्ययः सदा मा भूदिति चिंतापरायणा ।
तस्या वाक्यानुरूपेण विषयासक्तचेतनः ॥ १७ ॥

ಹಣ ಖರ್ಚಾಗಬಾರದೆಂದು ಯಾವಾಗಲೂ ಚಿಂತೆ ಮಾಡುತ್ತಿದ್ದಳು. ಅವಳ ವಾಕ್ಯದಂತೆ ಇವನೂ ಕೂಡ ವಿಷಯದಲ್ಲಿ ಆಸಕ್ತವಾದ ಮನಸ್ಸು ಉಳ್ಳವನಾಗಿದ್ದನು. ೧೭

तत्संगाविद्धधीर्नासौ धर्मं चक्रे द्विजोत्तमः ।
न चकार तदा धर्मं स्त्रीजितो ब्राह्मणाधमः ॥ १८ ॥

ಆಕೆ ಸಂಗದಲ್ಲಿ ಆಸಕ್ತವಾದ ಬುದ್ಧಿ ಉಳ್ಳ ಆ ಉತ್ತಮ ಬ್ರಾಹ್ಮಣನು ಧರ್ಮವನ್ನು ಮಾಡಲಿಲ್ಲ. ಆ ಅಧಮ ಬ್ರಾಹ್ಮಣನು ಸ್ತ್ರೀಜಿತನಾಗಿದ್ದನು. ೧೮

ಆತಿಥ್ಯಕಾಲ ಬಂದಾಗ ಅವನ ಮನೆಯನ್ನು ಪ್ರವೇಶಿಸಿದನು. ಮನೆಯ ಅಂಗಳವಲ್ಲಿದ್ದ ಯತಿಯು ಭಿಕ್ಷೆಯನ್ನು ಕೊಡಿರಿ ಎಂದು ಅಂದನು. ೨೦

उवाचैनं गृहपतिः बहुशो बोधयन्नपि।
मद्गृहे न भवेद्भैक्ष्यं गच्छान्यत्रेति तं वदन् ॥ २१ ॥

ಆಗ ಗೃಹಸ್ವಾಮಿಯು ಬಹಳಷ್ಟು ಅವನಿಗೆ ಬೋಧೆ ಮಾಡುತ್ತ ಅಂದನು. ನನ್ನ ಮನೆಯಲ್ಲಿ ನಿನ್ನ ಭಿಕ್ಷೆ ಆಗಲಾರದು. ಬೇರೆ ಕಡೆಗೆ ಹೋಗು ಎಂದು ಹೇಳಿದನು. ೨೧

यतित्वं प्राप्नुयाद्यो हि स चाप्नोत्युत्तमां गतिम्।
लोभेन लोकपीडार्थं कुतो ग्रामं स गच्छति ॥ २२ ॥

ಯಾರು ಯತಿಯಾಗುವರೋ ಅವರು ಉತ್ತಮಗತಿಯನ್ನು ಹೊಂದುತ್ತಾರೆ. ಲೋಭದಿಂದ ಲೋಕಪೀಡೆಗಾಗಿ ಗ್ರಾಮದಿಂದ ಗ್ರಾಮಕ್ಕೆ ಏಕೆ ಅವನು ಹೋಗುತ್ತಾನೆ ? ೨೨

फलमूलैः सदारण्ये वसन् भिक्षुः सदैव हि।
तीर्थान्यालोचयन् काले सिद्धस्थाने सदा वसन् ॥ २३ ॥

ಭಿಕ್ಷುಕನು, ಹಣ್ಣು ಹಂಪಲುಗಳಿಂದ ಅರಣ್ಯದಲ್ಲಿ ಯಾವಾಗಲೂ ಇರುತ್ತ, ಶಾಸ್ತ್ರಗಳನ್ನು ಯೋಚಿಸುತ್ತ, ಸಿದ್ಧಸ್ಥಾನದಲ್ಲಿ ಇರುತ್ತ, ೨೩

स एव यतिरित्युक्तो नान्यो विषयलालसः।
एवमुक्तस्तदा तेन स्त्रीजितेन शठेन च ॥ २४ ॥

ಇಂಥವನು ಯತಿಯೆಂದು ಹೇಳಲ್ಪಡುವವನು. ವಿಷಯದಲ್ಲಿ ಆಸ್ಥೆಯುಳ್ಳ ಇನ್ನೊಬ್ಬನು ಯತಿಶಬ್ದಯೋಗ್ಯನಲ್ಲ. ಹೀಗೆ ಸ್ತ್ರೀಜಿತನೂ ಶಠನೂ ಆದ ಅವನಿಂದ ಹೇಳಿಸಿಕೊಂಡ. ೨೪

यतिश्चुकोप मनसा यद्यपि क्षमया युतः।
तं प्रोवाच महायोगी कृपयाऽहं समागतः ॥ २५ ॥

ಯತಿಯು ಕ್ಷಮಾಯುಕ್ತವಾದ ಮನಸ್ಸುಳ್ಳವನಾದರೂ ಸಿಟ್ಟಿಗೆದ್ದನು. ...

ಸರ್ವಜ್ಞನಾಗಿರುವೆ. ೨೬

व्रूहि धर्मान् गृहस्थानां अशेषेण च यादृशान् ।
गमिष्यामि सदा तान् वै नान्यत्र भैक्ष्यमाप्नुयाम् ॥ २७ ॥

ಗೃಹಸ್ಥರ ಧರ್ಮಗಳು ಯಾವುವು ? ಎಲ್ಲವೂ ನನಗೋಸ್ಕರ ಹೇಳು ಅವನ್ನ ಕೇಳಿ ನಾನು ಹೋಗುವೆ. ಬೇರೆ ಎಲ್ಲಿಯೂ ಭಿಕ್ಷೆ ಬೇಡುವುದಿಲ್ಲ. ೨೭

मा भैर्धनव्ययाशंकिन् कदर्योऽसि द्विजाधम ।
यतिवाक्यं तदा श्रुत्वा कान्तां प्रेक्ष्य सुदुःखितः ॥ २८ ॥

ರೊಕ್ಕ ಖರ್ಚಾಗಬಾರದೆಂದು ಶಂಕಿಸುವ ಹೇ ಕೃಪಣ, ಅಧಮ ಬ್ರಾಹ್ಮಣನೆ! ಅಂಜಬೇಡ. ಯತಿಯ ಈ ವಾಕ್ಯವನ್ನು ಕೇಳಿದ ಅವನು, ಹೆಂಡತಿಯ ಕಡೆ ನೋಡಿ ಬಹು ದುಃಖಿತನಾದನು. ೨೮

सापि तूष्णीं तदा तस्थौ नोत्तरं प्रददौ द्विजः ।
यतिर्जगाम सहसा धर्माधर्मविचारिणौ ॥ २९ ॥

ಅವಳಾದರೋ ಆಗ ಸುಮ್ಮನೆ ಇದ್ದಳು. ಬ್ರಾಹ್ಮಣನು ಬೇರೆ ಉತ್ತರ ಕೊಡಲಿಲ್ಲ. ಯತಿಯು ಒಮ್ಮೆಲೇ ಹೋಗಿಬಿಟ್ಟನು. ಧರ್ಮಾಧರ್ಮ ವಿಚಾರಮಾಡುತ್ತಾ ಇದ್ದರು. ೨೯

हित्वाऽन्यत्र तदा योगी पुण्यमप्याहृतं तयोः ।
श्रुत्वाख्यानं यतेर्नित्यं श्रद्धायुक्तः पुमान् यदि ॥ ३० ॥

सर्वपापविनिर्मुक्तः पुण्यां बुद्धिमवाप्नुयात् ॥ ३१ ॥

ಅದನ್ನು ಬಿಟ್ಟುಹೋದ ಯತಿಯು ಅವರ ಪುಣ್ಯವನ್ನು ಅಪಹರಿಸಿದನು. ಯತಿಯ ಆಖ್ಯಾನವನ್ನು ಶ್ರದ್ಧಾಯುಕ್ತವಾಗಿ ಮನುಷ್ಯನು ಕೇಳಿದಲ್ಲಿ ಎಲ್ಲ ಪಾಪರಹಿತನಾಗಿ ಪುಣ್ಯಬುದ್ಧಿಯನ್ನು ಹೊಂದುತ್ತಾನೆ. ೩೦-೩೧

॥ इति स्कांदे कृष्णामाहात्म्ये त्रिचत्वारिंशोऽध्यायः ॥

एवं कृष्णात्मकथास्य प्रीत्यैभगवान् वादतः उमर्जीशत्याचार्य

श्रुतं वैभवतः स्कंद महदाख्यानमुत्तमम् ।
न तृप्तिमधिगच्छामो यथा पीयूषसेवनात् ॥ १ ॥

ಸ್ಕಂದನೇ ನಿಮ್ಮಿಂದ ಉತ್ತಮೋತ್ತಮವಾದ ಮಹತ್ತರವಾದ ಆಖ್ಯಾನವನ್ನು ಕೇಳಿದೆನು. ತೃಪ್ತಿಯಾಗಲಿಲ್ಲ. ಹೇಗೆ ಅಮೃತಪ್ರಾಶನದಿಂದ ತೃಪ್ತಿ ಇಲ್ಲವೋ ಹಾಗೆ. ೧

यतेर्योगीश्वरस्यैवं ताभ्यां नाराधनं कृतम् ।
तदा तयोर्गतिः का वा जाता महदतिक्रमात् ॥ २ ॥

ಯತಿಗಳು ಯೋಗೀಶ್ವರರು ಇವರಿಬ್ಬರ ಆರಾಧನೆಯನ್ನು ಮಾಡದೇ ಹೋದರೆ ಯಾವ ಗತಿಯಾಗುವದು. ಮಹದತಿಕ್ರಮಣದ ದೋಷವು ಯಾವುದು ? ೨

स्कंद उवाच –

विचित्रमिदमाख्यानं श्रृणुध्वं मुनिसत्तमाः ।
लब्ध्वातिदुर्लभं जन्म मानुष्यमतिपावनम् ॥ ३ ॥

ಮುನಿಶ್ರೇಷ್ಠರೇ ಕೇಳಿರಿ. ಇದು ಬಹಳ ವಿಚಿತ್ರವಾದ ಆಖ್ಯಾನವು. ಅತ್ಯಂತ ಪವಿತ್ರವಾದ ಪರಮದುರ್ಲಭವಾದ ಮನುಷ್ಯ ಜನ್ಮವು ಪಡೆದರೂ, ೩

ज्ञात्वा संपत्तियुक्तोऽपि ह्यातिथ्यं न चकार ह ।
शास्त्राणि विविधान्येव ज्ञात्वा तूष्णीं स्थितो द्विजः ॥ ४ ॥

ಐಶ್ವರ್ಯವಂತನಾದರೂ, ಶಾಸ್ತ್ರಗಳನ್ನು ಬಲ್ಲವನಾದರೂ ಆತಿಥ್ಯವನ್ನು (ಅತಿಥಿಸತ್ಕಾರವನ್ನು) ಮಾಡದೇ ಒಬ್ಬ ಬ್ರಾಹ್ಮಣನು ತಿಳಿದೂ ತಿಳಿದೂ ತಟಸ್ಥನಾದನು. ೪

तस्यान्मूकः स विप्रोऽभूद्यतिक्षोभात्तदैव हि ।
नष्टदृष्टिस्तथा कान्ता जाता नेत्रनिमीलनम् ॥ ५ ॥

ಯತಿಗಳ ಕ್ಷೋಭದಿಂದ ಆ ಬ್ರಾಹ್ಮಣನು ಜನ್ಮಾಂತರದಲ್ಲಿ ಮೂಕನಾಗಿ ಹುಟ್ಟಿದನು. ಆ ಬ್ರಾಹ್ಮಣನ ಹೆಂಡತಿಯು ದೃಷ್ಟಿ ಕಳೆದುಕೊಂಡಳು. ಜನ್ಮದಾರಭ್ಯ

इत्युक्तं निष्ठुरं वाक्यमतस्तौ दुःखितौ भृशम्  ॥ ६ ॥

ಭಿಕ್ಷಾರ್ಥಿಯಾಗಿ ಬಂದ ಯತಿಗಳಿಗೆ ನಿಷ್ಠುರವಾದ ಮಾತುಗಳನ್ನು ಆಡಿದರು. ಆದ್ದರಿಂದಲೇ ಅವರು ಬಹಳ ದುಃಖಿತರಾದರು. ೬

स्वकर्म सहसा तत्र स्मरंतौ पापभागिनौ ।
दैवात्कालान्तरेऽतीते मृतिमापतुरातुरौ  ॥ ७ ॥

ಸಹಸಾ ತಮ್ಮ ಕರ್ಮಗಳಿಂದಲೇ ಪಾಪಭಾಗಿಗಳಾಗಿ ತಮ್ಮ ಪ್ರಾರಬ್ಧವನ್ನು ಸ್ಮರಿಸುತ್ತ ದೈವಯೋಗದಿಂದ ಕಾಲಾಂತರದಲ್ಲಿ ಅವರಿಬ್ಬರೂ ಮೃತರಾದರು. ೭

द्वितीये जन्मनि तथा स्त्रीपुमांसौ बभूवतुः ।
कर्नाटदेशे संभूतौ नगरे चांजनाह्वये  ॥ ८ ॥

ಎರಡನೇ ಜನ್ಮದಲ್ಲಿ ಅವರಿಬ್ಬರೂ ಸ್ತ್ರೀಪುರುಷರಾಗಿ ಹುಟ್ಟಿದರು. ಕರ್ನಾಟಕ ದೇಶದಲ್ಲಿ ಅಂಜನಾ ನಗರದಲ್ಲಿ ವಾಸಮಾಡಿದರು. ೮

दुर्बलौ दुःखिनौ दैवा क्षुत्क्षामावनपत्यकौ ।
तदा वैराग्यमापन्नौ ब्रह्मवृंदं च जग्मतुः  ॥ ९ ॥

ಹಸಿವು ನೀರಡಿಕೆಯಿಂದ ಬಳಲತಕ್ಕವರಾಗಿ, ಸಂತತಿಹೀನರಾಗಿ, ದುರ್ಬಲರಾಗಿ, ದೈವಯೋಗದಿಂದ ದುಃಖಿಗಳಾಗಿ, ತಾಳಲಾರದೇ ಆ ಸ್ತ್ರೀಪುರುಷರಿಬ್ಬರೂ (ದಂಪತಿಗಳು) ವಿರಕ್ತರಾಗಿ ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರನ್ನು ಕುರಿತು ಹೋದರು. ೯

प्रणामं चक्रतुर्भक्त्या हाहेत्युच्चैरथोचतुः ।
किं कृतं कर्म पूर्वस्मिन् उभावत्यन्तदुःखितौ  ॥ १० ॥

ಆ ಬ್ರಹ್ಮವೃಂದಕ್ಕೆ ಪ್ರಣಾಮಗಳನ್ನು ಮಾಡಿ, ಹಾಹಾ ಎಂದು ಉಚ್ಚಧ್ವನಿಯಿಂದ ರೋದನ ಮಾಡುತ್ತ, ಇಬ್ಬರೂ ಅತ್ಯಂತ ದುಃಖಿಗಳಾಗಿ, ಪೂರ್ವಜನ್ಮದಲ್ಲಿ ಏನುಕರ್ಮ ಮಾಡಿರುವೆವು ?೧೦

प्रवदन्तु मुनिश्रेष्ठाः ह्यावां जन्मांतरार्जितम् ।

ಪೂರ್ವಜನ್ಮದಲ್ಲಿ ಘಟಿತವಾದದ್ದು ಯತಿಗಳ ಕ್ಷೋಭದಿಂದ ಸಂಘಟಿತವಾದದ್ದು .

**ಋಷಿಗಳು ಹೇಳುವರು :-**

ತಿಳಿದೂ ತಿಳಿವೂ ಯಾರು ಧನ ಲೋಭದಿಂದ ಹೀಯಾಳಿಸುವರೋ, ೧೨

साधूनां भविता मूर्खः स जन्मांते विनिश्चितम् ।
परोपघातिनीं वाचं वक्ता मूकः प्रजायते ॥ १३ ॥

ಸಾಧುಸಜ್ಜನರನ್ನು ಅಪಮಾನ ಮಾಡುವರೋ, ಜನ್ಮಾಂತರದಲ್ಲಿ ನಿಶ್ಚಯವಾಗಿಯೂ ಮೂರ್ಖರಾಗುವರು. ಪರರಿಗೆ ಘಾತಕವಾದ ಮಾತುಗಳನ್ನು ಆಡುವವರು ಮೂಕರಾಗಿ ಹುಟ್ಟುವರು. ೧೩

यतिद्रोहाद्गुरोर्द्रोहात्पुस्तकद्रव्ययोस्तथा ।
हरणाज्जायते मूकस्तथा मूढोऽन्यजन्मनि ॥ १४ ॥

ಯತಿಗಳ ದ್ರೋಹದಿಂದಲೂ, ಗುರುದ್ರೋಹದಿಂದಲೂ, ಪುಸ್ತಕಗಳನ್ನು ದ್ರವ್ಯಗಳನ್ನು ಹರಣ ಮಾಡುವವರು. ಜನ್ಮಾಂತರದಲ್ಲಿ ಮೂರ್ಖರೂ ಮೂಕರೂ ಆಗಿ ಹುಟ್ಟುವರು. ೧೪

यतिद्रोहश्च भवता जानता पूर्वजन्मनि ।
कृतस्तेन च मूकत्वं त्वयाप्तं कर्मनिर्मितम् ॥ १५ ॥

ನಿಮ್ಮಿಂದ ಪೂರ್ವಜನ್ಮದಲ್ಲಿ ಯತಿದ್ರೋಹವಾಗಿದೆ. ಆ ಯತಿದ್ರೋಹದಿಂದಲೇ ಮೂಕತ್ವವು ನಿಮ್ಮ ಕರ್ಮಾನುಸಾರ ಬಂದಿರುವದು. ೧೫

भार्या तवापि कार्पण्यादंधत्वं प्राप कर्मतः ।
देव द्विजगृहे तीर्थे पुण्यस्थाने तथैव च ॥ १६ ॥

ನಿನ್ನ ಹೆಂಡತಿಯೂ ಕೂಡ ಕೃಪಣತನದಿಂದ ತನ್ನ ಕರ್ಮಾನುಸಾರವಾಗಿ ಅಂಧತ್ವವನ್ನು ಪಡೆದಿರುವಳು. ದೇವರ ಮನೆಯಲ್ಲಿಯ, ಬ್ರಾಹ್ಮಣರ ಮನೆಯಲ್ಲಿಯ, ತೀರ್ಥಕ್ಷೇತ್ರದಲ್ಲಿಯ ಹಾಗೂ ಪುಣ್ಯಸ್ಥಾನದಲ್ಲಿಯ, ೧೬

वपरीत्य महत्पाप श्रृणु ब्राह्मणपुंगव ॥ १८ ॥

ಜನ್ಮಾಂತರದಲ್ಲಿ ಸ್ವಚ್ಛ ದೃಷ್ಟಿಯೋಗ ಉಳ್ಳವರಾಗುವರು. ಪುತ್ರ ಸಂತತಿ ವೃದ್ಧಿಯಾಗುವವು. ಇವರ ವಿರುದ್ಧ ಮಾಡುವವರು, ದೀಪಹರಣ ಮಾಡುವವರು, ಮಹಾಪಾಪಿಗಳಾಗುವರು. ಬ್ರಾಹ್ಮಣಶ್ರೇಷ್ಠನೇ ! ಹೇಳುವೆನು ಕೇಳು. ೧೮

ज्ञात्वाऽनया वित्तलोभाद्यतिक्षोभः कृतो बहु ।
तस्मदंधा बभूवैषा निष्कृतिः क्रियतां तया ॥ १९ ॥

ನಿನ್ನ ಹೆಂಡತಿಯು ತಿಳಿದೂ ತಿಳಿದೂ ದ್ರವ್ಯ ಲೋಭದಿಂದ ಬಹಳಷ್ಟು ಯತಿಕ್ಷೋಭ ಮಾಡಿರುವಳು. ಆದ ಕಾರಣ ಇವಳು ಕುರುಡಳಾಗಿರುವಳು. ಆದ್ದರಿಂದ ಅವಳು ಬೇಗನೇ ಪರಿಹಾರ ಮಾಡಿಕೊಳ್ಳಲಿ. ೧೯

देवालयात् मठस्थानात् सिद्धस्थानात् महापथात् ।
पुराणश्रवणस्थानात् तया दीपो हृतो बलात् ॥ २० ॥

ದೇವಾಲಯದಿಂದಲೂ ಮಠದ ಸ್ಥಾನದಿಂದಲೂ ಸಿದ್ಧಸ್ಥಾನದಿಂದಲೂ ಮಹಾಮಾರ್ಗದಿಂದಲೂ ಪುರಾಣ ಶ್ರವಣಸ್ಥಾನದಿಂದಲೂ ಬಲಾತ್ಕಾರದಿಂದ ದೀಪವನ್ನು ನಿನ್ನ ಹೆಂಡತಿಯು ಹರಣ ಮಾಡಿರುವಳು. ೨೦

तस्मादन्धेयमित्युक्त्वा तत्प्रायश्चिततता त्वया ।
कर्तव्या शीघ्रमेवेह खेदं मा कुरु वै द्विज ॥ २१

ಹೇ ಬ್ರಾಹ್ಮಣನೇ ಏನೂ ಖೇದ ಪಡಬೇಡ. ಅವಳು ಅಂಧಳಾದಳು. ಅದಕ್ಕೆ ಬೇಗನೆ ಪ್ರಾಯಶ್ಚಿತ್ತ ಮಾಡಿಕೋ. ೨೧

दरिद्रेण कथं कार्या निष्कृतिः पूर्वकर्मणः ।
द्रव्यैर्यज्ञैर्महादानैः भाग्यवान् कर्तुमर्हति ॥ २२ ॥

ಪೂರ್ವ ಕರ್ಮದ ಪ್ರಾಯಶ್ಚಿತ್ತ ಪೂರ್ವಕ ಪರಿಹಾರವನ್ನು ದರಿದ್ರನಾದ ನಾನು ಹೇಗೆ ಮಾಡಬೇಕು ? ಮಹಾದಾನಯಜ್ಞ, ದ್ರವ್ಯ ಇವು ಎಲ್ಲವುಗಳನ್ನು ಭಾಗ್ಯವಂತನು ಮಾತ್ರ ಮಾಡಲು ಸಮರ್ಥನಾಗುವನು. ೨೨

ऊचतुः परया भक्त्या ब्रूत तीर्थं महत्तरम्।
भवन्तः साधवो नित्यं कारुण्यात् भक्तवत्सलाः ॥ २४ ॥

ನೀವು ಪರಮಸಾಧುಗಳು. ಯಾವಾಗಲೂ ಕರುಣಾಪೂರ್ಣ ಭಕ್ತವತ್ಸಲರು. ಆದಕಾರಣ ಪರಮ ಭಕ್ತಿಯಿಂದ ಮಹತ್ತರವಾದ ತೀರ್ಥಗಳು ಯಾವುವು ಎಂದು ಹೇಳಿರಿ. ೨೪

अवश्यं पापनाशाय तीर्थं कथयताचिरम्।

ऋषय उचुः –

तीर्थानां प्रवरं तीर्थं प्रयागं मुक्तिदायकम् ॥ २५ ॥

ಪಾಪ ಪರಿಹಾರಕ್ಕೋಸ್ಕರ ತೀರ್ಥಗಳನ್ನು ಬೇಗನೇ ಹೇಳಿರಿ. ಋಷಿಗಳು ಹೇಳುವರು. ಎಲ್ಲ ತೀರ್ಥಗಳಲ್ಲಿ ಶ್ರೇಷ್ಠವಾದ ತೀರ್ಥವು ಪ್ರಯಾಗವು ಮುಕ್ತಿದಾಯಕವು. ೨೫

काश्यां तीर्थं पांचनदं त्रैलोक्यश्रेष्ठमुच्यते।
गंगा गोदावरी कृष्णा तिस्रो गंगाः पवित्रकाः ॥ २६ ॥

ಕಾಶೀಕ್ಷೇತ್ರದಲ್ಲಿಯ ಪಾಂಚನದ ತೀರ್ಥವು ತ್ರೈಲೋಕ್ಯದಲ್ಲಿ ಶ್ರೇಷ್ಠವಾದದ್ದು ಗಂಗಾ, ಗೋದಾವರೀ, ಕೃಷ್ಣಾ, ಮೂರು ಗಂಗಾ ಎಂಬ ಹೆಸರಿನಿಂದ ಪವಿತ್ರ ವಾಗಿರುವವು. ೨೬

तासु स्नानं जपो होमः तपस्तीरे महत्फलम्।
सितासिते यदा स्नातः स्वर्लोकं प्राप्नुयान्नरः ॥ २७ ॥

ಆ ಮೂರು ನದಿಗಳಲ್ಲಿ, ತೀರದಲ್ಲಿ, ಯಾರು ಸ್ನಾನ, ಜಪ, ಹೋಮ, ತಪಃಸು ಮಾಡುವರೋ, ಅವರು ಮಹಾಫಲ ಪಡೆಯುವರು. ಶುಕ್ಲ ಪಕ್ಷದಲ್ಲಿಯಾಗಲಿ ಕೃಷ್ಣ ಪಕ್ಷದಲ್ಲಿಯಾಗಲಿ ಈ ಮೂರು ನದಿಗಳಲ್ಲಿ ಸ್ನಾನಮಾಡುವವರು ಮನುಷ್ಯೋತ್ತಮರು. ಸ್ವರ್ಗ ಲೋಕವನ್ನು ಪಡೆಯುವರು. ೨೭

सिंहराशौ गुरौ याते यावत्संवत्सरं द्विज ॥ २९ ॥

ಒಂದು ವರ್ಷ ಪರ್ಯಂತರ ಸಿಂಹರಾಶಿಗೆ ಗುರು ಬಂದಾಗ ಗೋದಾವರಿಯು ದಿನಾಲು ಸ್ನಾನಮಾಡತಕ್ಕವರ ಪಾಪಕ್ಷಯ ಮಾಡುವವಳಾಗಿ ನಿಃಸಂಶಯವಾಗಿ ಮೋಕ್ಷಪ್ರದಳಾಗುವಳು. ೨೯

तत्तीरे वसतिर्येषां ज्ञात्वा तद्धर्मसंहिताम्।
तेषां जन्मार्जितं पापं नश्यत्येव न संशयः ॥ ३० ॥

ಆ ಗೋದಾವರೀ ತೀರದಲ್ಲಿ ವಾಸಮಾಡಿ ಆ ಗೋದಾವರೀ ನದಿಯ ಹಾಗೂ ತೀರ್ಥಸಂಹಿತೆಯನ್ನು ತಿಳಿದುಕೊಂಡವರ ಜನ್ಮಜನ್ಮಾರ್ಜಿತವಾದ ಎಲ್ಲ ಪಾಪಗಳೂ ನಿಃಸಂಶಯವಾಗಿ ನಾಶವಾಗುವವು. ೩೦

कृष्णायाः श्रृणु माहात्म्यं त्रैलोक्ये चातिपावनम्।
न कोऽपि महतां मध्ये वर्णितुं शक्य एव हि ॥ ३१ ॥

ತ್ರೈಲೋಕ್ಯದಲ್ಲಿ ಪರಮ ಪವಿತ್ರವಾದ ಕೃಷ್ಣಾಮಾಹಾತ್ಮ್ಯವು ಜ್ಞಾನಿಗಳ ಸಮಕ್ಷಮದಲ್ಲಿ ವರ್ಣಿಸುವದು ಯಾರಿಗೂ ಸಾಧ್ಯವಿಲ್ಲ. ೩೧

तथापि करुणां कृत्वा यथाज्ञानं वदाम तत्।
या गतिर्योगयुक्तानां मुनीनां ऊर्ध्वरेतसाम् ॥ ३२ ॥

ಆದರೂ ನಿಮ್ಮ ಮೇಲೆ ಕರುಣಾಳುಳ್ಳವರಾಗಿ ನನಗೆ ತಿಳಿದ ಮಟ್ಟಿಗೆ ಕೃಷ್ಣಾಮಾಹಾತ್ಮ್ಯವನ್ನು ಹೇಳುವೆನು. ಊರ್ಧ್ವರೇತಸ್ವಿಗಳಾದ ಋಷಿಗಳಿಗೆ ಯಾವ ಗತಿಯಾಗುವದೋ, ಯೋಗಿಗಳಿಗೆ ಯಾವ ಗತಿಯಾಗುವದೋ, ೩೨

सा गतिः सर्वजंतूनां कृष्णातीरनिवासिनाम्।
बहुजन्मार्जितैः पुण्यैः कृष्णातीरे वसेन्नरः ॥ ३३ ॥

ಕೃಷ್ಣಾತೀರದಲ್ಲಿ ವಾಸಮಾಡುವ ಎಲ್ಲ ಪ್ರಾಣಿಗಳಿಗೂ ಆ ಗತಿಯಾಗುವದು.

ಕೃಷ್ಣಾತೀರದಲ್ಲಿ ಇರುವವರ ಪಾಪವು ಸಂಪೂರ್ಣವಾಗಿ ನಾಶವಾಗುವವು. ಪವಿತ್ರಳಾದ ಕೃಷ್ಣವೇಣಿಯು ಜನ್ಮ ಜನ್ಮಾಂತರದಲ್ಲಿ ಅರ್ಜಿತವಾದ ಎಲ್ಲ ಪಾಪಗಳನ್ನೂ ನಾಶ ಮಾಡುವಳು. ೩೫

प्रतिग्रहान्निवृत्तश्च यदृच्छालाभतुष्टिमान् ।
त्यक्त्वा पैशून्यमन्येषां यो वसेत्स लभेत्फलम् ॥ ३६ ॥

ಪ್ರತಿಗ್ರಹ ಸ್ವೀಕಾರ ಮಾಡದೇ ಯದೃಚ್ಛಾಲಾಭ ಸಂತುಷ್ಟರಾಗಿ, ದುರಾಶೆ ಬಿಟ್ಟವರಿಗೆ, ಯಾವ ಫಲ ಸಿಗುವದೋ ಆ ಫಲವು ಅವರಿಗೆ ಸಿಗುವದು. ೩೬

गत्वा च कृष्णवेणायाः तीरे वस सभार्यकः ।
वांछितार्थान्वरान्देवो दास्यत्यचिरमूर्जितान् ॥ ३७ ॥

ಬೇಗನೇ ಹೋಗಿ ಕೃಷ್ಣಾತೀರದಲ್ಲಿ ಸಭಾರ್ಯನಾಗಿ ವಾಸಮಾಡು. ಪರಮಾತ್ಮನು ಬೇಗನೇ ಇಷ್ಟಾರ್ಥವನ್ನು ಪೂರ್ಣ ಮಾಡುವನು. ೩೭

॥ इति स्कांदे कृष्णामाहात्म्ये चतुश्चत्वारिंशोऽध्यायः ॥

❀ ❀ ❀

## ॥ अथ पंचचत्वारिंशोऽध्यायः ॥

ब्राह्मण उवाच –

महाबलेश्वर जटाजूटोद्भूताघहारिणी ।
कृष्णावेणी महागंगा यावत्सागरगामिनी ॥ १ ॥

किं यास्ये तीर्थवर्यं मां प्रवदन्तु मनस्विनः ॥ २ ॥

ಮಹಾಜ್ಞಾನಿಗಳಾದ ನೀವು ನನಗೆ ಆ ಕೃಷ್ಣವೇಣೀ ತಟಾಕದಲ್ಲಿ ಅನೇಕ ತೀರ್ಥಗಳು ಪದೇ-ಪದೇ, ಹೆಜ್ಜೆ-ಹೆಜ್ಜೆಗೆ ಇರುವವು. ಎಂದು ಹೇಳಿದಿರಿ ಅವುಗಳಲ್ಲಿ ಯಾವತೀರ್ಥಗಳಲ್ಲಿ ಹೊರಡಬೇಕು ಹೇಳಿರಿ. ೨

इति तद्वाक्यमाकर्ण्य हर्षमापुर्महर्षयः ।

ऋषय ऊचुः –

आस्तिकोऽसि महाबुद्धे वांछितं प्राप्स्यसे यतः ॥ ३ ॥

ಈ ಮಾತುಗಳನ್ನು ಕೇಳಿ ಮಹರ್ಷಿಗಳು ಪರಮ ಆನಂದಭರಿತರಾಗಿ ಈ ಮಾತನ್ನು ಹೇಳಿದರು. ಮಹಾಬುದ್ಧಿವಂತರಾದ ನೀವು ಇಷ್ಟಾರ್ಥವನ್ನು ಪಡೆಯುವವರಾಗಿರಿ. ೩

ज्वालानृसिंहतीर्थं तु कृष्णवेण्यां महामते ।
पंचवाणप्रमाणं तु तत्र गच्छाविचारयन् ॥ ४ ॥

ಮಹಾಬುದ್ಧಿವಂತರೇ ! ಕೃಷ್ಣವೇಣಿ ತಟಾಕದಲ್ಲಿ ಜ್ವಾಲಾನೃಸಿಂಹತೀರ್ಥವು ಪಂಚಬಾಣ ಪ್ರಮಾಣವುಳ್ಳದ್ದಾಗಿ ಇರುವದು. ನೀವು ವಿಚಾರಮಾಡದೇ ಅಲ್ಲಿಗೆ ಹೊರಡಿರಿ. ೪

धर्मानुसारिन् तत्वज्ञ पृच्छतस्ते पुनः पुनः ।
त्वत्प्रियार्थं समाख्यातं गुह्यमेतत्सनातनम् ॥ ५ ॥

ತತ್ವಜ್ಞಾನಿಗಳಾದ ನೀವು ಧರ್ಮಾನುಸಾರಿಗಳಾಗಿ ಪುನಃ-ಪುನಃ ಪ್ರಶ್ನೆ ಮಾಡುವಿರಿ. ನಿಮಗೆ ಅತ್ಯಂತ ಪ್ರೀತಿಯಿಂದ ಸನಾತನವಾದ ಪರಮಗೌಪ್ಯವಾದ ಆ ಜ್ವಾಲಾತೀರ್ಥದ ಮಾಹಾತ್ಮ್ಯವನ್ನು ಹೇಳುವೆನು. ಕೇಳಿರಿ. ೫

इति तद्वाक्यमाकर्ण्य श्रद्धालुर्ब्राह्मणोत्तमः ।
सभार्यः प्रत्युवाचैतान् प्रणम्य च पुनः पुनः ॥ ६ ॥

ಈ ಮಾತುಗಳನ್ನು ಕೇಳಿ, ಶ್ರದ್ಧಾಳುವಾದ ಆ ಬ್ರಾಹ್ಮಣೋತ್ತಮನು

युष्मद्दर्शनतो मुक्ता तीर्थं गच्छाव सुव्रताः ।
इत्युक्त्वा तान् प्रणम्याशु कृष्णवेण्यास्तटे शुभे ॥ ८ ॥

ನಿಮ್ಮ ದರ್ಶನದಿಂದಲೇ ನಾವು ಮುಕ್ತರಾದೆವು. ವ್ರತಸ್ಥರಾಗಿ ತೀರ್ಥಕ್ಕೆ ಹೊರಡುವೆವು. ಹೀಗೆ ಹೇಳಿ ಆ ಬ್ರಾಹ್ಮಣರಿಗೆ ನಮಸ್ಕಾರ ಮಾಡಿ ಬೇಗನೇ ಶುಭಕರವಾದ ಕೃಷ್ಣವೇಣೀ ತಟಾಕದಲ್ಲಿ, ೮

ज्वालानृसिंहतीर्थं तौ जग्मतुर्भक्तितत्परौ ।
कन्यागते गुरौ यावद् द्वादशाब्दावधि तटे ॥ ९ ॥

ಆ ದಂಪತಿಗಳಿಬ್ಬರೂ ಭಕ್ತಿಪುರಃಸರವಾಗಿ ಜ್ವಾಲಾನೃಸಿಂಹತೀರ್ಥವನ್ನು ಕುರಿತು ಹೋದರು. ಹನ್ನೆರಡು ವರ್ಷಪರ್ಯಂತರ ಕನ್ಯರಾಶಿಗೆ ಗುರುಬರುವವರೆಗೂ, ೯

तपश्चक्रतुरत्युग्रं सार्धैकादशवत्सरम् ।
अन्धमूकौ दंपती तौ कृत्वा तत्राश्रमं शुभम् ॥ १० ॥

ಹನ್ನೊಂದು ವರ್ಷಪರ್ಯಂತರ ಉಗ್ರವಾದ ತಪಃಸು ಮಾಡಿದರು. ಕುರುಡ-ಮೂಕರಾದ ಆ ದಂಪತಿಗಳು ಶುಭವಾದ ಆಶ್ರಮವನ್ನು ಮಾಡಿಕೊಂಡು ವಾಸ ಮಾಡಿದರು. ೧೦

शरीरं तीर्थदेवेभ्यः समर्प्य च यथाविधि ।
शरीरं तारकं देव जीवेद्वा मृतिमेतु वा ॥ ११ ॥

ಶರೀರವನ್ನು ತೀರ್ಥಾಭಿಮಾನಿ ದೇವತೆಗಳಿಗೆ ಯಥಾವಿಧಿ ಪೂರ್ವಕವಾಗಿ ಸಮರ್ಪಣ ಮಾಡಿದರು. ಹೇ ದೇವತೆಗಳೇ! ಈ ಶರೀರವನ್ನು ರಕ್ಷಣ ಮಾಡುವದು ನಿಮಗೆ ಒಪ್ಪಿಸಿರುವೆನು. ಬೇಕಾದರೆ ಬದುಕಿಸಲಿ. ಅಥವಾ ಮರಣವನ್ನು ಪಡೆಯಲಿ. ೧೧

विक्रीतस्य पशोर्यद्वद्धरणेन पुमान्श्रमी ।
तौ देहममतां त्यक्त्वा तीर्थदेहान् समर्प्य च ॥ १२ ॥

निवृत्तौ तौ महाभक्त्या गंगास्नानं प्रचक्रतुः ॥ १३ ॥

ಆ ದಂಪತಿಗಳಿಬ್ಬರೂ ತಮ್ಮ ದೇಹವನ್ನು ತೀರ್ಥದೇವತೆಗಳಿಗೆ ಸಮರ್ಪಣೆಮಾಡಿ ದೇವತೆಗಳಿಂದ ವಂದನೀಯವಾದ ಕೃಷ್ಣವೇಣೀ ತಟಾಕವಲ್ಲಿ ನಿವೃತ್ತಿಮಾರ್ಗದಲ್ಲಿ ಇದ್ದುಕೊಂಡು ಮಹಾಭಕ್ತಿಯಿಂದ ಗಂಗಾಸ್ನಾನವನ್ನು ಮಾಡಿದರು. ೧೩

नानांतराय सल्लग्नौ गंगाध्यानपरायणौ ।
ददर्शतुर्न वै सिद्धि अंधमूका उभावपि ॥ १४ ॥

ಅಂಧ-ಮೂಕರಾದ ಆ ದಂಪತಿಗಳಿಬ್ಬರೂ ಅನೇಕ ವಿಘ್ನಗಳೂ ಉಂಟಾದರೂ ಗಂಗಾಧ್ಯಾನ ಪರಾಯಣರಾದರೂ ಸಿದ್ಧಿಯನ್ನು ಪಡೆಯಲಿಲ್ಲ. ೧೪

व्रतं निरशनं गृह्य तेपतुर्दारुणं तपः ।
द्वादशे वत्सरे पूर्णे कन्यासंस्थे गुरौ पुनः ॥ १५ ॥

ನಿರಶನವ್ರತವನ್ನು ಗ್ರಹಣಮಾಡಿ ದಾರುಣವಾದ ತಪಃಸನ್ನು ಮಾಡಿದರು. ಹನ್ನೆರಡು ವರ್ಷ ಪೂರ್ಣವಾದ ಮೇಲೆ ಪುನಃ (ಕನ್ಯಾಗತ) ಕನ್ಯಾರಾಶಿಗೆ ಗುರು ಬಂದಕೂಡಲೇ, ೧೫

तयोर्दृष्टिपथं यातो नारसिंहो दयानिधिः ।
नेत्रेऽदात् द्विजपत्न्यै तु वाचं चैव द्विजातये ॥ १६ ॥

ದಯಾನಿಧಿಯಾದ ಶ್ರೀನರಸಿಂಹದೇವರು ಆವರಿಬ್ಬರಿಗೂ ಕಣ್ಣು-ಬಾಯಿ ಎರಡನ್ನೂ ಕೊಟ್ಟನು. ಬ್ರಾಹ್ಮಣಪತ್ನಿಗೆ ದೃಷ್ಟಿ, ಬ್ರಾಹ್ಮಣನಿಗೆ ವಾಗೇಂದ್ರಿಯ ಶಕ್ತಿಯನ್ನೂ ಕೊಟ್ಟರು. ೧೬

मूकोवाच तदा देवं त्राहि त्राहीति चासकृत् ।
मूर्तिं ददर्शतुः स्वप्ने उभावपि तपस्विनौ ॥ १७ ॥

ಪ್ರಾತಃಕಾಲದಲ್ಲಿ ಕೃಷ್ಣವೇಣಿಯ ಜಲದಲ್ಲಿ ಇರುವ ನನ್ನ ಮೂರ್ತಿಯನ್ನು ತೆಗೆದು ಕೊಂಡು ಹೋಗು. ೧೮

मदाज्ञां ब्रूहि राज्ञे त्वं नोचेद्भस्म करोम्यहम्।
जलादानीय सद्भक्त्या सिद्धभूमौ निवेशय ॥ १९ ॥

ನನ್ನ ಆಜ್ಞೆಯನ್ನು ಆ ಭೀಮರಾಜನಿಗೆ ತಿಳಿಸು. ತಿಳಿಸದಿದ್ದರೆ ನಾನು ನಿನ್ನನ್ನು ಭಸ್ಮ ಮಾಡುವೆನು. ನೀರಿನಿಂದ ತೆಗೆದುಕೊಂಡು ಪರಮಭಕ್ತಿಯಿಂದ ಸಿದ್ಧಭೂಮಿಯಲ್ಲಿ ಸ್ಥಾಪನೆಮಾಡು. ೧೯

स्वप्नान्ते ब्राह्मणो दृष्ट्वा कांतां प्रोवाच हर्षितः।
पतिव्रतां महाभागां कथयामास विस्तरात् ॥ २० ॥

ಸ್ವಪ್ನಾನಂತರದಲ್ಲಿ ಬ್ರಾಹ್ಮಣನು ತನ್ನ ಪತ್ನಿಯನ್ನು ಕಂಡು ಪರಮ ಹರ್ಷಿತನಾಗಿ ಹೇಳಿದನು. ಮಹಾಭಾಗ್ಯವಂತಳಾದ ಪತಿವ್ರತೆಯಾದ ಭಾರ್ಯಳಿಗೆ ಎಲ್ಲ ಶ್ರೀಲಕ್ಷ್ಮೀ ನರಸಿಂಹ ದೇವರ ಸಂದೇಶವನ್ನು ಹೇಳಿದನು. ೨೦

कृपा जाता नारसिंहस्य भद्रे कृष्णातीरे नैव भूतं भविष्यत्।
उक्तो रात्रौ स्वामिनाहं यदाद्य दृष्टं भद्रे प्रीणनं पूर्णमेतत् ॥ २१ ॥

ಹೇ ಭದ್ರಸುಮಂಗಲೀ! ಶ್ರೀಲಕ್ಷ್ಮೀನರಸಿಂಹ ದೇವರ ದಯೆ ನಮ್ಮ ಮೇಲೆ ಆಯಿತು. ಭೂತಕಾಲದ್ದೂ ಅಲ್ಲ. ಭವಿಷ್ಯತ್ಕಾಲದ್ದೂ ಅಲ್ಲ. ಇವತ್ತೇ ರಾತ್ರಿ ಸ್ವಾಮಿಯಾದ ಶ್ರೀಲಕ್ಷ್ಮೀನರಸಿಂಹದೇವರನ್ನು ನಾನು ನೋಡಿದೆ. ಈ ನಮ್ಮ ತಪಃಸು ಪೂರ್ಣವಾಯಿತು ಎಂದು ಹೇಳಿದನು. ೨೧

भार्ये किं वर्णयाम्यद्य वाचं मे करुणाकरः।
दत्तवान् पुण्यनिलयः तपसा किं न साध्यते ॥ २२ ॥

ಭಾರ್ಯಳೇ! ಕರುಣಾಪೂರ್ಣನಾದ ಆ ಪರಮಾತ್ಮನನ್ನು ಏನಂತ ವರ್ಣಿಸಲಿ? ಪುಣ್ಯದ ಖಣಿಯಾದ ಆ ಭಗವಂತನು ನನಗೆ ವಾಕ್ ಶಕ್ತಿಯನ್ನು ಕೊಟ್ಟನು. ತಪಃಸಿನಿಂದ ಏನು ಸಾಧಿಸಲಿಕ್ಕಿಲ್ಲ. ೨೨

ब्राह्मणश्च कृपापूर्णस्त्वयाज्ञानमाहितम् ॥ २४ ॥

ಬ್ರಾಹ್ಮಣರು ಅತ್ಯಂತ ಕೃಪಾ ಪೂರ್ಣರು. ಏನು ಧನ್ಯರು-ಏನು ಧನ್ಯರು ?ಅವರು ತಮ್ಮ ಸಮಾಧಾನಗುಣವನ್ನು ತೋರಿಸಿದರು. ನಮ್ಮಿಬ್ಬರಿಗೂ ಜ್ಞಾನವನ್ನು ಹುಟ್ಟಿಸಿದರು. ೨೪

येन मार्गेण यद् दृष्टं हरिरूपमनामयम्।
गुरूणां कृपया न स्यात् किं किं तद्देहिनामपि ॥ २५ ॥

ನಿರ್ದೋಷಿಯಾದ ಭಗವದ್ರೂಪವನ್ನು ಯಾವ ಮಾರ್ಗದಿಂದ ತೋರಿಸಿದರೋ, ಅಂಥ ಗುರುಗಳ ಕೃಪಾ ಇರದಿದ್ದರೆ ಈ ದೇಹವನ್ನು ತೆಗೆದುಕೊಂಡು ಏನು ಮಾಡುವದು. ೨೫

साधूनां समचित्तानां तथा दीनानुकंपिनाम्।
भावानुरूपी भगवान् वपुर्दर्शयति स्वयम् ॥ २६ ॥

ಸುಖ-ದುಃಖಗಳನ್ನು ಸಮವಾಗಿ ತಿಳಿದುಕೊಂಡ, ಸಾಧು-ಸಜ್ಜನರ ಮೇಲೆ ಹಾಗೂ ದೀನರ ಮೇಲೆ ದಯಾ ಉಳ್ಳವರಾಗಿ ಭಾವಾನುರೂಪರಾಗಿ ಸಾಕ್ಷಾತ್ ನಾರಾಯಣನೇ ತನ್ನ ರೂಪವನ್ನು ತೋರಿಸುವನು. ೨೬

मातरो गुरवो ज्ञेयाः पितरो बान्धवास्तथा।
स्वामिनो बुद्धिदातारो यस्माद् दृष्टं महत्पदम् ॥ २७ ॥

ತಂದೆ-ತಾಯಿಗಳು, ಗುರುಗಳು, ಪಿತೃಗಳು, ಬಾಂಧವರು, ಸ್ವಾಮಿಗಳು ಎಲ್ಲರೂ ಬುದ್ಧಿ ಪ್ರದರಾಗಿ ಮಹತ್ತರವಾದ ಸ್ಥಾನವನ್ನು ತೋರಿಸುವರು. ೨೭

अन्योन्यमभिभाष्येवं विशुद्धेनान्तरात्मना।
प्रातरुत्थाय सहसा राजानममितौजसम् ॥ २८ ॥

ದಂಪತಿಗಳಿಬ್ಬರೇ ಪರಸ್ಪರವಾಗಿ ಮಾತನಾಡಿಕೊಂಡು, ವಿಶುದ್ಧವಾದ ಅಂತರಂಗದಿಂದ ಪ್ರಾತಃಕಾಲದಲ್ಲಿ ಎದ್ದು ಸಹಸಾ ತೇಜಸ್ವಿಯಾದ ರಾಜನನ್ನು ಕಂಡರು. ೨೮

[illegible]

राजा परमधर्मात्मा प्रणनाम विनम्रधीः ॥ ३० ॥

ಆ ಬ್ರಾಹ್ಮಣನು ರಾಜನನ್ನು ಕಂಡು, ಎಲ್ಲ ಆದ ಘಟನೆಯನ್ನು ವರ್ಣನೆಮಾಡಿ ಹೇಳಿದನು. ಪರಮ ಧರ್ಮಾತ್ಮನಾದ ರಾಜನೂ ವಿನಮ್ರವಾದ ಬುದ್ಧಿಯುಳ್ಳವನಾಗಿ ನಮಸ್ಕಾರ ಮಾಡಿದನು. ೩೦

तौ प्रोवाच महातेजा संस्थाप्य च निजासने ।
उपविष्टो तदा राजा पूजयामास सादरम् ॥ ३१ ॥

ಅವರಿಬ್ಬರೂ ಮಹಾತೇಜಸ್ವಿಗಳಾಗಿ ತಮ್ಮ ನಿಜವಾದ ಆಸನವಲ್ಲಿ ಆರೂಢ ರಾದರು. ಆಗ ರಾಜನು ಆದರ ಪೂರ್ವಕವಾಗಿ ಪೂಜೆ ಮಾಡಿದನು. ೩೧

रत्नैर्वस्त्रैः सुगंधाद्यैर्भूषणैः समलंकृतौ ।
अमात्यैरपि लोकैश्च नागरैरपि भूषितौ ॥ ३२ ॥

ರತ್ನಗಳಿಂದಲೂ, ಸುಗಂಧ ದ್ರವ್ಯಗಳಿಂದಲೂ, ಆಭರಣಗಳಿಂದಲೂ, ಅಲಂಕೃತರಾದರು. ಮಂತ್ರಿಜನರಿಂದಲೂ, ಪಟ್ಟಣಿಗರಿಂದಲೂ ಭೂಷಿತರಾದರು. ೩೨

तन्मुखाज्ज्ञानवृत्तांतं किमित्येवं सुविस्मितः ।
प्रहर्षमतुलं लेभे भीमोऽसौ रविवंशजः ॥ ३३ ॥

ಸೂರ್ಯವಂಶಜನಾದ ಆ ಭೀಮರಾಜನೂ ಕೂಡ ಅವರ ಮುಖದಿಂದ ಎಲ್ಲ ವೃತ್ತಾಂತವನ್ನು ತಿಳಿದುಕೊಂಡು, ಏನಿದು ಬಹಳ ಆಶ್ಚರ್ಯವು ಎಂದು ಅತಿಶಯ ಸಂತೋಷ ಬಟ್ಟನು. ೩೩

राज़ोवाच –

तपसाराधितो देवो नारासिंहो दयानिधिः ।
प्रत्यक्षं दृष्टिवचसी प्रापतुर्द्विजवाक्यतः ॥ ३४ ॥

ನೀವು ತಪಸ್ಸಿನಿಂದ ದಯಾನಿಧಿಯಾದ ಶ್ರೀಲಕ್ಷ್ಮೀನರಸಿಂಹದೇವರನ್ನು ಆರಾಧನೆ

[illegible]
ಭಾರ್ಯೆಳೂ ಧನ್ಯಳು. ೩೫

धन्योऽयं यस्य देशे च ब्राह्मणानि वसन्ति हि।
अहो मे पितरस्तुष्टा मद्गृहं पावनं कृतम् ॥ ३६ ॥

ಯಾವ ದೇಶದಲ್ಲಿ ಬ್ರಾಹ್ಮಣರು ವಾಸಮಾಡುವರೋ, ಆ ದೇಶವು ಧನ್ಯವು. ಇವತ್ತು ನನ್ನ ಪಿತೃಗಳೂ ಸಂತುಷ್ಟರಾದರು. ನನ್ನ ಮನೆಯೂ ಪರಮ ಪವಿತ್ರವಾಯಿತು. ೩೬

आज्ञां कुरु तमां क्षिप्रं किं कार्यमतिदुर्लभम्।
तत्करिष्यामि सहसा साधूनामिष्टदोस्म्यहम् ॥ ३७ ॥

ಬೇಗನೇ ನನಗೆ ಆಜ್ಞಾಮಾಡು. ದುರ್ಲಭವಾದದ್ದು ಏನಿದೆ? ಅತಿ ದುರ್ಲಭವಾದದ್ದು ಯಾವದು? ಸಾಧು-ಸಜ್ಜನರಿಗೆ ಪರಮ ಇಷ್ಟ ವಾದದ್ದನ್ನು ಶ್ರಮ ಇಲ್ಲದೇ ಮಾಡುವೆನು. ೩೭

ब्राह्मण उवाच–

जलादुद्धृत्य तां मूर्तिं सिद्धस्थाने निवेशय।
ब्राह्मणैः सहमंत्रज्ञैः यावद्भूरविचंद्रकाः ॥ ३८ ॥

ಮಂತ್ರಜ್ಞರಾದ ಬ್ರಾಹ್ಮಣರಕಡೆಯಿಂದ ಆ ಮೂರ್ತಿಯನ್ನು ನೀರಿನಿಂದ ಮೇಲೆ ಎತ್ತಿ ಭೂ, ಸೂರ್ಯ, ಚಂದ್ರ ಇರುವವರೆಗೂ ಆ ಜ್ವಾಲಾ ನರಸಿಂಹನೂ ಪೂಜಿತನಾಗಬೇಕು. ಅಂತಹ ಸಿದ್ಧಸ್ಥಾನದಲ್ಲಿ ಪ್ರತಿಷ್ಠಾಪಿಸು. ೩೮

इति तद्वाक्यमाकर्ण्य कृष्णातीरं जगाम ह।
राजामात्यैर्जानपदैर्नागरैर्ब्राह्मणोत्तमैः ॥ ३९ ॥

ಹೀಗೆ ಆ ಬ್ರಾಹ್ಮಣರ ಮಾತು ಕೇಳಿ ರಾಜನು ಅಮಾತ್ಯರಿಂದಲೂ, ಪಟ್ಟಣಿಗರಿಂದಲೂ, ಪ್ರಜಾಜನರಿಂದಲೂ, ಬ್ರಾಹ್ಮಣೋತ್ತಮರಿಂದಲೂ ಕೂಡಿಕೊಂಡು ಕೃಷ್ಣವೇಣೀ ನದಿ ತೀರಕ್ಕೆ ಹೋದನು. ೩೯

नृत्यगीतकलाभिज्ञैस्तटाके स्थापिता जनैः ॥ ४२ ॥

ಬಜಂತ್ರಿ, ಶಂಖ, ಸಗಾರಿ, ಮೃದಂಗಗಳಿಂದಲೂ, ನರ್ತನ, ಗಾಯನ ಕಲಾವಂತರಾದ ಜನರಿಂದಲೂ, ಕೂಡಿಕೊಂಡು ಪರಮಸಂಭ್ರಮದಿಂದ ಕೃಷ್ಣವೇಣೀ ತಟಾಕದಲ್ಲಿ ಪ್ರತಿಷ್ಠೆ ಮಾಡಿದರು. ೪೨

ज्वालानृसिंहमकरोन्नाम तस्य द्विजैः सह।
पूजां चक्रुर्महाभक्त्या नानालंकारभूषणैः ॥ ४३ ॥

ಆ ರಾಜನು ಎಲ್ಲ ಬ್ರಾಹ್ಮಣರಿಂದ ಕೂಡಿಕೊಂಡು, ಆ ಮೂರ್ತಿಗೆ ಜ್ವಾಲಾ ನೃಸಿಂಹ ಎಂದು ನಾಮಕರಣ ಮಾಡಿದನು ಮತ್ತು ನಾನಾವಿಧವಾದ ಅಲಂಕಾರ ಭೂಷಣಗಳಿಂದ ಮಹಾಭಕ್ತಿ ಪುರಃಸರವಾಗಿ ಪೂಜಾಮಾಡಿದರು. ೪೩

जग्मुः स्वं स्वं निवेशं च उषतुस्तस्य सन्निधौ।
एवं बहुतिथे काले मूर्त्यां तेजः समाहितम् ॥ ४४ ॥

ಎಲ್ಲರೂ ತಮ್ಮ ತಮ್ಮ ವಾಸಸ್ಥಳಕ್ಕೆ ಹೋದರು. ಆ ದಂಪತಿಗಳು ಆ ಜ್ವಾಲಾ ನೃಸಿಂಹನ ಸನ್ನಿಧಿಯಲ್ಲಿ ವಾಸಮಾಡಿದರು. ಹೀಗೆ ಎಷ್ಟೋ ದಿವಸಗಳವರೆಗೆ ಈ ಮೂರ್ತಿಯಲ್ಲಿ ತೇಜಸ್ಸು ತುಂಬಿದೆ. ೪೪

उभाभ्यामैक्यता प्राप्ता नारसिंहपदांबुजे।
कथितं नारसिंहस्य चरितं परमाद्भुतम् ॥ ४५ ॥

ಆ ದಂಪತಿಗಳಿಬ್ಬರೂ, ಆ ನಾರಸಿಂಹನ ಪಾದಕಮಲದಲ್ಲಿ ಹೊರಟುಹೋದರು. ಈ ಅದ್ಭುತವಾದ ಈ ಜ್ವಾಲಾನರಸಿಂಹ ದೇವರ ಚರಿತ್ರೆಯನ್ನು ನಾನು ನಿಮಗೆ ಹೇಳಿದೆನು. ೪೫

यः श्रृणोतीममध्यायं श्रावयेद्वा समाहितः।
तस्येंद्रियाणां पटुता भवेन्नृहरिभक्तितः ॥ ४६ ॥

श्रीनृसिंह प्रसादेन सर्वान् कामान् अवाप्नुयात् ।
गतिं प्राप्नोति ललितां योगिनामप्यगोचराम् ॥ ४७ ॥

ಶ್ರೀಲಕ್ಷ್ಮೀನೃಸಿಂಹ ದೇವರ ಪ್ರಸಾದದಿಂದ ಯೋಗಿಗಳಿಗೂ ಅಗೋಚರವಾದ, ಸುಲಲಿತವಾದ, ಉತ್ತಮವಾದ ಗತಿಯು ಲಭಿಸುವದು. ಎಲ್ಲ ಕಾಮನೆಗಳೂ ಪೂರ್ಣವಾಗುವವು. ೪೭

॥ इति श्रीस्कांदे कृष्णामाहात्म्ये ज्वालानृसिंहमाहात्म्यवर्णनं नाम पञ्चचत्वारिंशत्तमोऽध्यायः ॥

(कोले ज्वाला नरसिंह पुर-ता.इसलामपूर जि.सांगली)

❀ ❀ ❀

## ॥ अथ षट्चत्वारिंशत्तमोऽध्यायः ॥

ऋषयः ऊचुः –

ಋಷಿಗಳು ಪ್ರಶ್ನೆ ಮಾಡಿದರು –

कदा हि फलभूयस्त्वं कृष्णायां पिंडदानतः ।
कालं तं नः समाख्याहि लक्षणादिविभेदतः ॥ १ ॥

ಕೃಷ್ಣವೇಣೀಯಲ್ಲಿ ಪಿಂಡದಾನದಿಂದ ಯಾವ ಕಾಲದಲ್ಲಿ ಮಹಾಫಲಪ್ರದವಾಗುವದು ? ಲಕ್ಷಣಗಳ ಪ್ರಕಾರ ಭೇದಗಳನ್ನೂ, ಕಾಲಗಳನ್ನೂ ನಮಗೆ ಹೇಳಿರಿ. ೧

स्कन्द उवाच –

कृष्णावेण्यास्तटाके तु पिंडं दद्याद्विचक्षणः ।
अधिमासे जन्मदिने चास्तेऽपि गुरुशुक्रयोः ॥ २ ॥

ಸ್ಕಂದನು ಅಂದನು :–

ಬುದ್ಧಿವಂತನು ಕೃಷ್ಣವೇಣೀ ತಟಾಕದಲ್ಲಿ ಪಿಂಡದಾನ ಮಾಡಲೇಬೇಕು. ಅಧಿಕ ಮಾ– ಲಿ, ಜನ ದಿನದಲ್ಲಿ, ಗುರು ಶುಕ್ರ ಅಸ್ತ ಕಾಲದಲ್ಲಿ. ೨

[illegible] ॥ ४ ॥

ಕೃಷ್ಣಪಕ್ಷದಲ್ಲಿ ದಾನಮಾಡಿದರೆ ನೂರು ಪಟ್ಟು ಫಲಬರುವದು. ರಾಹು ಪರ್ವಕಾಲದಲ್ಲಿ ಸಹಸ್ರಪಟ್ಟು, ಸಂಕ್ರಮಣ ಪರ್ವಕಾಲದಲ್ಲಿ ಲಕ್ಷಪಟ್ಟು, ವ್ಯತೀಪಾತದಲ್ಲಿ ಅನಂತಪಟ್ಟು ಫಲಬರುವದು. ೪

चंद्रसूर्योपरागे तु यत्कर्तव्यं तदुच्यते ।
सर्वं हेममयं दानं सर्वे ब्रह्मसमा द्विजाः ॥ ५ ॥

ಚಂದ್ರಗ್ರಹಣ, ಸೂರ್ಯಗ್ರಹಣ ಪರ್ವಕಾಲದಲ್ಲಿ ಏನು ಮಾಡತಕ್ಕದ್ದು ಹೇಳುತ್ತೇನೆ. ಎಲ್ಲ ದಾನವು ಸುವರ್ಣದಾನವು. ಎಲ್ಲ ಬ್ರಾಹ್ಮಣರೂ ಬ್ರಹ್ಮಜ್ಞಾನಿಗಳ ಸಮರಾಗುವರು. ೫

सर्वगंगासमं तोयं राहुग्रस्ते दिवाकरे ।
पर्वकाले तु संप्राप्ते न स्नायाद्दृढविग्रहः ॥ ६ ॥

ಸೂರ್ಯಗ್ರಹಣ ಪರ್ವಕಾಲದಲ್ಲಿ ಎಲ್ಲ ನೀರುಗಳೂ ಗಂಗೆಯ ಸಮಾನ ಫಲಪ್ರದವು. ದೇಹದಾರ್ಢ್ಯವಿದ್ದಾಗ ಯಾರು ಸೂರ್ಯಗ್ರಹಣ ಪರ್ವಕಾಲಸ್ನಾನ ಮಾಡುವದಿಲ್ಲವೋ, ೬

सप्तजन्मसु रोगी स्याद् दुःखी चैव पुनःपुनः ।
व्यतीपातेऽथ संक्रांतौ ग्रहणे चंद्रसूर्ययोः ॥ ७ ॥

ಏಳು ಜನ್ಮಗಳವರೆಗೆ ರೋಗಿಯಾಗುವನು. ಪುನಃ-ಪುನಃ ದುಃಖಿಯಾಗುವನು. ವ್ಯತೀಪಾತದಲ್ಲಿ, ಸಂಕ್ರಾಂತಿಯಲ್ಲಿ, ಚಂದ್ರ-ಸೂರ್ಯಗ್ರಹಣ ಕಾಲಗಳು, ೭

पुण्यकालस्तदा ज्ञेयो यदा मृत्युरुपस्थितः ।
तदा गोभूहिरण्यादि दत्तमक्षय्यतां व्रजेत् ॥ ८ ॥

ಪುಣ್ಯಕಾಲಗಳೆಂದು ತಿಳಿಯತಕ್ಕದ್ದು. ಯಾವಾಗ ಮೃತ್ಯುಕಾಲ ಹತ್ತರ ಬರುವವೋ ಆ ಕ್ಷಣದಲ್ಲಿ ಗೋದಾನ, ಭೂದಾನ, ಹಿರಣ್ಯದಾನಾದಿಗಳನ್ನು ಮಾಡಿದರೆ, ಅಕ್ಷಯ್ಯವಾದ ಫಲ ಬರುವದು. ೮

कृष्णातीरे विशेषेण दानमानंत्यमश्नुते ॥ ११ ॥

ಬ್ರಾಹ್ಮಣನು ಸರ್ವಧರ್ಮಮಯಸ್ವರೂಪನು. ಸತ್ಸಹವಾಸವೇ ಮೋಕ್ಷವು. ಕೃಷ್ಣಾತೀರವು ವಿಶೇಷವಾಗಿ ದಾನದ ಅನಂತಫಲ ಕೊಡುವಂತಹದು. ೧೧

एतत् श्रुत्वा महद्वाक्यं स्कंदेनोक्तं द्विजर्षभाः ।
पुनस्तीर्थान्यनेकानि कृष्णायां फलदानि च ॥ १२ ॥

ಬ್ರಾಹ್ಮಣರು, ಸ್ಕಂದನು (ಷಣ್ಮುಖನು), ಹೇಳುವ ಈ ಮಹದ್ವಾಕ್ಯವನ್ನು ಕೇಳಿ ಮತ್ತೆ ಅನೇಕತೀರ್ಥಗಳ ಮಾಹಾತ್ಮ್ಯವನ್ನೂ, ಕೃಷ್ಣವೇಣಿಯ ಮಹಾಫಲಗಳನ್ನೂ ಹೇಳಿರಿ. ೧೨

कीदृशानीति वदनः साकल्येन हरात्मज ।
श्रृण्वतां त्वन्मुखांभोजान्न तृप्तिर्हि कथासुधाम् ॥ १३ ॥

ಮಹಾದೇವನ ಪುತ್ರನಾದ ಷಣ್ಮುಖನೇ! ಇನ್ನೂ ಏನೇನು ಮಹಿಮೆಗಳು ಇರುವವು? ಸಂಪೂರ್ಣವಾಗಿ ಹೇಳಿರಿ. ನಿಮ್ಮಮುಖಕಮಲದಿಂದ ಶ್ರವಣಮಾಡತಕ್ಕ ನಮಗೆ ಈ ಕಥಾಮೃತದಿಂದ ತೃಪ್ತಿ ಇಲ್ಲವಾಗಿದೆ. ೧೩

स्कंद उवाच –

ज्वालातीर्थान्महत्तीर्थं पंचबाणप्रमाणतः ।
रुद्रतीर्थं महापुण्यं सर्वाघौघविनाशनम् ॥१४॥

ಸ್ಕಂದ ಉವಾಚ–

ಜ್ವಾಲಾತೀರ್ಥದ ಮುಂದೆ ೫ ಬಾಣದ ಪ್ರಮಾಣದಿಂದ ಮಹತ್ತೀರ್ಥವಾದ ರುದ್ರತೀರ್ಥವು ಮಹಾಪುಣ್ಯಕರವಾದದ್ದು. ಸಕಲ ಪಾಪಪರಿಹಾರಕವಾದದ್ದು. ೧೪

ಅವರು ರಾಗ, ಭಯ, ಕ್ರೋಧ ಇವುಗಳನ್ನು ಕಳೆದುಕೊಂಡು ಶಾಶ್ವತವಾದ ಗತಿಯನ್ನು ಪಡೆಯುವರು. ೧೫

वीतरागो निराहारस्तेपे यत्र हि कौशिकः ।
कौशिकं तीर्थमित्याहुः रुद्रतीर्थाद्धनुर्दश ॥ १६ ॥

ಆ ರುದ್ರತೀರ್ಥದಿಂದ ಹತ್ತು ಬಾಣದ ತರುವಾಯ ಕಾಮಕ್ರೋಧಾದಿಗಳನ್ನು ಕಳೆದುಕೊಂಡು, ನಿರಾಹಾರಿಯಾಗಿ, ಎಲ್ಲಿ ಕೌಶಿಕರು ತಪಸ್ಸು ಮಾಡಿರುವರೋ, ಆ ತೀರ್ಥವು ಕೌಶಿಕತೀರ್ಥವು ಎಂದು ಪ್ರಸಿದ್ಧವಿದೆ. ೧೬

कौशिकी यत्र संयुक्ता कृष्णाया सरिदुत्तमा ।
तत्र स्नानं च ये कुर्युस्ते मुक्ता नैव संशयः ॥ १७ ॥

ಕೃಷ್ಣವೇಣಿಯು ಕೌಶಿಕೀಯಿಂದ ಕೂಡಿಕೊಂಡು ಇರುವದು. ಅದು ಬಹಳ ಉತ್ತಮವಾದದ್ದು. ಅಲ್ಲಿ ಸ್ನಾನಮಾಡುವವರು ನಿಃಸಂಶಯವಾಗಿ ಮುಕ್ತರಾಗುವರು. ೧೭

तत्र स्नात्वा समभ्यर्च्य गंगामध्यगतं हरम् ।
तारयेत्सप्त वै पूर्वान् तथा सप्तैव चोत्तरान् ॥ १८ ॥

ಅಲ್ಲಿ ಸ್ನಾನಮಾಡಿ ಗಂಗಾಮಧ್ಯದಲ್ಲಿ ಇರುವ ರುದ್ರದೇವರನ್ನು ಯಾರು ಪೂಜಿಸುವರೋ ಅವರ ಪೂರ್ವಜರು ಏಳು ತಲೆ ಪರ್ಯಂತರ ಹಾಗೂ ಮುಂದಿನ ಏಳು ತಲೆ ಪರ್ಯಂತರ ಉದ್ಧಾರ ವಾಗುವರು. ೧೮

ततः सप्तकुलोद्धारं तीर्थमेतत् प्रचक्षते ।
तत्तीर्थात् प्रवरं तीर्थं कृष्णायां पापनाशनम् ॥ १९ ॥

ಆದ್ದರಿಂದ ಅದಕ್ಕೆ ಸಪ್ತಕುಲೋದ್ಧಾರತೀರ್ಥವೆಂದು ಹೇಳುವರು. ಆದ್ದರಿಂದ ಎಲ್ಲ ತೀರ್ಥಗಳಿಗಿಂತಲೂ ಶ್ರೇಷ್ಠವಾದ ತೀರ್ಥವು ಕೃಷ್ಣವೇಣಿಯಲ್ಲಿ. ಇದು ಪಾಪನಾಶನತೀರ್ಥವೆಂದು ಪ್ರಸಿದ್ಧವು. ೧೯

[illegible] दर्शनात् पापनाशनम् ॥ २१ ॥

ಪೂಜಿಸುವವರು, ಅನ್ಯತ್ರ ದುರ್ಲಭವಾದ ಗತಿಯನ್ನು ಇಲ್ಲಿ ಪಡೆಯುವರು. ಅವರ ಮುಂದೆ, ದರ್ಶನಮಾತ್ರದಿಂದ ಪಾಪನಾಶಮಾಡತಕ್ಕ ಭಾರತತೀರ್ಥವಿರುವದು. ೨೧

भरतेश्वरसंयुक्तं तत्र स्थित्वा महामतिः ।
दौष्यन्तिर्भरतस्तत्र ज्ञानं लव्ध्वाप सद्गतिम् ॥ २२ ॥

ಮಹಾಮತಿಯುಳ್ಳ ದುಷ್ಯಂತ ರಾಜನ ಮಗನಾದ ಭರತರಾಜನು ಆ ತೀರ್ಥದಲ್ಲಿ ಇದ್ದುಕೊಂಡು ಸದ್ಗತಿಯನ್ನು ಪಡೆದನು. ಆದ್ದರಿಂದ ಆ ತೀರ್ಥಕ್ಕೆ ಭರತೇಶ್ವರತೀರ್ಥ ಎಂದು ನಾಮ ಪ್ರಸಿದ್ಧವಿದೆ. ೨೨

ऋषय ऊचुः –

स्कंद ब्रूहि महाभाग याज्ञवल्क्यो महामुनिः ।
ततश्चकार किं भूयो विस्तरेण कथामृतम् ॥ २३ ॥

ಮಹಾಭಾಗ್ಯವಂತನಾದ ಸ್ಕಂದನೇ, ಆಮೇಲೆ ಮಹಾಮುನಿಗಳಾದ ಯಾಜ್ಞವಲ್ಕ್ಯ ಋಷಿಗಳು ಮತ್ತೆ ಏನು ಮಾಡಿದರು. ವಿಸ್ತಾರವಾಗಿ ಕೃಷ್ಣವೇಣಿಯ ಕಥಾಮೃತವನ್ನು ಹೇಳಿರಿ. ೨೩

स्कंद उवाच –

श्रृणुध्वं ऋषयः सम्यक् चित्रं तच्चरितं मुनेः ।
याज्ञवल्क्यऋषिः पूर्वं ययौ तत्तीर्थमुत्तमम् ॥ २४ ॥

ಸ್ಕಂದನು ಅಂದನು

ಋಷಿಗಳೇ ಕೇಳಿರಿ. ಯಾಜ್ಞವಲ್ಕ್ಯ ಋಷಿಗಳ ಚರಿತ್ರವು ಬಹಳ ವಿಚಿತ್ರವಾದದ್ದು. ಸರಿಯಾಗಿ ಹೇಳುವೆನು. ಯಾಜ್ಞವಲ್ಕ್ಯ ಋಷಿಗಳು ಪೂರ್ವದಲ್ಲಿ ಆ ಉತ್ತಮೋತ್ತಮವಾದ ತೀರ್ಥಕ್ಕೆ ಹೋದರು. ೨೪

कृष्णवेणीं तदा दृष्ट्वा उदग्वाहां प्रतस्थतुः ॥ २६ ॥

ತೀರ್ಥಗಳನ್ನು ನೋಡಿ ಆದರಪೂರ್ವಕ, ಭಕ್ತಿಪುರಃಸರವಾಗಿ ಸ್ನಾನ ಮಾಡಿದರು. ಆಗ ಕೃಷ್ಣವೇಣಿ ಉತ್ತರವಾಹಿನಿಯಾದಯನ್ನು ನೋಡಿ ಹೊರಟರು. ೨೬

यातां दृष्ट्वा ततः कृष्णां तस्थतुर्गौरवात्क्षणम् ।
ततस्ते मुनयो देवीं जगन्मान्यैरुपासिताम् ॥ २७ ॥

ಉತ್ತರವಾಹಿನಿಯಾಗಿ ಬರುವಂಥ ಆ ಕೃಷ್ಣವೇಣಿಯನ್ನು ನೋಡಿ, ಗೌರವದಿಂದ ಒಂದು ಕ್ಷಣ ಪರ್ಯಂತರ ನಿಂತರು. ಆಮೇಲೆ ಜಗನ್ಮಾನ್ಯರಾದವರಿಂದ ಉಪಾಸ್ಯ ಮಾನಳಾದ ಗಂಗಾದೇವಿಯನ್ನು, ೨೭

गंगां दृष्ट्वा जगद्धात्रीं मुनयोपि च तां ययुः ।
तेऽन्योन्यमूचुः प्रत्यक्षं गंगायाः पावनीं तनुम् ॥ २८ ॥

ಜಗತ್ತಿಗೆ ಆಧಾರಭೂತಳಾದ ಆ ಗಂಗಾದೇವಿಯನ್ನು ನೋಡಿ ಋಷಿಗಳೂ ಕೂಡ ಹೊರಟರು. ಆ ಎಲ್ಲ ಋಷಿಗಳೂ ಪರಸ್ಪರವಾಗಿ ಮಾತನಾಡಿದರು. ಗಂಗಾದೇವಿಯ ಪವಿತ್ರವಾದ ತನು(ಪ್ರವಾಹ)ವನ್ನು, ೨೮

पूजयामः कथं देवीमिति तां तुष्टुवुस्तदा ।

**ऋषय ऊचुः –**

त्वं भक्तवत्सलेत्येवं सदा लोकेषु गीयसे ॥ २९ ॥

ಆಗ ಆ ಕೃಷ್ಣವೇಣಿ ಗಂಗಾದೇವಿಯನ್ನು ಹೇಗೆ ಪೂಜಿಸಬೇಕು ? ಹೇಗೆ ಸ್ತೋತ್ರ ಮಾಡಬೇಕು ಎಂದು ವಿಚಾರ ಮಾಡಲಾಗಿ,

**ಋಷಿಗಳು ಹೇಳಿದರು –**

ಹೇ ಭಕ್ತವತ್ಸಲೇ ! ನೀನು ಯಾವಾಗಲೂ ಜಗತ್ತಿನಲ್ಲಿ ಗಾಯನಮಾಡಿಸಿ ಕೊಳ್ಳತಕ್ಕವಳು. ೨೯

जगत्यमृतरूपाया साक्षात्त्वं ब्रह्मरूपिणी ॥ ३१ ॥

ನೀನು ಬ್ರಾಹ್ಮಣರ ಪ್ರೀತಿಯನ್ನು ರಕ್ಷಣ ಮಾಡುವದರಗೋಸ್ಕರ ನಿಜವಾಗಿಯೂ ಆವಿರ್ಭೂತಳಾಗಿರುವಿ. ಜಗತ್ತಿಗೆ ಅಮೃತರೂಪಳಾಗಿ ಸಾಕ್ಷಾತ್ ಬ್ರಹ್ಮರೂಪಿಣಿ ನೀನು. ೩೧

अजरामरतां याति मर्त्यस्त्वत्सेवनाद्यतः।
कलशे चैव तां स्थाप्य मुनयश्चोर्ध्वरेतसः ॥ ३२ ॥

ಮನುಷ್ಯರು ನಿನ್ನ ಸೇವೆಯಿಂದ ಅಜರತ್ವವನ್ನು, ಅಮರತ್ವವನ್ನು ಪಡೆಯುವರು. ಊರ್ಧ್ವರೇತಸ್ವಿಗಳಾದ ಋಷಿಗಳು ಆ ಕೃಷ್ಣವೇಣೀದೇವಿಯನ್ನು ತಮ್ಮ ಕಲಶಗಳಲ್ಲಿ ಸ್ಥಾಪನೆ ಮಾಡಿದರು. ೩೨

मर्त्यानां स्वस्तिकरणात् त्वं महामृतवाहिनी।
धर्मार्थिनां मुमुक्षूणामर्थमोक्षादिदायिनी ॥ ३३ ॥

ಮನುಷ್ಯರಿಗೆ ಕ್ಷೇಮ ಉಂಟುಮಾಡುವದರಗೋಸ್ಕರ ನೀನು ಅಮೃತ ವಾಹಿನಿಯಾಗು. ಧರ್ಮಾರ್ಥಿಗಳಿಗೆ ಐಶ್ವರ್ಯ ಕೊಡುವವಳಾಗು. ಮುಮುಕ್ಷುಗಳಿಗೆ ಮೋಕ್ಷ ಕೊಡುವವಳಾಗು. ೩೩

तत्त्वं दीनपरा देवि सर्वेशेनेह कल्पिता।
शरण्या सर्ववर्णानां समस्ताश्रमिणां तथा ॥ ३४ ॥

ಹೇ ದೇವಿ ! ನೀನು ದೀನರ ಪಕ್ಷದವಳು ಎಂದು ಸರ್ವೇಶನಾದ ಪರಮಾತ್ಮನಿಂದ ನಿಶ್ಚಯಿಸಲ್ಪಟ್ಟಿರುವಿ. ಎಲ್ಲ ವರ್ಣದವರಿಗೂ ಎಲ್ಲ ಆಶ್ರಮದವರಿಗೂ ಶರಣಾಗತ ರಕ್ಷಕಳೂ. ೩೪

सर्वसंजीवनी त्वं हि मर्त्यानामुपगत्वरा।

हंसार्जुनोत्पलदला जलचारिणस्त्वा-
मायांति दूरगमनादयितोयकामाः ॥ ३५ ॥

ज्ञातुमिच्छाऽखिलाऽघघ्नि प्रयाणं तु पदे पदे।
ज्योतिष्टोमफलं दद्याद्यस्यां स्नाताः क्व यान्ति ते ॥ ३७ ॥

ಸಕಲ ಪಾಪನಿವಾರಣ ಮಾಡತಕ್ಕ ದೇವಿ ನಿನ್ನ ದರ್ಶನಕ್ಕೆ ಹೊರಟವರಿಗೆ ಹೆಜ್ಜೆ ಹೆಜ್ಜೆಗೆ ಜ್ಯೋತಿಷ್ಟೋಮಯಾಗದ ಫಲವು ಬರುವದು. ಸ್ನಾನ ಮಾಡಿದರೆ ಏನು ಫಲ ಬರುವದು ತಿಳಿದುಕೊಳ್ಳುವ ಇಚ್ಛೆ ಆಗಿದೆ. ೩೭

यद्यप्येकदिने सम्यक् त्वत्तीरेऽनुष्ठितं द्विजैः।
स्वकर्मभक्त्या सततमच्छिद्रं तैः कृतं भवेत् ॥ ३८ ॥

ಬ್ರಾಹ್ಮಣರು ಒಂದು ವೇಳೆ ಒಂದೇ ದಿನ ಯಥಾಸ್ಥಿತವಾಗಿ ನಿನ್ನ ತೀರದಲ್ಲಿ ಭಕ್ತಿ ಪುರಃಸರವಾಗಿ ತಮ್ಮ ತಮ್ಮ ಸ್ವಕರ್ಮಗಳನ್ನು ಅನುಷ್ಠಾನಮಾಡಿದರೆ ಕೊನೆಯವರೆಗೂ ನಿರ್ವಿಘ್ನವಾಗಿ ಪೂರ್ಣ ಫಲಪ್ರದವಾಗುವದು. ೩೮

ब्रह्मचारी सकामश्च गृही भवति नित्यशः।
गृहिणो ध्यानमात्रेण तेजोराज्यजयादिकम् ॥ ३९ ॥

ಬ್ರಹ್ಮಚಾರಿಯಾದವನು ಕಾಮ್ಯದಿಂದ ನಿನ್ನ ಸೇವೆ ಮಾಡಿದರೆ ಗೃಹಸ್ಥಾಶ್ರಮಿಯಾಗುವನು. ಗೃಹಸ್ಥಾಶ್ರಮಿಯು ನಿನ್ನನ್ನು ಧ್ಯಾನ ಮಾಡಿದಮಾತ್ರದಿಂದ ತೇಜಸ್ವಿಯೂ, ರಾಜನೂ, ಜಯಶೀಲನೂ, ಆಗುವನು. ೩೯

स्वस्वकामानाप्नुवन्ति त्वत्तो हि जननीमिव।
त्वन्मूर्तिर्धवला दीर्घा कपिला भाति दूरतः ॥ ४० ॥

ನಿನ್ನಿಂದ ಎಲ್ಲರೂ ಎಲ್ಲ ತಮ್ಮ ತಮ್ಮ ಇಷ್ಟಾರ್ಥಗಳನ್ನು ಪಡೆಯುವರು. ಎಲ್ಲರಿಗೂ ನೀನು ತಾಯಿಯಂತೆ ಇರುವಿ. ನಿನ್ನ ಮೂರ್ತಿಯು ಧವಳ ವರ್ಣದ್ದು, ದೀರ್ಘವಾದದ್ದು, ದೂರದವರೆಗೂ ಕಪಿಲಾರೂಪವಾಗಿ ತೋರುವದು. ೪೦

आगता यद्भवं द्रष्टुं शेषस्येवाकृती शुभा।

ಮಾತ್ರ ಸರ್ವ ಮಹಾತ್ಮ್ಯವನ್ನೂ ತಿಳಿದು ಕೊಳ್ಳುವರು. ಷಣ್ಮುಖನು ಮಾತ್ರ ಸಂಕ್ಷೇಪತಿಳಿದು ಕೊಳ್ಳುವನು, ಅಂಥ ನಿನ್ನ ಮಾಹಾತ್ಮ್ಯವನ್ನು ಸಾಮಾನ್ಯ ಮನುಷ್ಯರು ಹೇಗೆ ತಿಳಿದುಕೊಳ್ಳುವರು. ೪೧

एवं सदानंदगुणां वरेण्यामानंदमूर्तिं शरणंगतानाम् ।
गृहाण पूजां स्वतनुं प्रशस्तां प्रदर्शयास्मान्कुरु वै कृतार्थान् ॥ ४२ ॥

ಹೀಗೆ ನೀನು ಯಾವಾಗಲೂ ಆನಂದಕರವಾದ ಗುಣ ಉಳ್ಳವಳು ಆನಂದಮೂರ್ತಿಯು ಶರಣಾಗತ ರಕ್ಷಕಳು ಪ್ರಶಸ್ತವಾಗಿ ನಿನಗೆ ಮಾಡತಕ್ಕ ಪೂಜೆಯನ್ನು ಸ್ವಿಕರಿಸು. ನಮ್ಮನ್ನು ಕೃತಾರ್ಥರನ್ನಾಗಿ ಮಾಡು. ೪೨

नारद उवाच –

एवं तैः स्तूयमाना सा जलमध्यात्समुद्गता ।
प्रसन्नमूर्तिर्दिव्यांगी द्योतयंती दिशो दश ॥ ४३ ॥

ಹೀಗೆ ಸ್ತೋತ್ರ ಮಾಡಿಸಿಕೊಳ್ಳುವಂಥ ಕೃಷ್ಣವೇಣೀ ದೇವಿಯು ಜಲಮಧ್ಯದಿಂದ ಎದ್ದು ಬಂದಳು. ಪ್ರಸನ್ನಮೂರ್ತಿಯಾಗಿ ದಿವ್ಯ ದೇಹ ಉಳ್ಳವಳಾಗಿ ದಶದಿಕ್ಕುಗಳನ್ನು ಪ್ರಕಾಶಿಸುವವಳಾಗಿ ಎದ್ದು ಬಂದಳು. ೪೩

शंखचक्रगदापद्म धारिणीं भक्तवत्सलाम् ।
वरदाभयदात्रीं तां दीनत्राणपरायणाम् ॥ ४४ ॥

ಶಂಖಚಕ್ರಗದಾಪದ್ಮ ಧಾರಣ ಮಾಡುವ, ಭಕ್ತವತ್ಸಲಳಾದ, ವರಪ್ರದಳಾದ, ಅಭಯಪ್ರದಳಾದ ದೀನರನ್ನು ರಕ್ಷಿಸುವದರಲ್ಲಿ ಪರಾಯಣಳಾದ, ೪೪

दृष्ट्वा जयजयेत्युच्चैः स्तवं चक्रुरनेकशः ।
ततस्तैरर्पितां पूजां गृहीत्वा नातिविस्तराम् ॥ ४५ ॥

ದೇವಿಯನ್ನು ನೋಡಿ ಅನೇಕ ರೀತಿಯಿಂದ ಜಯ ಜಯವೆಂದು ಉಚ್ಚವಾಗಿ ಸ್ತೋತ್ರಮಾಡಿದರು. ಹಾಗೂ ಅವರಿಂದ ಸಂತೃಪ್ತವಾಗಿ ಅವರು ಅರ್ಪಿಸಿದ ಪೂಜೆಯನ್ನು ಸ್ವೀಕಾರ ಮಾಡಿದಳು. ೪೫

ततस्तान्मध्यतः कृत्वा द्विधा जाता महानदी ॥ ४७ ॥

ಪ್ರಸನ್ನಳಾಗಿ ಪರಮ ಪ್ರೀತಿಯಿಂದ ಅವರೆಲ್ಲರಿಗೆ ಬಹಳಷ್ಟು ವರಗಳನ್ನು ಕೊಟ್ಟು ಅವರೆಲ್ಲರನ್ನೂ ಮಧ್ಯದಲ್ಲಿ ಮಾಡಿ ಎರಡುಭಾಗವಾಗಿ ಮಹಾನದಿಯಾಗಿ, ೪೭

संयुक्ता च ततोऽधस्तादाश्रमं तं तथास्थितम् ।
मध्वादिवस्तुभिर्यस्मात्पूजितेयं महानदी ॥ ४८ ॥

ಮುಂದೆ ಮತ್ತೆ ಕೂಡಿ ಕೊಂಡು, ಒಂದಾಗಿ, ಆ ಆಶ್ರಮವನ್ನು ಪವಿತ್ರ ಮಾಡಿ, ಮಧು ಮುಂತಾದ ವಸ್ತುಗಳಿಂದ ಕೃಷ್ಣವೇಣಿಯು ಮಹಾನದಿಯಾಗಿ ಪೂಜಿತಳಾದಳು. ೪೮

तत्संगान्मधुरं नाम तीर्थं तत्रवरं विदुः ।
तास्मिन् तीर्थे नरः स्नात्वा यज्ञानां तपसः फलम् ॥ ४९ ॥

ಆ ಮಧ್ವಾದಿ ವಸ್ತುಗಳಿಂದ ಸಂಯುಕ್ತಳಾದ ಕಾರಣ ಮಧುರ ತೀರ್ಥವೆಂದು ಪ್ರಸಿದ್ಧವಾಯಿತು. ಆ ತೀರ್ಥದಲ್ಲಿ ಯಾವ ಮನುಷ್ಯರು ಸ್ನಾನಮಾಡುವರೋ ಅವರಿಗೆ ಎಲ್ಲ ಯಜ್ಞಗಳ ತಪಃಸಿನ ಫಲವು ಬರುವದು. ೪೯

प्राप्नोति देवास्तत्रैव वरान्दद्युरनेकशः ।
तयोः प्रवाहयोः संगे तीर्थं त्रैलोक्यपावनम् ॥ ५० ॥

ಅಲ್ಲಿಯೇ ಎಲ್ಲ ದೇವತೆಗಳು ಬಂದರು. ಎಲ್ಲ ರೀತಿಯ ವರಗಳನ್ನು ಕೊಟ್ಟರು. ಆ ಎರಡೂ ಪ್ರವಾಹಗಳ ಸಂಗಮವು ತ್ರೈಲೋಕ್ಯಪಾವನ ತೀರ್ಥವು ಎಂದು ಪ್ರಸಿದ್ಧ ಮಾಡಿದರು. ೫೦

देवास्तस्मिन् ह्रदे सर्वे जलक्रीडार्थमागताः ।
मासावधि स्थितास्तत्र सर्वा देवांगनाः शुभाः ॥ ५१ ॥

ಎಲ್ಲ ದೇವತೆಗಳು ತಮ್ಮ ತಮ್ಮ ಅಂಗನೆಯರಿಂದ ಕೂ ಕೊಂಡು ಆ ಸಂಗಮದ

ಜಲಕ್ರೀಡೆಗೆ ಬಂದಿದ್ದರೋ ಆ ಸ್ಥಳವು ಕಂಕ ಎಂಬ ಮುನಿಗಳು ತಪಃಸು ಮಾಡುವ ಪರಮಶ್ರೇಷ್ಠವಾದ ತಪೋಭೂಮಿಯು. ೫೨

गायत्रीजापको नित्यं प्रत्यक्षं समजायत।
गायत्री तं प्रसन्नाऽभूत्संगमे पतपा मुनेः ॥ ५३ ॥

ಕಂಕ ಋಷಿಗಳು ನಿತ್ಯದಲ್ಲಿಯೂ ಗಾಯತ್ರಿ ಜಪ ಮಾಡುತ್ತಿದ್ದರು. ಆ ಸಂಗಮದಲ್ಲಿ ಗಾಯತ್ರಿಯು ಕಂಕಋಷಿಗಳಿಗೆ ಪ್ರತ್ಯಕ್ಷಳಾದಳು. ಆ ಸಂಗಮಸ್ಥಳದಲ್ಲಿ ಆ ಕಂಕಮುನಿಗಳಿಗೆ ಗಾಯತ್ರಿ ದೇವಿಯು ಪ್ರಸನ್ನಳಾದಳು. ೫೩

तयाश्चर्यवती देवी गायत्री तं वरं ददौ।

गायत्र्युवाच –

किमपेक्षितमेतद्धि वरं वरय सुव्रत ॥ ५४ ॥

ಅಲ್ಲಿ ಆಶ್ಚರ್ಯ ಚಕಿತಳಾದ ಗಾಯತ್ರಿ ದೇವಿಯು ಅವರಿಗೆ ವರವನ್ನು ಕೊಟ್ಟಳು. ಗಾಯತ್ರಿ ದೇವಿಯು ಹೇಳಿದಳು ಹೇ ವ್ರತಸ್ಥರೇ! ನಿಮಗೆ ಅಪೇಕ್ಷಿತವಾದ ವರವನ್ನು ಬೇಡಿರಿ. ೫೪

स्वोचितं कर्म कृतवान्यतस्त्वं ब्रूहि मे वरम्।

कंकऋषिरुवाच –

संगमेऽस्मिन् जगन्मातर्यस्त्वां जपति भक्तितः ॥ ५५ ॥

ಸ್ವೋಚಿತವಾದ ಕರ್ಮವನ್ನು ಮಾಡಿರುವಿ. ಆದ ಕಾರಣ ನೀನು ನನಗೆ ವರವನ್ನು ಕೊಡು.

ಕಂಕಋಷಿಗಳು ಅಂದರು ಹೇ ತಾಯಿಯೇ! ಯಾರು ಈ ಸಂಗಮದಲ್ಲಿ ಭಕ್ತಿಯಿಂದ ಗಾಯತ್ರಿ ಜಪ ಮಾಡುವರೋ ಅವರಿಗೆ ವರಗಳನ್ನು ಕೊಡು. ೫೫

तं मुनिं ददृशुस्तत्र ब्रह्मचारिणमुत्तमम् ॥ ५७ ॥

ಆ ಸಮಯದಲ್ಲಿ ತ್ರಿಕಾಲಜ್ಞಾನಿಗಳಾದ ಎಲ್ಲ ಋಷಿಗಳೂ ಅಲ್ಲಿ ಬಂದು ಪರಮ ಉತ್ತಮ ಬ್ರಹ್ಮಚಾರಿಗಳಾದ ಕಂಕಋಷಿಗಳನ್ನು ನೋಡಿದರು. ೫೭

॥ इति श्रीस्कंदपुराणे कृष्णामाहात्म्ये सप्तकुलोध्धार तीर्थ षट्चत्वारिंशत्तमोऽध्याय: ॥

❀ ❀ ❀

## ॥ अथ सप्तचत्वारिंशत्तमोऽध्याय: ॥

ऋषय ऊचु: –

मुने कृतं तपश्चोग्रं परोपकृतये त्वया ।
कृष्णावेण्या वरो दत्तस्तुभ्यं परमदुर्लभ: ॥ १ ॥

ಕಂಕ ಋಷಿಗಳೇ ! ನೀವು ಪರೋಪಕಾರದ ಸಲುವಾಗಿ ಉಗ್ರವಾದ ತಪಃಸನ್ನು ಮಾಡಿದಿರಿ. ಕೃಷ್ಣವೇಣಿಯು ನಿಮಗೆ ಪರಮದುರ್ಲಭವಾದ ವರವನ್ನು ಕೊಟ್ಟಳು. ೧

यद्यपि ब्रह्मचारी त्वं आश्रमे चाद्य एव तु ।
स्थितोऽसि यद्यपि ततो गृहस्थाश्रम उत्तम: ॥ २ ॥

ಯದ್ಯಪಿ ನೀವು ಬ್ರಹ್ಮಚರ್ಯಾಶ್ರಮದಲ್ಲಿ ಇದ್ದರೂ ಆ ಬ್ರಹ್ಮಚರ್ಯಾಶ್ರಮದಕಿಂತಲೂ ಗೃಹಸ್ಥಾಶ್ರಮವು ಬಹಳ ಶ್ರೇಷ್ಠವಾದದ್ದು. ೨

ज्ञात्वैवं कुरु कृष्णायास्तटे पुनरनुत्तमम् ।
तपस्तेन सदा तुष्टा वरदा स्याज्जगज्जनि: ॥ ३ ॥

ಇದನ್ನು ತಿಳಿದುಕೊಂಡು ಕೃಷ್ಣವೇಣೀ ತಟಾಕದಲ್ಲಿ ಅತಿಶಯ ಮತ್ತು ತಪಃಸು ಎಂಬ ಗೃಹಸ್ಥಾಶ್ರಮವನ್ನು ಮಾಡು. ಆ ತಪಃಸಿನಿಂದ ಜಗಜ್ಜನನಿಯಾದ ದೇವಿಯು ಯಾವಾಗಲೂ ಸಂತುಷ್ಟಳಾಗಿ ವರಪ್ರದಳಾಗುವಳು. ೩

इति श्रुत्वा मुनिर्वाक्यं ऋषीणां करुणात्मनाम् ।
प्रोवाच परमप्रीतः प्रणम्य शिरसा पुनः ॥ ५ ॥

ಕರುಣಾಪೂರ್ಣರಾದ ಋಷಿಗಳ ಈ ವಾಕ್ಯಗಳನ್ನು ಕೇಳಿ ಪರಮಪ್ರೀತರಾಗಿ ಮತ್ತು ಶಿರಸಾಷ್ಟಾಂಗ ನಮಸ್ಕಾರಮಾಡಿ ಹೇಳಿದರು. ೫

मुनिरुवाच –

न जाने तां जगत्कर्त्रीं सर्वेषां जननीमपि ।
दर्शयध्वं भवद्भिस्तां प्रत्यक्षं चेत्कृपा मम ॥ ६ ॥

ಅವಳು ಸರ್ವರಿಗೂ ಜನನಿಯಾಗಿದ್ದರೂ, ಜಗನ್ನಿಯಾಮಕಳಾಗಿದ್ದರೂ ಅವಳನ್ನು ನಾನು ತಿಳಿದುಕೊಂಡಿಲ್ಲ. ನೀವು ಸನ್ನ ಮೇಲೆ ಕೃಪಾ ಉಳ್ಳವರಾಗಿದ್ದರೆ ನಿಮಗೆ ಪ್ರತ್ಯಕ್ಷಳಾಗಿದ್ದರೆ ನನಗೆ ದರ್ಶನಮಾಡಿಸಿರಿ. ೬

तदा वाक्यं मुनेः श्रुत्वा मुनयोऽन्योन्यमब्रुवन् ।
परोपकरणार्थाय वक्तव्यं करुणाकराः ॥ ७ ॥

ಆಗ ಋಷಿಗಳ ಮಾತನ್ನು ಕೇಳಿ ಮುನಿಗಳು ಪರಸ್ಪರವಾಗಿ ಮಾತನಾಡಿದರು. ಕರುಣಾಕರರಾದ ನೀವು ಪರೋಪಕಾರಣದ ಸಲುವಾಗಿ ಹೇಳತಕ್ಕದ್ದು. ೭

याज्ञवल्क्य त्वमेवासि सर्वज्ञः सर्वसंमतः ।
ज्ञात्वा ब्रूहि महामायां जगदंबां वरप्रदाम् ॥ ८ ॥

ನೀವು ಯಾಜ್ಞವಲ್ಕ್ಯರೇ ಇರುವಿರಿ. ಸಕಲವನ್ನು ಬಲ್ಲವರಿದ್ದೀರಿ. ಎಲ್ಲರಿಗೂ ಸಮ್ಮತರಿದ್ದೀರಿ. ವರಪ್ರದಳಾದ ಮಾಹಾಮಾಯೆಯಾದ ಆ ಜಗದಂಬೆಯನ್ನು ತಿಳಿದವರು. ಆದ್ದರಿಂದ ಹೇಳಿರಿ. ೮

इति तद्वाक्यमाकर्ण्य याज्ञवल्क्यो महामुनिः ।
ध्यानं चकार सहसा भगवत्याः कृपानिधिः ॥ ९ ॥

भक्तप्रियामिष्टवरप्रदां शुभां मायावतीं कालहरां तमोगुणाम् ॥ १० ॥

ಋಷಿಗಳ ಸನ್ನಿಧಿಯಲ್ಲಿಯೇ ಹಾಗೂ ಶುಭಕರವಾದ ಗಂಗಾಸಂಗಮ ಸ್ಥಳದಲ್ಲಿ, ಯಾಜ್ಞವಲ್ಕ್ಯ ಋಷಿಗಳು ಸ್ತೋತ್ರ ಮಾಡಿದರು. ದೈತ್ಯೇಶ್ವರರೆಲ್ಲರನ್ನೂ ನಾಶಮಾಡುವ, ಬ್ರಹ್ಮಾದಿದೇವತೆಗಳಿಂದ ಸ್ತೋತ್ರ ಮಾಡಿಸಿಕೊಳ್ಳತಕ್ಕ, ಭಕ್ತವತ್ಸಲಳಾದ, ಅವರವರ ಇಷ್ಟಾರ್ಥವನ್ನು ಪೂರ್ಣ ಮಾಡುವ, ವರಪ್ರದಳಾದ, ತಮೋಗುಣಕ್ಕೆ ನಿಯಾಮಕಳಾದ, ಕಾಲಹರಳಾದ, ಮಾಯಾವತಿಯಾದ, ನಿನ್ನನ್ನು ನಮಸ್ಕರಿಸುತ್ತೇನೆ. ೧೦

द्विपंचवक्त्रां च तथा भुजाढ्यामनेकनागेंद्रवरैर्विभूषिताम् ।
भक्तप्रियामिष्टवरप्रदां शुभां मायावतीं कालहरां तमोगुणाम् ॥ ११ ॥

ಹತ್ತು ಮುಖವುಳ್ಳವಳು ಹತ್ತು ಭುಜಗಳುಳ್ಳವಳು, ಅನೇಕ ನಾಗರಾಜರಿಂದ ಅಲಂಕೃತಳಾದವಳು. ಭಕ್ತ ಪ್ರಿಯಳಾದ, ವರಪ್ರದಳಾದ, ಮಾಯಾವತೀ, ನಿನಗೆ ನಮಸ್ಕಾರಗಳು. ೧೧

सूर्यप्रभारंजितनेत्रशोभां सांख्यज्ञवर्यां त्रिदशैकलोचनाम् ।
भक्तप्रियामिष्टवरप्रदां शुभां मायावतीं कालहरां तमोगुणाम् ॥ १२ ॥

ನೀನು ಸೂರ್ಯನ ತೇಜಸ್ಸಿನಂತೆ ಹೊಳೆಯುವ ಕಣ್ಣುಗಳಿಂದ ಶೋಭಿಸುವವಳು, ಸಾಂಖ್ಯ ತತ್ವವನ್ನು ಬಲ್ಲವಳು, ತ್ರೈಲೋಕ್ಯವೇ ಕಣ್ಣು ಮಾಡಿಕೊಂಡು ಇರುವವಳು. ಅಂತಹ ಭಕ್ತ ಪ್ರಿಯಳಾದ, ವರಪ್ರದಳಾದ, ತಮೋಗುಣಕ್ಕೆ ನಿಯಾಮಕಳಾದ, ನಿನಗೆ ನಮಸ್ಕಾರಗಳು. ೧೨

तपोमयां तप्तजनाघहारिणीं सकामवांछाप्रददां मुनिस्तुताम् ।
भक्तप्रियामिष्टवरप्रदां शुभां मायावतीं कालहरां तमोगुणाम् ॥ १३ ॥

ತಪಸ್ವಿಯೂ, ಸಂಸಾರದಿಂದ ತಪ್ತರಾದ ಜನರ ಪಾಪಪರಿಹಾರಕಳೂ, ಇಷ್ಟಾರ್ಥಗಳನ್ನು ಪೂರ್ಣಮಾಡತಕ್ಕವಳೂ, ಭಕ್ತಪ್ರಿಯಳಾದ ನಿನಗೆ ನಮಸ್ಕಾರಗಳು.

महामायां महद्वन्द्यां दर्शनादिष्टदायिनीम् ॥ १५ ॥

ಯಾಜ್ಞವಲ್ಕ್ಯರು, ಮಹಾಕಾಲಿಯೂ, ವೇದಮಯಳೂ, ಮಹಾಮಾಯೆಯೂ, ಬ್ರಹ್ಮಾದಿದೇವತೆಗಳಿಂದ ವಂದನೀಯಳೂ. ದರ್ಶನಮಾತ್ರದಿಂದ ಇಷ್ಟಪ್ರದಳಾದವಳೂ. ಎಂದು ಸ್ತೋತ್ರ ಮಾಡಿದರು. ೧೫

प्रणम्य सहसा तां तु मुनिभिः संशितव्रतैः ।
प्रादुर्बभूव सा माया जगाद मुनिसत्तमम् ॥ १६ ॥

ವ್ರತಸ್ಥರಾದ ಋಷಿಗಳಿಂದಲೂ, ಸ್ತೋತ್ರಮಾಡಿಸಿಕೊಂಡು, ನಮಸ್ಕಾರ ಮಾಡಿಸಿಕೊಂಡು, ತಕ್ಷಣವೇ ಆ ಮಾಯಾವತಿಯು ಪ್ರಕಟಳಾದಳು. ಋಷಿಶ್ರೇಷ್ಠರಾದ ಮುನಿಗಳಿಗೆ ಹೇಳಿದಳು. ೧೬

वरं वरय चाभीष्टं याज्ञवल्क्य महामुने ।
मदीयं दर्शनं लोके नृणां कामप्रदं स्मृतम् ॥ १७ ॥

ಮಹಾಮುನಿಗಳಾದ ಯಾಜ್ಞವಲ್ಕ್ಯ ಋಷಿಗಳೇ !ಅಭೀಷ್ಟವಾದ ವರವನ್ನು ಕೇಳಿರಿ. ಲೋಕದಲ್ಲಿ ಮನುಷ್ಯರಿಗೆ, ನನ್ನ ದರ್ಶನವು ಇಷ್ಟಾರ್ಥವನ್ನು ಪೂರ್ಣಮಾಡುವದು. ೧೭

श्रुत्वेति तन्निगदितं परोपकृतये मुनिः ।
प्रोवाच विस्मयाविष्टो जगदंबां मुदा युतः ॥ १८ ॥

ಪರೋಪಕಾರ ಮಾಡತಕ್ಕ ಯಾಜ್ಞವಲ್ಕ್ಯ ಋಷಿಗಳು, ಅವಳು ಹೇಳಿದ ಮಾತನ್ನು ಕೇಳಿ ಆಶ್ಚರ್ಯಪೂರ್ಣರಾಗಿ ಸಂತೋಷಭರಿತರಾಗಿ ಜಗದಂಬೆಯನ್ನು ಕುರಿತು ಹೇಳಿದರು. ೧೮

महाकालि महामाये भक्ताभीष्टप्रदायिनि ।
त्रयीमये त्रिलोकज्ञे ब्रह्मण्ये भक्तवत्सले ॥ १९ ॥

ಮಹಾಕಾಲಿ, ಮಹಾಮಾಯೇ, ಭಕ್ತರ ಅಭೀಷ್ಟವನ್ನು ಪೂರ್ಣಮಾಡುವವಳೇ, ವೇದಮಯಳೇ, ತ್ರೈಲೋಕ್ಯವನ್ನು ಬಲ್ಲವಳೇ, ಬ್ರಹ್ಮಜ್ಞಾನಿಯೇ, ಭಕ್ತವತ್ಸಲೇ, ೧೯

देव्युवाच –

अवश्यंभाविनो ह्यर्था भविष्यन्ति महामुने ॥ २१ ॥

ಧನ್ಯಳಾದ ಕೃಪಾಪೂರ್ಣಳಾದ ದೇವಿ ಭುಕ್ತಿಯನ್ನು, ಶುಭಕರವಾದ ಮುಕ್ತಿಯನ್ನು, ಕೊಡುವವಳಾಗು. ಆಗ ದೇವಿಯು ಹೇಳಿದಳು ಹೇ ಮಹಾಮುನಿಗಳೇ, ನಿಮ್ಮ ಸಕಲ ಇಷ್ಟಾರ್ಥಗಳೂ ಅವಶ್ಯವಾಗಿ ಪರಿಪೂರ್ಣ ವಾಗುವವು. ೨೧

मनोरथोऽपि भविता मुनेराश्रमवासिनः ।
अहं तिष्ठामि सततं युष्मद्वाक्याभियंत्रिता ॥ २२ ॥

ಹೇ ಆಶ್ರಮವಾಸಿಗಳಾದ ಯಾಜ್ಞವಲ್ಕ್ಯ ಋಷಿಗಳೇ ! ನಿಮ್ಮ ಮನೋರಥಗಳು ಪೂರ್ಣವಾಗಿರುವವು. ನಾನು ಸತತವಾಗಿ, ನಿಮ್ಮ ವಾಕ್ಯಕ್ತಿ ನಿಯಂತ್ರಿತಳಾಗಿ, ಕೃಷ್ಣಾವೇಣೀ ತಟಾಕದಲ್ಲಿ ಇರುವೆನು. ೨೨

अन्यान्वरान्प्रदास्यामि वांछितार्थान् मनोगतान् ।
ब्रूहि त्वं याज्ञवल्क्येह जनानामुपकारतः ॥ २३ ॥

ಹೇ ಯಾಜ್ಞವಲ್ಕ್ಯ ಋಷಿಗಳೇ ! ಇಚ್ಛಿತವಾದ ಮನೋಭಿಪ್ರಾಯಗಳನ್ನು ಮತ್ತೂ ಬೇರೇ ವರಗಳನ್ನೂ ಕೊಡುವೆನು. ಜನರ ಉಪಕಾರದ ಸಲುವಾಗಿ ನೀವು ಕೇಳಿರಿ. ೨೩

याज्ञवल्क्योपि तच्छ्रुत्वा महाकाल्याः प्रभाषितम् ।
उच्चैः प्रहस्य सहसा प्रोवाच वदतांवरः ॥ २४ ॥

ಆ ಯಾಜ್ಞವಲ್ಕ್ಯ ಋಷಿಗಳೂ ಕೂಡ ಆ ಮಹಾಕಾಲಿಯ ಮಾತುಗಳನ್ನು ಕೇಳಿ, ಮಾತಿನಲ್ಲಿ ಶ್ರೇಷ್ಠರಾದ ಋಷಿಗಳು ಮಂದಹಾಸದಿಂದ ಸಹಜರೀತಿಯಿಂದ ಎಲ್ಲರೂ ಕೇಳುವಂತೆ ಹೇಳಿದರು. ೨೪

तमोमूर्तिं यतो दृष्ट्वा त्वां देवीं च भयानकाम् ।
न भजिष्यन्ति मनुजा यतस्त्वं सौम्यतां व्रज ॥ २५ ॥

ನೋಡುವದರಒಳಗಾಗಿ, ಸ್ವೀಕರಿಸಿದಳು. ೨೬

तां दृष्ट्वा मुनयः सर्वे जग्मुर्विस्मयमादृताः ।
चतुर्भुजां महादेवीं महिषासुरमर्दिनीम् ॥ २७ ॥

ಮಹಿಷಾಸುರಮರ್ದಿನಿಯಾದ ಆ ಮಹಾದೇವಿಯು ಕೂಡಲೇ ಚತುರ್ಭುಜಳಾದಳು. ಆ ಮೂರ್ತಿಮಂತಳಾದ ದೇವಿಯನ್ನು-ನೋಡಿ ಪರಮಾದರ ಉಳ್ಳವರಾಗಿ ಆಶ್ಚರ್ಯಭರಿತರಾದರು. ೨೭

मुक्ताहारसमायुक्तां कटिसूत्रविराजिताम् ।
सूर्यकोटिप्रतीकाशां देवीं कात्यायनीं तदा ॥ २८ ॥

ಮುತ್ತಿನ ಹಾರಗಳಿಂದ ಸುಶೋಭಿತಳಾದವಳು, ನಡುವಡ್ಯಾಣದಿಂದ ವಿರಾಜಮಾನಳಾದವಳೂ, ಕೋಟಿಸೂರ್ಯರಂತೆ ಪ್ರಕಾಶಮಾನಳಾದವಳು, ಆ ಕಾತ್ಯಾಯನೀ ದೇವಿಯನ್ನು, ಆಗ, ೨೮

चतुःषष्ट्या योगिनीभिर्नीराजितपदांबुजाम् ।
नमनं चक्रिरे सर्वे मुनयः संशितव्रताः ॥ २९ ॥

ಅರವತ್ತುನಾಲ್ಕು ಯೋಗಿನಿಯರು, ಆ ದೇವಿಯ ಪಾದ ಕಮಲಗಳಿಗೆ, ಆರತಿ ಬೆಳಗಿದರು. ಎಲ್ಲ ವ್ರತಸ್ಥರಾದ ಮುನಿಗಳು ನಮಸ್ಕಾರ ಮಾಡಿದರು. ೨೯

कात्यायनि नमस्तेस्तु श्रीपीठे सुरपूजिते ।
नमस्ते गरुडारूढ नमस्ते हंसवाहिनि ॥ ३० ॥

ಶ್ರೀ ಪೀಠದಲ್ಲಿ ದೇವತೆಗಳಿಂದ ಪೂಜಿತಳಾದ ಕಾತ್ಯಾಯನೀ ದೇವೀ ಗರುಡಾರೂಢಳಾದ ನಿನಗೆ ನಮಸ್ಕಾರಗಳು. ಹಂಸವಾಹಿನಿಯಾದ ನಿನಗೆ ನಮಸ್ಕಾರಗಳು. ೩೦

श्रीहि नो देवि कल्याणि कृष्णातीरे चिरं वस।
इदं स्तोत्रं पठेन्नित्यं श्रावयेद्वा समाहितः ॥ ३२ ॥

ಹೇ ದೇವಿ, ಕಲ್ಯಾಣೀ, ಕೃಷ್ಣಾತೀರದಲ್ಲಿ ವಾಸ ಮಾಡು. ನಮ್ಮನ್ನು ರಕ್ಷಿಸು. ಈ ಸ್ತೋತ್ರ ಪ್ರತಿದಿನ ಪಠನವನ್ನು ಮಾಡಬೇಕು. ಸಮಾಧಾನದಿಂದ ಶ್ರವಣಮಾಡಬೇಕು. ಶ್ರವಣ ಮಾಡಿಸಬೇಕು. ೩೨

दुष्टानां नाशनं चैव जाड्यानां भ्रान्तिभंजनम्।
आयुष्यं च तथाऽरोग्यं सर्वापदनिवारणम् ॥ ३३ ॥

ದುಷ್ಟರನ್ನು ನಾಶಮಾಡು. ಸೋಮಾರಿಗಳ (ಜಾಡ್ಯರ) ಭ್ರಮವನ್ನು ಭಂಜನ ಮಾಡು. ಆಯುಷ್ಯವನ್ನೂ, ಆರೋಗ್ಯವನ್ನೂ, ಕೊಟ್ಟು ಸರ್ವಾಪತ್ತುಗಳನ್ನು ನಿವಾರಣ ಮಾಡು. ೩೩

भौमवारे भृगोर्वारे अष्टम्यां नवमीदिने।
चतुर्दश्यां पूर्णिमायां दर्शनात् सर्वसाधनम् ॥ ३४ ॥

ಮಂಗಳವಾರ, ಶುಕ್ರವಾರ, ಅಷ್ಟಮಿತಿಥಿ, ನವಮಿತಿಥಿ, ಚತುರ್ದಶಿ, ಪೂರ್ಣಿಮೆ ದಿವಸಗಳಲ್ಲಿ ನಿನ್ನ ದರ್ಶನದಿಂದ ಸರ್ವವೂ ಸಾಧನವಾಗುವವು. ೩೪

तेषामेवं वरं दत्वा भक्त्या तत्रावसच्चिरम्।
गंगातीरे तदा देवी भक्तानां प्रीतिवर्धिनी ॥ ३५ ॥

ಆ ಎಲ್ಲ ವರಗಳನ್ನು ಕೊಟ್ಟು ಭಕ್ತಿ ಪುರಃಸರವಾಗಿ ಅಲ್ಲಿ ಅಖಂಡವಾಗಿ ವಾಸಮಾಡಿದಳು. ಆ ಗಂಗಾತೀರದಲ್ಲಿ ಆ ದೇವಿಯು ಭಕ್ತರಿಗೆ ಪ್ರೀತಿವೃದ್ಧಿಯಾಗುವಂತೆ ವಾಸಮಾಡಿದಳು. ೩೫

कंकनामापि गृहिणीं चक्रे तत्र भृगोः सुताम्।
तस्यां पुत्रान्महायोगी जनयामास सुव्रतान् ॥ ३६ ॥

श्रुत्वाध्यायमिमं सम्यक् श्रद्धया मनुजोत्तमः ।
सर्वपापविनिर्मुक्तः कृष्णानुग्रहतो भवेत् ॥ ३८ ॥

ಯಾವ ಮನುಷ್ಯೋತ್ತಮನು ಈ ಅಧ್ಯಾಯವನ್ನು ಶ್ರದ್ಧಾಪೂರ್ವಕವಾಗಿ ಯಥಾಸ್ಥಿತವಾಗಿ ಶ್ರವಣ ಮಾಡುವರೋ ಅವರು ಸಕಲ ಪಾಪಗಳಿಂದ ಮುಕ್ತರಾಗಿ ಕೃಷ್ಣಾದೇವಿಯ ಅನುಗ್ರಹಕ್ಕೆ ಪಾತ್ರರಾಗುವರು. ೩೮

॥ इति श्रीस्कंदपुराणे श्रीकृष्णामाहात्म्ये सप्तचत्वारिंशोऽध्यायः ॥

❀ ❀ ❀

## ॥ अथ अष्टचत्वारिंशत्तमोऽध्यायः ॥

स्कंद उवाच –

ಸ್ಕಂದರು ಅಂದರು

सर्वे ते मुनयो गंगां द्रष्टुं ह्यग्रे ततो गताः ।
संगमात्पुरतस्तीर्थं भार्गवाख्यं तमोनुदम् ॥ १ ॥

ಎಲ್ಲ ಮುನಿಗಳೂ ಗಂಗೆಯನ್ನು ನೋಡುವುದಕ್ಕೆ ಮುಂದೆ ಹೊರಟರು. ಸಂಗಮದಿಂದ ಮುಂದಿನ ತೀರ್ಥವು ಭಾರ್ಗವತೀರ್ಥವು. ಅಜ್ಞಾನವನ್ನು ದೂರ ಮಾಡುವದು. ೧

यत्राद्यापि जपन्मन्त्रान्प्रातर्वसति भार्गवः ।
माहात्म्यमतुलं तस्य वक्तुं वर्षशतैरपि ॥ २ ॥

ಯಾವ ಕೃಷ್ಣವೇಣಿಯಲ್ಲಿ ಭೃಗು ಋಷಿಗಳು ಮಂತ್ರಗಳನ್ನು ಜಪಮಾಡುತ್ತ ಪ್ರಾತಃಕಾಲದಲ್ಲಿ ವಾಸ ಮಾಡುವರು ಆ ಕ್ಷೇತ್ರದ ಅಸದೃಶವಾದ ಮಾಹಾತ್ಮ್ಯವನ್ನು ಹೇಳಲಿಕ್ಕೆ ನೂರು ವರ್ಷಗಳಾದರೂ ಸಾಲುವದಿಲ್ಲ. ೨

मुनीनां स सभां गत्वा वर्णयामास सादरम् ॥ ४ ॥

ಸಾತ್ವಿಕನಾದ ವಿಷ್ಣುವನ್ನು ಭೃಗಾಋಷಿಗಳು ಯಾವಾಗ ಪಾದದಿಂದ ತಾಡನಮಾಡಿದರೋ, ಆಗ ಅವರು ಋಷಿಗಳ ಸಭಾಕ್ಕೆ ಹೋಗಿ, ಆದರ ಪೂರ್ವಕವಾಗಿ ವರ್ಣನೆ ಮಾಡಿದರು. ೪

अच्युतं कमलाकान्तं भक्तवत्सलमव्ययम् ।
शांतं निजस्वरूपाढ्यं क्षमायास्तन्निकेतनम् ॥ ५ ॥

ಕ್ಷಮಾಗುಣಗಳ ತವರು ಮನೆಯಾದ, ಶಾಂತಗುಣವೇ ತನ್ನ ನಿಜಸ್ವರೂಪವಾದ, ಐಶ್ವರ್ಯ ಉಳ್ಳವನು, ಭಕ್ತವತ್ಸಲನು, ನಾಶರಹಿತನು, ಲಕ್ಷ್ಮೀಪತಿಯು ನಾಶರಹಿತನು. ೫

श्रुत्वा तद्वाक्यमत्युग्रं पादेनाहतमच्युतम् ।
अन्योन्यमालोक्य तदा भृगुं सर्वज्ञतार्किकम् ॥ ६ ॥

ಅಂತಹ ಅಚ್ಯುತನನ್ನು ಪಾದದಿಂದ ಹೇಗೆ ತಾಡನ ಮಾಡಿದರು ? ಎಂಬ ಅತಿ ಉಗ್ರವಾದ ಮಾತನ್ನು ಕೇಳಿ ಪರಸ್ಪರವಾಗಿ ಎಲ್ಲರೂ ನೋಡಿಕೊಂಡು ಆಗ ಸರ್ವಜ್ಞರೂ, ತಾರ್ಕಿಕರೂ, ಆದ ಭೃಗುಋಷಿಗಳನ್ನೂ ಕುರಿತು ಮಾತನಾಡಿದರು. ೬

ब्रह्मणो वरदो देवो जगद्व्यापी जनार्दनः ।
कथं तं स्वपदा हत्वा पावनोऽसि महीतले ॥ ७ ॥

ಬ್ರಹ್ಮದೇವರಿಗೂ ವರಪ್ರದನಾದ ನಾರಾಯಣನು ಜಗದ್ವ್ಯಾಪ್ಯನೂ, ಜನಾರ್ದನನು, ಅವನನ್ನು ತಮ್ಮ ಪಾದದಿಂದ ಹೇಗೆ ತಾಡನ ಮಾಡಿದರು ? ಮುಂದೆ ಭೂಮಂಡಲದಲ್ಲಿ ಹೇಗೆ ಪವಿತ್ರರಾಗುವರು. ೭

तद्वाक्यं वज्रसदृशं भृगुः श्रुत्वाऽतिखिन्नधीः ।
निष्कृतिं ब्रूत मुनयो यथा पूतो भवाम्यहम् ॥ ८ ॥

ಆ ಋಷಿಗಳ ವಜ್ರ ಸದೃಶವಾದ ಮಾತುಗಳನ್ನು ಕೇಳಿ ಬಹಳ ಖಿನ್ನರಾಗಿ ಭೃಗು

भृगुं प्रोचुः कृष्णावेण्यां संगमं तीर्थमव्ययम्।
विश्वतारकसंज्ञं च गत्वा याहि पवित्रताम् ॥ १० ॥

ಮತ್ತು ಭೃಗು ಋಷಿಗಳಿಗೆ ಹೇಳಿದರು. ಕೃಷ್ಣವೇಣೀತಟಾಕದಲ್ಲಿ ನಾಶವಿಲ್ಲದ ಸಂಗಮ ತೀರ್ಥವು ವಿಶ್ವತಾರಕ ಎಂಬ ಹೆಸರಿನ ತೀರ್ಥವು ಇರುವದು. ಅಲ್ಲಿ ಹೋಗಿ ಪವಿತ್ರರಾಗಿರಿ. ೧೦

कृष्णादर्शनतः किंचित्स्पर्शात् पापं तथैव च।
स्नानात्तत्तीरतपसः करणात्क्षिप्रमेव हि ॥ ११ ॥

ಕೃಷ್ಣವೇಣೀ ದರ್ಶನದಿಂದ ಕಿಂಚಿತ್ ಪಾಪ ಪರಿಹಾರವಾಗುವದು. ಹಾಗೂ ಸ್ಪರ್ಶದಿಂದ ಸ್ವಲ್ಪ ಪಾಪ ಬಿಡುವದು. ಆ ಕೃಷ್ಣವೇಣೀ ತೀರದಲ್ಲಿ ಸ್ನಾನಮಾಡಿ ತಪಃಸು ಮಾಡಿದರೆ ಬೇಗನೇ, ೧೧

सर्वं नश्यति ते पापं ज्ञानादज्ञानतः कृतम्।
तत्सेवनाच्चैव भृगो भृगुतीर्थं भविष्यति ॥ १२ ॥

ಜ್ಞಾನದಿಂದಲಾಗಲಿ, ಅಜ್ಞಾನದಿಂದಲಾಗಲಿ, ಮಾಡಿದಂಥ ಎಲ್ಲ ಪಾಪಗಳೂ ನಾಶ ಹೊಂದುವವು. ನೀವು ಅಲ್ಲಿ ತಪೋರೂಪ ಸೇವೆ ಮಾಡಿದರೆ, ಭೃಗು ಋಷಿಗಳೇ, ಭೃಗುತೀರ್ಥವೆಂದು ಪ್ರಸಿದ್ಧವಾಗುವದು. ೧೨

तद्वाक्यश्रवणात्तत्र गत्वा तत्राकरोत्तपः।
तपसा दर्शनं प्राप्तो भृगोर्विष्णुः सनातनः ॥ १३ ॥

ಆ ಋಷಿಗಳ ವಾಕ್ಯವನ್ನು ಕೇಳಿ ಆ ಭೃಗುಋಷಿಗಳು ಕೃಷ್ಣವೇಣೀತಟಾಕಕ್ಕೆ ಹೋಗಿ ತಪಃಸು ಮಾಡುವವರಾದರು. ಅವರ ತಪಃಸಿಗೆ ಸನಾತನರೂಪಿಯಾದ ವಿಷ್ಣುಸು, ಭೃಗು ಋಷಿಗಳಿಗೆ ದರ್ಶನ ಕೊಟ್ಟನು. ೧೩

तं दृष्ट्वा पूजयामास केशवं भार्गवस्तदा।
निष्पापोसि ऋषेत्युक्त्वा चान्तर्धानं समाययौ ॥ १४ ॥

नश्यन्त्यैव न संदेहः कृष्णवेण्याः प्रसादतः. १६ ॥

ನಿಃಸಂದೇಹವಾಗಿ ಕೃಷ್ಣವೇಣಿಯ ಪರಮ ಪ್ರಸಾದದಿಂದ ನಿಃಸಂದೇಹವಾಗಿ ನಾಶವಾಗುವವು. ೧೬

॥ इति श्रीस्कांदे कृष्णामाहात्म्ये विश्वतारकतीर्थ वर्णनं नाम
अष्टचत्वारिंशत्तमोऽध्यायः ॥

❀ ❀ ❀

## ॥ अथ एकोनपंचाशत्तमोऽध्यायः ॥

स्कंद उवाच –

भृगुतीर्थं ततो जग्मुर्याज्ञवल्क्यादयो द्विजाः ।
यानि यानि च तीर्थानि स्नातुं भक्त्या तपस्विनः ॥ १ ॥

ಯಾಜ್ಞವಲ್ಕ್ಯಾದಿ ಸಕಲ ಬ್ರಾಹ್ಮಣರು ಭೃಗುತೀರ್ಥಕ್ಕೆ ಹೋದರು. ಅಲ್ಲಿಂದ ತಪಸ್ವಿಗಳಾದ ಅವರು ಯಾವ ಯಾವ ತೀರ್ಥಗಳು ಇರುವವೋ ಆ ಎಲ್ಲ ಕಡೆಗೆ ಭಕ್ತಿಯಿಂದ ಸ್ನಾನಮಾಡಲು ಹೊರಟರು. ೧

जंबुतीर्थं ततो जग्मुः सिद्धिं यत्राप जांबवान् ।
जंबुतीर्थस्य माहात्म्यं वक्तुमिच्छामि भो द्विजाः ॥ २ ॥

ಅಲ್ಲಿಂದ ಜಂಬುತೀರ್ಥಕ್ಕೆ ಬಂದರು. ಜಾಂಬುವಂತನು ಸಿದ್ಧಿ ಪಡೆದ ಸ್ಥಳವು. ಹೇ ಬ್ರಾಹ್ಮಣರೇ ! ಜಂಬುತೀರ್ಥದ ಮಾಹಾತ್ಮ್ಯವನ್ನು ಹೇಳುವೆನು. ಕೇಳಿರಿ. ೨

जांभवान् रामपादाब्जरजसाप्लुत ऐक्यवान् ।
राममेव सदा ध्यायन्मेघश्यामं कृपानिधिम् ॥ ३ ॥

ಜಾಂಬುವಂತನು ರಾಮದೇವರ ಪಾದಕಮಲಗಳ ಧೂಳಿಯಲ್ಲಿ ಮುಳುಗಿರುವವ

ನನ್ನು ಯುದ್ಧ ಮುಗಿದಮೇಲೆ ಆ ಕೃಷ್ಣಮೂರ್ತಿಯನ್ನು, ರಾಮಮೂರ್ತಿಯನ್ನೂ ಐಕ್ಯತ್ವೇನ ನೋಡಿದನು. ೪

त्राहि त्राहीत्युवाचैनं वचसा करुणानिधिम्।
प्रणम्य प्रददौ कन्यारत्नं कृष्णाय भक्तितः ॥ ५ ॥

ಕರುಣಾನಿಧಿಯಾದ ಶ್ರೀಕೃಷ್ಣಪರಮಾತ್ಮನನ್ನು, ತ್ರಾಹಿ ತ್ರಾಹಿ (ರಕ್ಷಿಸು ರಕ್ಷಿಸು) ಎಂಬ ವಾಕ್ಯಗಳಿಂದ ಪ್ರಾರ್ಥನೆಮಾಡಿ, ಶ್ರೀಕೃಷ್ಣಪರಮಾತ್ಮನಿಗೆ ಭಕ್ತಿಯಿಂದ ನಮಸ್ಕಾರಮಾಡಿ ತನ್ನ ಮಗಳಾದ ಕನ್ಯಾರತ್ನವನ್ನು (ಜಾಂಬುವತಿಯನ್ನು) ಕನ್ಯಾದಾನ ಮಾಡಿದನು. ೫

स्वामिद्रोहकृतं पापं केन गच्छति सत्वरम्।
इति स्म पृच्छत्स ऋषी जांबवान् परमादरात् ॥ ६ ॥

ಜಾಂಬುವಂತನು ಪರಮಾದರಪೂರ್ವಕವಾಗಿ ಋಷಿಗಳನ್ನು ಕೇಳಿದನು. ಸ್ವಾಮಿ ದ್ರೋಹಮಾಡಿದ ಪಾಪ ಬೇಗನೇ ಪರಿಹಾರವಾಗುವ ಮಾರ್ಗಯಾವುದು. ೬

स्ववृत्तान्तं निवेद्याथ तीर्थयात्रार्थमुद्यतः।
ऋषयस्तं तदा प्रोचुस्तत् पापक्षालनाय च ॥ ७ ॥

ತನ್ನ ವೃತ್ತಾಂತವನ್ನು ನಿವೇದನ ಮಾಡಿಕೊಂಡ ಮೇಲೆ ಋಷಿಗಳು ಪಾಪಕ್ಷಾಲನೆ ಗೋಸ್ಕರ ತೀರ್ಥಯಾತ್ರೆಯನ್ನು ಮಾಡು ಎಂದು ಹೇಳಿದರು. ೭

धन्योऽसि ऋक्षवर्यस्त्वं धन्योऽसि महतामपि।
संपादितं कृष्णवाक्यं तथापि कुरु निष्कृतिम् ॥ ८ ॥

ಋಕ್ಷವರ್ಯ (ಕರಡಿಯಲ್ಲಿ ಶ್ರೇಷ್ಠನೇ) ಜಾಂಬುವಂತನೇ! ನೀನು ಧನ್ಯನು. ಮಹಾತ್ಮರಲ್ಲಿಯೂ ಪರಮಧನ್ಯನು. ಶ್ರೀಕೃಷ್ಣಪರಮಾತ್ಮನ ವಾಕ್ಯವನ್ನು ಪಾಲಿಸುವಿ. ಆದರೂ ಪಾಪವನ್ನು ದೂರಮಾಡಿಕೊಳ್ಳು. ೮

श्रुत्वा तदैव सहसा ऋक्षराजो महामनाः ॥ १० ॥

ಆ ವಿರಜಾತೀರ್ಥದಲ್ಲಿ ಹೋಗಿ ಇರು. ನಿನ್ನ ಎಲ್ಲ ಪಾಪವು ನಾಶವಾಗುವದು. ಅವರ ಮಾತು ಕೇಳಿದ ತಕ್ಷಣ ಋಕ್ಷರಾಜನಾದ, ಮಹಾಬುದ್ಧಿವಂತನಾದ, ಜಾಂಬುವಂತನು. ೧೦

गंगां जगाम शुध्यर्थं ब्राह्मणानां वचस्मरन् ।
षण्मासावधि तत्रस्थो जांबवान् राममच्युतम् ॥ ११ ॥

ಬ್ರಾಹ್ಮಣರ ಮಾತು ಕೇಳಿಕೊಂಡು ಪಾಪಶುಧ್ಯರ್ಥಿಯಾಗಿ ಕೃಷ್ಣವೇಣಿ (ಗಂಗಾ)ಯನ್ನು ಕುರಿತು ಹೋದನು. ಆರು (೬) ತಿಂಗಳ ಪರ್ಯಂತ ಅಲ್ಲೇ ಇದ್ದುಕೊಂಡು ಜಾಂಬುವಂತನು ಅಚ್ಯುತನಾದ ಶ್ರೀರಾಮಚಂದ್ರ ದೇವರನ್ನು, ೧೧

पूजयामासविधिवद्गंगास्नानपरायणः ।
प्रादुर्बभूव गंगा तु तमुवाच कृपानिधिः ॥ १२ ॥

ಗಂಗಾ (ಕೃಷ್ಣವೇಣಿ) ಸ್ನಾನಮಾಡುವವನಾಗಿ ವಿಧಿಪೂರ್ವಕವಾಗಿ ರಾಮ ದೇವರನ್ನು ಪೂಜೆಮಾಡಿದನು. ಕೃಪಾನಿಧಿಯಾದ ಕೃಷ್ಣವೇಣಿ(ಗಂಗಾ)ದೇವಿಯು ಪ್ರಕಟಳಾಗಿ ಆ ಜಾಂಬುವಂತನಿಗೆ ಹೇಳಿದಳು. ೧೨

जांबवन् गतपापस्त्वं त्वन्नाम्ना तीर्थमुत्तमम् ।
ख्यातिं यास्यति मत्तीरे स्नानात्पातकनाशनम् ॥ १३ ॥

ಜಾಂಬುವಂತನೇ ! ನಿನ್ನ ಪಾಪವು ಪರಿಹಾರವಾಗಿದೆ. ನಿನ್ನ ಹೆಸರಿನಿಂದಲೇ ಈ ತೀರ್ಥವು ಉತ್ತಮವಾದ ಖ್ಯಾತಿಯನ್ನು ಪಡೆಯಲಿ. ಈ ಜಂಬುತೀರ್ಥದಲ್ಲಿ ಸ್ನಾನ ಮಾಡತಕ್ಕವರ ಎಲ್ಲ ಪಾತಕಗಳೂ ನಾಶವಾಗಲಿ. ೧೩

इत्युक्त्वान्तर्हिता देवी तीर्थे सा विष्णुरूपिणी ।
जांबवान् आश्रमं कृत्वा तीर्थे तेजः समादधौ ॥ १४ ॥

ರುದ್ರದೇವರನ್ನು ದರ್ಶನ ಪಡೆಯುವನೋ ಅವನು ಸಕಲ ಪಾಪಗಳಿಂದ ಶುದ್ಧನಾಗಿ ಸ್ಥಿರವಾದ ಬ್ರಹ್ಮತ್ವವನ್ನು ಪಡೆಯುವನು. ೧೫

श्रुत्वाख्यानमिदं सम्यक् तीर्थं जांबवतः क्रमात् ।
तत्तीर्थस्नानजनितं पुण्यमाप्नोति मानवः ॥ १६ ॥

ಈ ಜಂಬು ತೀರ್ಥದ ಆಖ್ಯಾನವನ್ನು ಯಥಾಸ್ಥಿತವಾಗಿ ಕ್ರಮವಾಗಿ ಯಾರು ಶ್ರವಣ ಮಾಡುವರೋ ಅವರು ಸ್ನಾನದಿಂದ ಬರುವ ಪುಣ್ಯವನ್ನು ಪಡೆಯುವರು. ೧೬

॥ इति श्रीस्कान्दे कृष्णामाहात्म्ये एकोनपंचाशत्तमोऽध्यायः ॥

❀ ❀ ❀

## ॥ अथ पंचाशत्तमोऽध्यायः ॥

ऋषय ऊचुः –

मानुष्यं देहमालंब्य कृष्णः परबलार्दनः ।
चकार सर्वकर्माणि प्राकृतोऽन्यो यथागुह ॥ १ ॥

ಷಣ್ಮುಖನೇ ! ಶತ್ರುಗಳ ಬಲವನ್ನು ನಾಶಮಾಡುವ ಶ್ರೀಕೃಷ್ಣಪರಮಾತ್ಮನು ಮನುಷ್ಯ ದೇಹವನ್ನು ತೆಗೆದುಕೊಂಡು, ಪ್ರಾಕೃತ ಪುರುಷರಂತೆ ಎಲ್ಲ ಕರ್ಮಗಳನ್ನು ಹೇಗೆ ಮಾಡಿದನು. ೧

अनागसं जांबवंतं युद्धे नापीडयत्कथम् ।
मण्यर्थे सदसि प्रोक्तं तस्मात्सत्राजितं रुषा ॥ २ ॥

ನಿರ್ದೋಷಿಯಾದ ಜಾಂಬವಂತನನ್ನು ಯುದ್ಧದಲ್ಲಿ ಹೇಗೆ ಪರಾಭವ ಗೊಳಿಸಿದನು ?ಸಭೆಯಲ್ಲಿ ಸತ್ರಾಜಿತನಿಗೆ ಕೃಷ್ಣನಿಗೆ ರತ್ನವನ್ನು ಕೊಡು ಎಂದು ಹೇಳಿದರೂ ಕೃಷ್ಣನ ಮೇಲಿನ ಸಿಟ್ಟನಿಂದ. ೨

तं हत्वा जांबवान् रत्नमहरत् स्वगुहां गतः ।
अस्मिन्नर्थे संशयो नस्तं छिंधि बहुलात्मज ॥ ४ ॥

ಆ ಜಾಂಬುವಂತನು ಆ ಸಿಂಹವನ್ನು ಸಂಹರಿಸಿ, ಆ ಸ್ಯಮಂತಕ ರತ್ನವನ್ನು ಹರಣ ಮಾಡಿ ತನ್ನ ಗುಹೆಗೆ ಹೋದನು. ಈ ವಿಷಯದಲ್ಲಿ ನಮಗೆ ಸಂಶಯ ಹುಟ್ಟಿದೆ. ಆ ಸಂಶಯವನ್ನು ಪರಿಹರಿಸಿರಿ. ೪

स्कंद उवाच –

इति तत्प्रश्नसंदृष्टः कार्तिकेयो महामतिः ।
उवाच कृपयाविष्टो विचित्रं तत्कथानकम् ॥ ५ ॥

ಮಹಾಮತಿಯಾದ ಕಾರ್ತಿಕೇಯನಾದ ಷಣ್ಮುಖನು ಈ ಪ್ರಶ್ನೆಯಿಂದ ಪರಮ ಸಂತುಷ್ಟನಾಗಿ, ದಯಾಘನನಾಗಿ ಈ ವಿಚಿತ್ರವಾದ ಈ ಕಥಾನಕವನ್ನು ಹೇಳಿದನು. ೫

श्रृणुध्वं ऋषयः सर्वे कथां पौराणिकीं शुभाम् ।
कृष्णस्य चरितप्रख्यां सर्वपापनुदां शुभाम् ॥ ६ ॥

ಸಕಲ ಪಾಪಗಳನ್ನು ಪರಿಹರಿಸುವ, ಪ್ರಸಿದ್ಧವಾದ, ಶ್ರೀಕೃಷ್ಣ ಪರಮಾತ್ಮನ, ಪ್ರಸಿದ್ಧವಾದ ಚರಿತವು ಶುಭಕರವಾದ ಪೌರಾಣಿಕೀ ಕಥಾ ಉಳ್ಳದ್ದು. ಹೇ ಋಷಿಗಳೆಲ್ಲರೇ ! ಹೇಳುವೆನು. ಕೇಳಿರಿ. ೬

पापस्पर्शो न वै जातु कृष्णस्याक्लिष्टकर्मणः ।
तथापि लोकशिक्षार्थं धृतदेहस्य भूतले ॥ ७ ॥

ನಿರ್ದುಷ್ಟವಾದ ಕರ್ಮಮಾಡತಕ್ಕ ಶ್ರೀ ಕೃಷ್ಣ ಪರಮಾತ್ಮನಿಗೆ ಪಾಪಗಳ ಸ್ಪರ್ಶವೂ ಕೂಡ ಇರುವದಿಲ್ಲ. ಆದರೂ ಲೋಕಶಿಕ್ಷಣಕ್ಕೋಸ್ಕರ ಭೂಮಂಡಲದಲ್ಲಿ ದೇಹಧಾರಣ ಮಾಡಿದನು. ೭

न चाह निष्कृतिं कुर्यात्कर्मणां संकरो भवेत् ॥ ९ ॥

ಪರರಿಗೆ ದ್ರೋಹಮಾಡಿದ ಪಾಪವನ್ನು ಎಲ್ಲಿಗೆ ಹೋಗಿ ಕಳೆದು ಕೊಳ್ಳಬೇಕು. ನನಗೆ ಹೇಳಿರಿ. ನಾನು ಪಾಪವನ್ನು ಕಳೆದುಕೊಳ್ಳದೇ ಹೋದರೆ ಕರ್ಮಗಳ ಸಂಕರವಾಗುವದು. ೯

**ब्राह्मणा ऊचुः –**

ब्रह्महत्यादिपापानि तथा चात्यन्तपापिनाम् ।
नश्यन्तु यस्य नामोक्त्या तस्य किं तव पातकम् ॥ १० ॥

ಬ್ರಹ್ಮಹತ್ಯಾದಿ ಮಹಾ ಪಾಪಗಳೂ, ಇನ್ನೂ ಅದರಂತೆ ಎಷ್ಟೇ ಪಾಪಗಳ ನಾಶವು ಕೇವಲ ನಿನ್ನ ನಾಮಸ್ಮರಣದಿಂದ ಪರಿಹಾರವಾಗುವವು. ಅಂದ ಮೇಲೆ ನಿನಗೆ ಎಲ್ಲಿಂದ ಪಾಪಗಳು ಬರುವವು. ೧೦

अवशोऽपि गिरा ब्रूते कृष्ण कृष्णेति नामते ।
सद्यो मुक्तिमवाप्नोति तस्य किं पातकं गुरो ॥ ११ ॥

ಪರವಶನಾಗಿಯೂ ಕೃಷ್ಣ ಕೃಷ್ಣ ಎಂದು ನಾಮೋಚ್ಚಾರಣೆ ಮಾಡಿದರೂ, ತತ್ ಕ್ಷಣ ಮುಕ್ತಿ ಯಾಗುವದು. ಅಂದ ಮೇಲೆ ಆ ಶ್ರೀಕೃಷ್ಣನಿಗೆ ಪಾತಕಗಳು ಎಲ್ಲಿಂದ ಬರುವವು. ೧೧

**कृष्ण उवाच –**

सत्यमुक्तं भवद्भिस्तु तथापि तनुधारणात् ।
अवश्यमेव कर्तव्या ज्ञात्वा निष्कृतिरात्मनः ॥ १२ ॥

ಋಷಿಗಳೇ! ನೀವು ನಿಜವಾದದ್ದನ್ನೇ ಹೇಳಿದಿರಿ. ಆದರೂ ಭೂಮಿಯಲ್ಲಿ ದೇಹಧಾರಣ ಮಾಡಿದಮೇಲೆ ಅವಶ್ಯವಾಗಿ ತಮ್ಮ ಪಾಪಗಳ ನಿವಾರಣೆ ಮಾಡಿಕೊಳ್ಳಬೇಕು. ೧೨

तीर्थं तीर्थविदां श्रेष्ठा यूयं पावनं द्विजाः ।

ऊचुस्ते कृपयाविष्टाः सर्वज्ञं जगदीश्वरम् ॥ १४ ॥

ಕರುಣಾಪೂರ್ಣನಾದ ಶ್ರೀಕೃಷ್ಣಪರಮಾತ್ಮನ ವಾಕ್ಯವನ್ನು ಋಷಿಗಳು ಕೇಳಿ ಕೃಪಾವಿಷ್ಟರಾದ ಬ್ರಾಹ್ಮಣರು, ಜಗದೀಶ್ವರನಾದ ಸರ್ವಜ್ಞನಾದ ಶ್ರೀಕೃಷ್ಣ ಪರಮಾತ್ಮನಿಗೆ ಹೇಳಿದರು. ೧೪

ऋषय ऊचुः –

पृथिव्यां यानि तीर्थानि क्षेत्राणि विविधानि च ।
भुक्तिमुक्तिप्रदान्येव पापक्षयकराणि च ॥ १५ ॥

ಪಾಪಗಳನ್ನು ಕ್ಷಯ ಮಾಡಿ ಭುಕ್ತಿ-ಮುಕ್ತಿಗಳೆರಡನ್ನು ಕೊಡುವಂಥ ಅನೇಕ ಕ್ಷೇತ್ರಗಳೂ, ತೀರ್ಥಗಳೂ ಪೃಥಿವಿಯಲ್ಲಿ ಇರುವವು. ೧೫

वक्ष्यामस्तानि सर्वज्ञ श्रृणुष्वैकमना गुरो ।
मथुरा द्वारका माया अयोध्या कांच्यवंतिका ॥ १६ ॥

ಸರ್ವಜ್ಞನಾದ ಶ್ರೀಕೃಷ್ಣನೇ! ಅವೆಲ್ಲ ತೀರ್ಥ ಕ್ಷೇತ್ರಗಳನ್ನೂ ಹೇಳುವೆನು. ಏಕಾಗ್ರವಾದ ಮನಃಸಿನಿಂದ ಕೇಳು. ಮಥುರಾ, ದ್ವಾರಕಾ, ಮಾಯಾ, ಅಯೋಧ್ಯಾ, ಕಂಚಿ, ಅವಂತಿಕಾ, ೧೬

काशी क्षेत्रं कुरुक्षेत्रं हरिक्षेत्रं च पुष्करम् ।
नैमिषं च प्रभासं च गंगासागरसंगमः ॥ १७ ॥

ಕಾಶೀಕ್ಷೇತ್ರವು, ಕುರುಕ್ಷೇತ್ರವು, ಹರಿಕ್ಷೇತ್ರವು ಮತ್ತು ಪುಷ್ಕರಕ್ಷೇತ್ರವು, ನೈಮಿಷಾರಣ್ಯವು, ಪ್ರಭಾಸವೂ, ಗಂಗಾಸಾಗರಸಂಗಮವೂ, ೧೭

महेंद्रपर्वतश्चैव सेतुबंधस्तथैव च ।
गया च त्रिविधा प्रोक्ता श्रीरंगं तीर्थमुत्तमम् ॥ १८ ॥

ಮಹೇಂದ್ರ ಪರ್ವತವೂ, ಸೇತುಬಂಧನವೂ, ಗಯಾಕ್ಷೇತ್ರವೂ, ಉತ್ತಮೋತ್ತಮವಾದ ಶ್ರೀರಂಗತೀರ್ಥವೂ, ೧೮

गंगा गोदावरी चैव यमुना च सरस्वती ।

सर्वज्ञोऽसि विचार्यैव तीर्थं स्वाभिमतं व्रज ॥ २० ॥

ಶ್ರೀಕೃಷ್ಣನೇ ! ಎಲ್ಲ ತೀರ್ಥಗಳ ಸಮೂಹಗಳೂ, ಪುಣ್ಯದಾಯಕವಾದವುಗಳು ಎಂದು ನಮ್ಮ ಮತವಿರುವದು. ನೀನು ಸರ್ವಜ್ಞನಾದ ಕಾರಣ ವಿಚಾರ ಮಾಡಿ ನಿನಗೆ ಅಭಿಮತವಾದ ತೀರ್ಥಕ್ಕೆ ಹೋಗಬಹುದು. ೨೦

इति तद्वाक्यमाश्रित्य प्रहस्य जगदीश्वरः ।
प्रोवाच वासुदेवस्तान्सर्वलोकोपकारकम् ॥ २१ ॥

ಹೀಗೆ ಆ ಬ್ರಾಹ್ಮಣರ ಮಾತುಗಳನ್ನು ಕೇಳಿ ಜಗದೀಶ್ವರನಾದ ಶ್ರೀಕೃಷ್ಣನು ಮಂದಹಾಸದಿಂದ ಎಲ್ಲ ಜನರಿಗೂ ಪರಮೋಪಕಾರಕವಾದ ಮಾತುಗಳನ್ನು ಆ ಬ್ರಾಹ್ಮಣರಿಗೆ ಹೇಳಿದನು. ೨೧

तीर्थं तत्कृष्णवेण्यां च प्रसिद्धं जनपावनम् ।
पापनाशनसंज्ञं यद्भार्गवाद्बाणयुग्मकम् ॥ २२ ॥

ಕೃಷ್ಣವೇಣೀ ತಟಾಕದಲ್ಲಿ ಇರುವ ತೀರ್ಥವು ಬಹಳ ಪ್ರಸಿದ್ಧವೂ, ಜನರನ್ನು ಪವಿತ್ರ ಮಾಡುವಂತಹದೂ ಪಾಪನಾಶನ ತೀರ್ಥವೆಂದು ಸಂಜ್ಞೆಯುಳ್ಳದ್ದು. ಭೃಗುತೀರ್ಥದ ಮುಂದೆ ಎರಡು ಬಾಣ ಅಂತರದ ಮೇಲೆ ಇರುವದು. ೨೨

युष्मद्वाक्यामृतं श्रुत्वा गच्छाम्यादरतो द्विजाः ।
अन्यत्र लभते पुण्यं नृभिर्वर्षशताधिकैः ॥ २३ ॥

ಬ್ರಾಹ್ಮಣರೇ ! ನಿಮ್ಮ ಅಮೃತದಂತಹ ವಾಕ್ಯವನ್ನು ಕೇಳಿ ಆದರ ಪೂರ್ವಕ ಕೃಷ್ಣವೇಣೀ ತಟಾಕಕ್ಕೆ ಹೋಗುವೆನು. ಮನುಷ್ಯರಿಗೆ ಬೇರೆ ಬೇರೆ ತೀರ್ಥಗಳಲ್ಲಿ ನೂರಾರು ವರ್ಷಕ್ಕಿಂತಲೂ ಹೆಚ್ಚು ತಪಃಸು ಮಾಡುವ ಪುಣ್ಯವು, ೨೩

त्रिरात्रेण सदा पुण्यं कृष्णातीरे मुनीश्वराः ॥ २४ ॥

ಮೂರು ದಿವಸಗಳಲ್ಲಿಯೇ ಆ ಪುಣ್ಯವು, ಕೃಷ್ಣಾತೀರದಲ್ಲಿ, ಋಷಿಗಳೇ, ಬರುವದು. ೨೪

ತಕ್ಷಣ ಫಲಪ್ರದಳು. ಉತ್ತರವಾಹಿನಿಯಾಗಿ ಪ್ರವಹಿಸುವಳು. ಸಕಲ ಇಷ್ಟಾರ್ಥವನ್ನೂ ಕೊಡುವವಳು. ೨೫

सर्वपापक्षयकरी कृष्णा चोत्तरवाहिनी।
तत्रैव गमनं युक्तं पापनाशनतीर्थके ॥ २५ ॥

ಪಾಪನಾಶನತೀರ್ಥದಲ್ಲಿ ಉತ್ತರವಾಹಿನಿಯಾದ ಕೃಷ್ಣವೇಣಿಯು ಎಲ್ಲ ಪಾಪಗಳನ್ನೂ ಕ್ಷಯಮಾಡುವಂತಹಳೂ, ಆದಕಾರಣ ಅಲ್ಲಿಯೇ ಹೋಗುವದು ಯುಕ್ತ. ೨೫

न जाह्नवी न यमुना पुष्करं गोमती न च।
सरस्वती हरिक्षेत्रं यथा कृष्णोत्तरावहा ॥ २६ ॥

ಹೇಗೆ ಉತ್ತರ ವಾಹಿನಿಯಾದ ಕೃಷ್ಣವೇಣಿಯು ಎಲ್ಲ ಪಾಪಕ್ಷಯಮಾಡುವಳೋ ಹಾಗೇ ಗಂಗಾದೇವಿಯೂ ಅಲ್ಲ ಯಮುನಾ, ಪುಷ್ಕರ, ಗೋಮತೀ, ಸರಸ್ವತಿ, ಹರಿಕ್ಷೇತ್ರಗಳು ಯಾವವೂ ಆಗುವದಿಲ್ಲ. ೨೬

स्नानं चोत्तरवाहिन्यां सर्वपापक्षयंकरम्।
वाजपेयफलं दानात्तीरवासाच्च निर्वृतिः ॥ २७ ॥

ಉತ್ತರವಾಹಿನಿಯಲ್ಲಿ ಸ್ನಾನಮಾಡಿದರೆ ಸಕಲ ಪಾಪಕ್ಷಯವಾಗುವದು. ಕೃಷ್ಣವೇಣಿಯ ಉತ್ತರವಾಹಿನಿಯ ತೀರದಲ್ಲಿ ವಾಸಮಾಡಿದರೆ ವಾಜಪೇಯ ಯಜ್ಞದ ಫಲವನ್ನು ದಾನ ಮಾಡಿದಷ್ಟು ಫಲಪ್ರದವಾಗಿದೆ. ಹಾಗೂ ನಿವೃತ್ತಿ ಧರ್ಮವೂ ಆಗಿದೆ. ೨೭

सर्वतीर्थाधिका गंगा कृष्णावेणी शुभप्रदा।
उदग्वहा महादोषनाशिनी मुक्तिदायिनी ॥ २८ ॥

ಎಲ್ಲ ತೀರ್ಥಗಳಿಗಿಂತಲೂ, ಅಧಿಕ ಉತ್ತಮಳಾದವಳು ಗಂಗಾದೇವಿಯು. ಕೃಷ್ಣವೇಣಿಯು ಎಲ್ಲರಕಿಂತಲೂ ಶುಭಪ್ರದಳು. ಉತ್ತರವಾಹಿನಿಯಾದ ಕೃಷ್ಣವೇಣಿಯು ಮಹಾದೋಷವನ್ನು ನಾಶಮಾಡಿ ಮುಕ್ತಿದಾಯಕಳು. ೨೮

ऊचुः प्रांजलयस्तज्ज्ञाः कृष्णं त्रिभुवनेश्वरम्।
गंतव्यं कृष्णवेणीं तां कृष्णाऽस्माभिः सुभक्तितः ॥ ३० ॥

ಜ್ಞಾನವಂತರಾದ ಎಲ್ಲ ಬ್ರಾಹ್ಮಣರು ಪ್ರಾಂಜಲಿಬದ್ಧರಾಗಿ ಭುವನತ್ರಯಗಳಿಗೆ ಸ್ವಾಮಿಯಾದ ಶ್ರೀಕೃಷ್ಣಪರಮಾತ್ಮನನ್ನು ಕುರಿತು, ಶ್ರೀಕೃಷ್ಣನೇ ಭಕ್ತಿಪುರಃಸರವಾಗಿ ನಾವೂ ಬರುವೆವು. ನಮ್ಮಿಂದ ಕೂಡಿಕೊಂಡು ಆ ಕೃಷ್ಣವೇಣೀನದಿಯನ್ನು ಕುರಿತು ಹೊರಡುವವರಾಗಬೇಕು. ೩೦

मासावधिं वा पक्षं वा स्नानदानार्थमेव च ।
श्रुत्वा मुनीनां वचनं ह्यनुकूलं तदा हरिः ॥ ३१ ॥

ಒಂದು ತಿಂಗಳ ಅವಧಿಯಾಗಲಿ, ಅಥವಾ ಪಕ್ಷವಾಗಿರಲಿ, ಸ್ನಾನ-ದಾನದ ಸಲುವಾಗಿ ಯಾದರೂ ಹೋಗತಕ್ಕದ್ದು ಎಂಬ ಮುನಿಗಳ ಮಾತನ್ನು ಕೇಳಿ ಆಗ ಶ್ರೀಹರಿಯು ಅವರವರಿಗೆ ಅನುಕೂಲವಾಗುವಂತೆ, ೩೧

सर्वेषां ख्यापनायाथ घोषयामास दुंदुभिम्।
सर्वैः सुहृद्भिः विप्रैश्च कृष्णवेणीं ययौ हरिः ॥ ३२ ॥

ಸರ್ವರಿಗೂ ತಿಳಿಯುವದರಗೋಸ್ಕರ ನಗಾರಿ ಬಾರಿಸಿದನು. ಎಲ್ಲ ಸುಹೃಜ್ಜನರಿಂದಲೂ ಬ್ರಾಹ್ಮಣರಿಂದಲೂ ಕೂಡಿಕೊಂಡು, ಶ್ರೀಹರಿ-ಕೃಷ್ಣಪರಮಾತ್ಮನು ಕೃಷ್ಣವೇಣಿಯನ್ನು ಕುರಿತು ಹೊರಟನು. ೩೨

आराद्गत्वा वासुदेवः कृष्णा चोत्तरवाहिनीम्।
वेणुनादं ततश्चक्रे नानास्वरविभूषितम् ॥ ३३ ॥

ಶ್ರೀಕೃಷ್ಣಪರಮಾತ್ಮನು ಕೂಡಲೇ ಉತ್ತರವಾಹಿನಿಯಾದ ಕೃಷ್ಣವೇಣಿಯನ್ನು ಕುರಿತು ಹೋದಕೂಡಲೇ ನಾನಾಸ್ವರಗಳಿಂದ ಭೂಷಿತ ವೇಣುನಾದ ಮಾಡಿದನು. ೩೩

जनाघं हन्तुकामेन त्वया कृष्णविनिर्मिता ॥ ३५ ॥

ಈ ಕೃಷ್ಣವೇಣಿಯು ಪರಮ ಧನ್ಯಳು. ಆ ಮೇಲೆ ನಿನ್ನ ಅಂಶದಿಂದ ಹುಟ್ಟಿದವಳು. ಜನರ ಪಾಪಗಳ ಸಮೂಹವನ್ನೇ ನಾಶಮಾಡಲಿಕ್ಕೆ ನೀನು ನಿರ್ಮಾಣಮಾಡಿರುವಿ. ೩೫

कृष्णः प्रोवाच तान् सर्वान् स्नानं कुर्वंतु सादराः।
स्नात्वा कृष्णोऽपि सहसा आयुतं गाः समाददौ ॥ ३६ ॥

ಶ್ರೀಕೃಷ್ಣಪರಮಾತ್ಮನು ಎಲ್ಲರಿಗೂ ಹೇಳಿದನು. ಎಲ್ಲರೂ ಭಕ್ತಿಪುರಃಸರವಾಗಿ ಸ್ನಾನಮಾಡಿರಿ. ಕೃಷ್ಣಪರಮಾತ್ಮನೂ ಕೂಡ ಸ್ನಾನಮಾಡಿ ಆದೇಕ್ಷಣದಲ್ಲಿ ಹತ್ತು ಸಹಸ್ರ (೧೦,೦೦೦) ಗೋದಾನಮಾಡಿದನು. ೩೬

व्राह्मणेभ्यस्तथा दानं स्वर्णरत्नांबरादिकम्।
भोजनं ब्रह्मणेभ्यश्च एवं सप्तदिनं हरिः ॥ ३७ ॥

ಹಾಗೂ ಬ್ರಾಹ್ಮಣರಿಗೆ ಸುವರ್ಣ, ರತ್ನ, ವಸ್ತ್ರ ಮುಂತಾದವುಗಳ ದಾನಗಳನ್ನೂ ಕೊಟ್ಟರು. ಬ್ರಾಹ್ಮಣರಿಗೆ ಭೋಜನವನ್ನೂ ಹಾಕಿದರು. ಹೀಗೆ ಏಳು ದಿನಗಳವರೆಗೆ ಸತತವಾಗಿ ಮಾಡಿದರು. ೩೭

तदन्ते दर्शनं तस्य कृष्णावेण्या बभूव ह।
कृष्णस्य धर्मगुप्त्यर्थं लोकयात्राकृतस्य च ॥ ३८ ॥

ಕೊನೇದಿವಸ ಧರ್ಮರಕ್ಷಣ ಮಾಡುವದರಗೋಸ್ಕರ ಲೋಕಯಾತ್ರೆ ಮಾಡು ವಂಥ ಶ್ರೀಕೃಷ್ಣ ಪರಮಾತ್ಮನಿಗೆ ಕೃಷ್ಣವೇಣಿಯು ದರ್ಶನ ಕೊಟ್ಟಳು. ೩೮

तां दृष्ट्वा सहसोत्थाय कृष्णः स पुरुषोत्तमः।
उवाच मुनिभिर्देवैः प्रीत्या गद्गदवाग्घरिः ॥ ३९ ॥

ಆ ಕೃಷ್ಣವೇಣೀ ದೇವಿಯನ್ನು ನೋಡಿ, ಪುರುಷೋತ್ತಮನಾದ ಶ್ರೀಕೃಷ್ಣ

दर्शनं चिरमतत्तु वद कृष्ण सुपावनि ॥ ४१ ॥

ಹೇ ಕೃಷ್ಣವೇಣೀ ! ಪುಣ್ಯಯುಗದಲ್ಲಿ (ಕೃತಯುಗದಲ್ಲಿ) ಒಂದು ಜನ್ಮದಲ್ಲಿ ನಾನು ಪಾಪ ಮಾಡಿರುವೆನು. ಹೇ ಪಾವನೀ ! ಆ ಪಾಪ ಪರಿಹಾರಕ್ಕೆ, ನಿನ್ನ ದರ್ಶನಕ್ಕೆ ಬಂದಿರುವೆನು. ಪಾಪ ಪರಿಹಾರೋಪಾಯವನ್ನು ಹೇಳು. ೪೧

कृष्णवेणी उवाच –

कृष्ण कृष्ण महायोगिन् जगन्मय नमोस्तुते ।
संसारसागराज्जंतूनुद्धर्तुं त्वमिहागतः ॥ ४२ ॥

ಮಹಾಯೋಗಿಯಾದ ಶ್ರೀಕೃಷ್ಣ ಪರಮಾತ್ಮನೇ ! ಜಗನ್ಮಯನೇ, ನಿನಗೆ ಅನಂತಾನಂತ ನಮಸ್ಕಾರಗಳು. ಸಂಸಾರಸಾಗರದಲ್ಲಿ ಮುಳುಗಿ ದುಃಖ ಪಡುತಕ್ಕ ಪ್ರಾಣಿಗಳನ್ನು ಉದ್ಧಾರ ಮಾಡುವದರಗೋಸ್ಕರ ನೀನು ಇಲ್ಲಿ ಬಂದಿರುವಿ. ೪೨

यस्य नामोदयः सूर्यः पापनीहारसंहतिम् ।
नाशयत्येव सहसा तव पारं कुतो भवेत् ॥ ४३ ॥

ಸೂರ್ಯೋದಯದಿಂದ ಮಂಜು ಕರಗಿಹೋದಂತೆ ನಿನ್ನ ನಾಮಸ್ಮರಣವೆಂಬ ಸೂರ್ಯೋದಯವಾದಮೇಲೆ ಪಾಪವೆಂಬ ಮಂಜು ಕರಗಿ ಹೋಗುವದು. (ನಾಶವಾಗುವದು) ಅಂದ ಮೇಲೆ ನಿನಗೆ ಎಲ್ಲಿಂದ ಪಾಪ ಘಟನೆಯಾಗುವದು. ೪೩

त्रैलोक्यपावनार्थाय लोकशिक्षार्थमेव च ।
तीर्थयात्रा कृता स्वामिन्भवता करुणात्मना ॥ ४४ ॥

ತ್ರೈಲೋಕ್ಯವನ್ನು ಪವಿತ್ರಗೊಳಿಸುವದರಗೋಸ್ಕರ ಲೋಕ ಶಿಕ್ಷಣದಗೋಸ್ಕರ ತೀರ್ಥಯಾತ್ರೆ ಮಾಡುವ ಸ್ವಾಮಿಯೇ ! ನಿನ್ನ ಅಂತಃಕರಣ ಬಹಳ. ೪೪

त्वां याचे करुणापूर्ण मत्तीरे पुरुषोत्तम ।
तिष्ठ सर्वैः सुहृद्भिस्त्वं सुरैर्मुनिगणैस्तथा ॥ ४५ ॥

[illegible]
ಈ ಕೃಷ್ಣಾವೇಣೀತೀರದಲ್ಲಿ ಕೃಷ್ಣಾತೀರ್ಥದಲ್ಲಿ ಸ್ನಾನಮಾಡಿ ಕೃಷ್ಣಸ್ಮರಣ ಮಾಡತಕ್ಕವರು, ೪೬

जन्मजन्मार्जितैः पापैर्मुच्यते नात्र संशयः ।
अयमेव वरो देयो देवेष्वपि सुदुर्लभः ॥ ४७ ॥

ಜನ್ಮಜನ್ಮಾಂತರಗಳಲ್ಲಿ ಮಾಡಿದ ಪಾಪಗಳಿಂದ ನಿಃಶ್ಚಯವಾಗಿಯೂ ಮುಕ್ತರಾಗುವರು. ದೇವತೆಗಳಿಗೂ ದುರ್ಲಭವಾದ ಈ ವರವು ನಿನ್ನಿಂದ ಕೊಡಲ್ಪಡಲಿ. ೪೭

अविलंबेन मे स्वामिन्वियोगभयहेतुतः ।
प्रहस्य वासुदेवोऽपि श्रुत्वोवाच सतां हरिः ॥ ४८ ॥

ಪರಮ ಪೂಜ್ಯನೇ! ಅವಕಾಶ ಮಾಡಬೇಡ. ನಿನ್ನ ವಿಯೋಗದಿಂದ ಭಯ ಬರುವದು. ಆದ್ದರಿಂದ ಬೇಗನೇ ವಾಸವಾಗಿರು. ವಾಸುದೇವನೂ ಮಂದಹಾಸ ಪೂರ್ವಕವಾಗಿ ಮಾತನಾಡಿದನು. ಸಜ್ಜನರಿಗೆ ಆನಂದವಾಗುವಂತೆ. ೪೮

एवमस्त्विति तत्तीर्थरूपी परमपावनः ।
त्रिलोकीं पावयन्तत्र स्थितो मुनिगणैः सह ॥ ४९ ॥

ಹೀಗೆ ಪರಮ ಪಾವನವಾದ ತೀರ್ಥರೂಪೀ ಕೃಷ್ಣವೇಣಿಯ ತೀರದಲ್ಲಿ ಲೋಕವನ್ನು ಪವಿತ್ರಮಾಡುತ್ತ ಎಲ್ಲ ಮುನಿಗಳಿಂದಲೂ ಕೂಡಿಕೊಂಡು ವಾಸಮಾಡಿದನು. ೪೯

विचित्रमिदमाख्यानं श्रवणात्पापनाशनम् ।
श्रावयेद्यः सदा भक्त्या वांछितार्थान् समाप्नुयात् ॥ ५० ॥

ಈ ಆಖ್ಯಾನವು ಬಹಳ ವಿಚಿತ್ರವಾಗಿದೆ. ಶ್ರವಣಮಾತ್ರದಿಂದ ಪಾಪ ಪರಿಹಾರವಾಗುವದು. ಆದಕಾರಣ ಭಕ್ತಿಪುರಃಸ್ಸರವಾಗಿ ಯಾರು ಶ್ರವಣ ಮಾಡುವರೋ ಅವರಿಗೆ ಇಷ್ಟಾರ್ಥಗಳು ಪರಿಪೂರ್ಣವಾಗುವವು. ೫೦

॥ इति श्रीस्कान्दे कृष्णामाहात्म्ये कृष्णातीर्थ उततरवाहिनी तीर्थ महिमवर्णनं नाम पंचाशत्तमोऽध्यायः ॥

❀ ❀ ❀

कृष्णातीर्थात्पुरो भागे बाणयुग्मप्रमाणतः ।
आदित्यतीर्थमित्युक्तं सद्यः सर्वाघनाशनम् ॥ १ ॥

ಆ ಕೃಷ್ಣಾತೀರ್ಥದ ಮುಂದೆ ಎರಡು ಬಾಣದ ಅವಧಿಯ ಮೇಲೆ ಕೂಡಲೇ ಸಕಲ ಪಾಪಗಳ ನಾಶಮಾಡುವಂಥ ಆದಿತ್ಯತೀರ್ಥ ಎಂದು ತೀರ್ಥವಿದೆ. ೧

जपस्तपस्तथा दानं होमः श्राद्धं तिलोदकम् ।
तत्राक्षयं भवेन्नित्यं कृष्णवेण्यां द्विजोत्तमाः ॥ २ ॥

ಹೇ ಬ್ರಾಹ್ಮಣ ಶ್ರೇಷ್ಠರೇ ! ಕೃಷ್ಣವೇಣಿಯಲ್ಲಿಯ ಆದಿತ್ಯತೀರ್ಥದಲ್ಲಿ ಜಪ, ತಪ, ಹಾಗೂ ದಾನ, ಹೋಮ, ಶ್ರಾದ್ಧ, ತಿಲೋದಕ, ಇವುಗಳನ್ನು ಅಲ್ಲಿ ಮಾಡಿದರೆ ಅಕ್ಷಯ ಫಲ ಪ್ರಾಪ್ತಿಯಾಗುವದು. ೨

आदित्यहृदयं नित्यं पठेत्तीरे पुमांस्तु यः ।
सप्तजन्मार्जितैः पापैर्मुच्यते नात्र संशयः ॥ ३ ॥

ಆ ಕೃಷ್ಣಾತೀರದ ಆದಿತ್ಯತೀರ್ಥದಲ್ಲಿ ನಿತ್ಯದಲ್ಲಿಯೂ, ಆದಿತ್ಯ ಹೃದಯವನ್ನು ಯಾರು ಪಠನಮಾಡುವರೋ, ಅವರು ಏಳು-ಏಳು ಜನ್ಮಗಳಲ್ಲಿ ಮಾಡಿದ ಎಲ್ಲ ಪಾಪಗಳಿಂದಲೂ ನಿಃಸಂಶಯವಾಗಿ ಮುಕ್ತರಾಗುವರು. ೩

तत्र स्नात्वा तमभ्यर्च्य नदीमध्यगतं हरिम् ।
सर्वपापविशुद्धात्मा भित्वा चंडांशुमंडलम् ॥ ४ ॥

ಆ ಆದಿತ್ಯತೀರ್ಥದಲ್ಲಿ ಸ್ನಾನಮಾಡಿ ನದಿಯ ಮಧ್ಯದಲ್ಲಿ ಇರುವ ಶ್ರೀಹರಿಯನ್ನು ಯಾರು ಪೂಜಿಸುವರೋ, ಅವರು ಸಕಲ ಪಾಪಗಳಿಂದ ಶುದ್ಧರಾಗಿ ಸೂರ್ಯಮಂಡಲವನ್ನು ಭೇದಿಸಿಗೊಂಡು. ೪

स याति तत्पदं शुद्धं पूतात्माह्यघवानपि ।
कृष्णायां च ततस्तीर्थं मुद्गलाख्यं महत्तरम् ॥ ५ ॥

तीर्थं षट्धनुषां सम्यक् सर्वपापहरं द्विजाः ।
ज्ञानदं सर्वलोकानां यमलोकनिवारणम् ॥ ७ ॥

ಆರು ಬಾಣದ ಮುಂದೆ ಇರುವ ವಿದುರತೀರ್ಥವು ಸಕಲ ಪಾಪ ಪರಿಹಾರಕ ವಾಗಿರುವದು. ಬ್ರಾಹ್ಮಣೋತ್ತಮರೇ! ಎಲ್ಲ ಜನರಿಗೂ ಜ್ಞಾನಪ್ರದವಾಗಿದೆ. ಯಮ ಲೋಕ ನಿವಾರಣೆಯಾಗುವದು. ೭

पृथक् फलानि तीर्थानि सन्त्यस्मिन् वै पदे पदे ।
तीरद्वये तथा मध्ये पापघ्नानि न संशयः ॥ ७ ॥

ಈ ಕೃಷ್ಣವೇಣೀತೀರದಲ್ಲಿ ಎರಡು ದಂಡೆಯಲ್ಲಿ ಹಾಗೂ ಮಧ್ಯದಲ್ಲಿ ಪಾಪ ಪರಿಹಾರಕವಾದ ಬೇರೆ ಬೇರೆ ಫಲಪ್ರದವಾದ ತೀರ್ಥಗಳು ಹೆಜ್ಜೆ-ಹೆಜ್ಜೆಗೆ ಇರುವವು. ೮

तीर्थानि कृष्णवेण्यां तु बहूक्त्या किं मयोच्यते ।
यत्स्पर्शपुण्याच्चरहः प्रवृद्धं पापं जनानां विधुनोति वायुः ॥ ९ ॥

ಈ ಕೃಷ್ಣವೇಣಿಯಲ್ಲಿ ತೀರ್ಥಗಳು ಬಹಳಷ್ಟು ಇವೆ. ಅಂತ ನಾನೇನು ಹೇಳಲಿ? ಕೃಷ್ಣವೇಣೀ ಸ್ಪರ್ಶಮಾತ್ರದಿಂದ ಪುಣ್ಯವೃದ್ಧಿಯಾಗುವದು. ಗಾಳಿಯ ಸ್ಪರ್ಶದಿಂದ ಜನರ ಪಾಪವು ನಾಶವಾಗುವದು. ೯

ध्वांतं यथार्को जगतां धुनोति तां विस्तराद्वर्णयितुं क ईष्टे ।
ततश्च शतलिंगायाः संगमो मुक्तिदः स्मृतः ॥ १० ॥

ಹೇಗೆ ಸೂರ್ಯನು ಜಗತ್ತಿನ ಕಗ್ಗತ್ತಲೆಯನ್ನು ನಾಶಮಾಡಿದ್ದನ್ನು ವಿಸ್ತಾರವಾಗಿ ವರ್ಣಿಸಲಿಕ್ಕೆ ಯಾರು ಸಮರ್ಥರು? ಹಾಗೆಯೇ ಕೃಷ್ಣವೇಣೀ ಮಾಹಾತ್ಮ್ಯವನ್ನು ವರ್ಣಿಸುವದು ಯಾರಿಗೂ ಸಾಧ್ಯವಿಲ್ಲ. ಅದರ ಮುಂದೆ ಕೃಷ್ಣವೇಣಿಗೆ ಶತಲಿಂಗ ಸಂಗಮವಿದೆ. ಅದು ಮುಕ್ತಿದಾಯಕವಾಗಿದೆ. ೧೦

क्रौंचतीर्थं ततो यत्र सिद्धिं क्रौंचमुनिर्ययौ ।
यज्ञवाटं ततः पूर्वं विदुरस्य महात्मनः ॥ ११ ॥

तत्र स्नात्वा नरो भक्त्या वाजपेयफलं लभेत् ।
ततश्च षण्मुखः साक्षात् कृष्णां द्रष्टुं समाययौ ॥ १२ ॥

ವಿದುರನು ಯಜ್ಞ ಮಾಡಿದ ಸ್ಥಳದ ತೀರ್ಥದಲ್ಲಿ ಸ್ನಾನಮಾಡಿದರೆ ವಾಜಪೇಯ ಯಜ್ಞ ಮಾಡಿದ ಫಲ ಬರುವದು. ಮುಂದೆ ಸಾಕ್ಷಾತ್ ಷಣ್ಮುಖನು ಕೃಷ್ಣವೇಣಿಯನ್ನು ನೋಡುವದಕ್ಕೆ (ದರ್ಶನಕ್ಕೆ) ಬಂದನು. ೧೨

गौरी तत्र ययौ पश्चात् पुत्रसंदर्शनार्थिनी ।
स्वयंभूः शंकरश्चापि तत्र सन्निहितः सदा ॥ १३ ॥

ಮಗನ ಸಂದರ್ಶನಾರ್ಥಿಯಾಗಿ ಪಾರ್ವತೀ ದೇವಿಯೂ ಕೂಡ ಅಲ್ಲಿ ಬಂದಳು. ಅಲ್ಲಿಯೇ ರುದ್ರದೇವರೂ ಕೂಡ ಸ್ವಯಂಭೂ ಆಗಿ ಸನ್ನಿಹಿತರಾಗಿರುವರು. ೧೩

विनायकस्तु यत्स्नेहात् समायातो गणैः सह ।
तत्रैव सान्निधिं चक्रुः सर्वे तत्स्थानगौरवात् ॥ १४ ॥

ವಿನಾಯಕನೂ ಕೂಡ ಪರಮ ಸ್ನೇಹದಿಂದ ತನ್ನ ಗಣಗಳಿಂದ ಕೂಡಿಕೊಂಡು ಅಲ್ಲಿಗೆ ಬಂದನು. ಆ ಸ್ಥಾನಗೌರವದಿಂದ ಅಲ್ಲಿಯೇ ಸನ್ನಿಧಾನ ಉಳ್ಳವರಾದರು. ೧೪

कुमारस्य प्रियं स्थानं सर्वदा सर्वसिद्धिदम् ।
पापानि तत्र नश्यन्ति महापातकिनामपि ॥ १५ ॥

ಕುಮಾರನ (ಷಣ್ಮುಖನ) ಅತ್ಯಂತ ಪ್ರಿಯವಾದ ಸ್ಥಾನವು ಯಾವಾಗಲೂ ಎಲ್ಲ ರೀತಿಯ ಸಿದ್ಧಿಯನ್ನೂ ಉಂಟುಮಾಡಿಕೊಡುವದು. ಮಹಾಪಾತಕಿಗಳ ಪಾಪಗಳನ್ನೂ ನಾಶಮಾಡುವಂತಹದು. ೧೫

तत्तीर्थं सर्वपापघ्नं सर्वसिद्धिकरं सदा ।
कुमारालयमित्येतत्प्रख्यातं भुवनत्रये ॥ १६ ॥

ಆ ತೀರ್ಥವು ಎಲ್ಲ ಪಾಪಗಳನ್ನೂ ನಾಶಮಾಡಿ ಸರ್ವಸಿದ್ಧಿಪ್ರದವಾಗಿದೆ. ಆದ್ದರಿಂದ ಭುವನತ್ರಯದಲ್ಲಿ ಕುಮಾರಾಲಯವೆಂದು ಪ್ರಸಿದ್ಧಿ ಪಡೆದಿರುವದು. ೧೬

यत्र सीता सुखं लेभे लक्ष्मीमाराध्य भक्तितः ॥ १८ ॥

ಅವರ ಮುಂದೆ ಅತ್ಯುತ್ತಮವಾದ ಸೀತಾಹ್ರದತೀರ್ಥವಿರುವದು. ಎಲ್ಲಿ ಸೀತಾದೇವಿಯು ಲಕ್ಷ್ಮೀದೇವಿಯನ್ನು ಭಕ್ತಿಯಿಂದ ಆರಾಧನೆ ಮಾಡಿ ಸುಖವನ್ನು ಪಡೆದಿರುವಳೋ ಅದು ಸೀತಾತೀರ್ಥವು. ೧೮

तत्र स्नात्वा नरो भक्त्या पूतः स्वर्गतिमाप्नुयात् ।

ऋषय ऊचुः –

ततः किमभवत्स्कंद याज्ञवल्क्येन तापसैः ॥ १९ ॥

ಅಲ್ಲಿ ಯಾವ ಮನುಷ್ಯರು ಭಕ್ತಿಯಿಂದ ಸ್ನಾನಮಾಡುವರೋ, ಅವರು ಪವಿತ್ರರಾಗಿ ಸ್ವರ್ಗ ಲೋಕಕ್ಕೆ ಹೋಗುವರು

**ಋಷಿಗಳು ಪ್ರಶ್ನೆಮಾಡುವರು –**

ಅಲ್ಲಿಂದ ಮುಂದೆ ಯಾಜ್ಞವಲ್ಕ್ಯರೇ ಮುಂತಾದ ತಪಸ್ವಿಗಳು ಏನು ಮಾಡಿದರು ? ೧೯

संवादो ज्ञानदः सर्वैस्तीर्थयात्राविशारदैः ।
कृपया वद सर्वज्ञ सुमहात्म्यं विशेषतः ॥ २० ॥

ನೀವೆಲ್ಲರೂ ತೀರ್ಥಯಾತ್ರಾ ವಿಶಾರದರಾದವರು. ಜ್ಞಾನಪ್ರದವಾದ ಸಂವಾದ ಉಳ್ಳವರು. ಸರ್ವಜ್ಞರಾದ ಸ್ಕಂದದೇ! ನಮ್ಮ ಮೇಲೆ ಕೃಪೆಮಾಡಿ ವಿಶೇಷವಾಗಿ ಒಳ್ಳೆಮಹಾತ್ಮ್ಯವನ್ನು ಹೇಳಿರಿ. ೨೦

इति तत्प्रश्नसंतुष्टः हृदयो मुनिपुंगवः ।
प्रोवाच कार्तिकेयस्तु ऋषीन्धर्मार्थसंहितम् ॥ २१ ॥

ಹೀಗೆ ಆ ಋಷಿಗಳ ಪ್ರಶ್ನೆಯಿಂದ ಸಂತುಷ್ಟರಾದ ಅಂತಃಕರಣಪೂರ್ಣರಾದ ಕಾರ್ತಿಕೇಯರು ಆ ಋಷಿಗಳಿಗೆ ಪುರುಷಾರ್ಥಗಳ ಸಂಹಿತೆಯಾದ ರಹಸ್ಯವನ್ನು ಹೇಳಿದರು. ೨೧

ಆ ಸಮಯದಲ್ಲಿ ಕೃಷ್ಣತೀರ್ಥದಲ್ಲಿ ಸ್ನಾನಮಾಡಿದರು. ಒಂದು ಕ್ಷಣ ಅದೇ ತಟದಲ್ಲಿ ವಿಶ್ರಾಂತಿಯನ್ನು ಪಡೆದು ಮುದ್ಗಲ ತೀರ್ಥವನ್ನು ನೋಡಿ, ಅಲ್ಲಿಂದ ಕ್ರೌಂಚತೀರ್ಥ. ೨೩

सीताह्रदं ततो जग्मुः स्नात्वा च परमादरात्।
संध्यां कृत्वा ततो जग्मुः द्रौपदीतीर्थमुत्तमम् ॥ २४ ॥

ಅಲ್ಲಿಂದ ಸೀತಾತೀರ್ಥಕ್ಕೆ ಹೋಗಿ, ಪರಮಾದರ ಪೂರ್ವಕ ಸ್ನಾನಮಾಡಿ, ಸಂಧ್ಯಾವಂದನೆಮಾಡಿ ಅಲ್ಲಿಂದ ಹೊರಟು ಉತ್ತಮೋತ್ತಮವಾದ ದ್ರೌಪದೀ ತೀರ್ಥವನ್ನು ಕುರಿತು ಹೋದರು. ೨೪

धर्मतीर्थं समालोक्य धौम्यतीर्थं तथैव च।
तीर्थानामुत्तमं तीर्थं शंखतीर्थमनुत्तमम् ॥ २५ ॥

ಅಲ್ಲಿಂದ ಧರ್ಮತೀರ್ಥವನ್ನು ನೋಡಿ, ಮುಂದೆ ಧೌಮ್ಯತೀರ್ಥವನ್ನು ಅದರಂತೆ ಎಲ್ಲ ತೀರ್ಥಗಳಲ್ಲಿ ಉತ್ತಮವಾದ ಶಂಖತೀರ್ಥಕ್ಕೆ ಹೋದರು. ೨೫

पार्वतेयं च ते गत्वा याज्ञवल्क्यं ऋषीश्वराः।
समपृच्छन्कथं तीर्थं द्रौपद्याख्यं भुवि श्रुतम् ॥ २६ ॥

ಆ ಎಲ್ಲ ಋಷೀಶ್ವರರು ಯಾಜ್ಞವಲ್ಕ್ಯ ಋಷಿಗಳ ಹತ್ತರ ದ್ರೌಪದೀತೀರ್ಥದ ಮಾಹಾತ್ಮ್ಯವನ್ನು ಭೂಮಂಡಲದಲ್ಲಿ ಪ್ರಸಿದ್ಧವಾದದ್ದು ಹೇಗೆ? ಎಂದು ಹೇಳಿರಿ. ಅಂತ ಕೇಳಿದರು. ೨೬

जातं कथं हि धर्मस्य धौम्यस्य च पुनर्वद।
शंखतीर्थस्य माहात्म्यं कृष्णायां भुवि विश्रुतम् ॥ २७ ॥

ಧರ್ಮರಾಜನಿಗೂ, ಧೌಮ್ಯಋಷಿಗಳಿಗೂ ಹೇಗೆ ಸಂವಾದವಾಯಿತು? ಭೂಮಂಡಲದಲ್ಲಿ ಹೇಗೆ ಪ್ರಸಿದ್ಧವಾಯಿತು? ಆ ಶಂಖತೀರ್ಥದ ಮಾಹಾತ್ಮ್ಯವನ್ನೂ ಹೇಳಿರಿ. ೨೭

स्कंद उवाच –

तत्पापनिष्कृतिः कुत्र प्रोच्यतां स्नानदानतः ॥ २९ ॥

ಜ್ಞಾತಿಗಳೂ, ಸುಹೃಜ್ಜನರೂ ಹಾಗೂ ಗುರುಗಳೂ ನನ್ನಿಂದ ಬುದ್ಧಿಪೂರ್ವಕವಾಗಿ ಹತರಾದರು. ಆ ಪಾಪವನ್ನು ಹೇಗೆ ಪರಿಹಾರ ಮಾಡಿಕೊಳ್ಳಬೇಕು ? ಎಲ್ಲಿ ಸ್ನಾನಮಾಡಬೇಕು ? ಯಾರಿಗೆ ಯಾವದಾನ ಮಾಡಬೇಕು ? ಅವಶ್ಯವಾಗಿ ಹೇಳಿರಿ. ೨೯

तादृशं प्रवरं तीर्थं मद्राज्ये पुण्यसंचयः ।
भविता तत्समालोच्य शीघ्रं ब्रूत तपोधनाः ॥ ३० ॥

ತಪೋಧನರೇ ! ನನ್ನ ರಾಜ್ಯದಲ್ಲಿ ಪುಣ್ಯಸಂಚಯವಾಗಬೇಕು. ಅಂತಹ ಶ್ರೇಷ್ಠವಾದ ತೀರ್ಥವು ಯಾವುದು ? ವಿಚಾರಮಾಡಿ ಬೇಗನೆ ಹೇಳಿರಿ. ೩೦

मनसालोच्य सिध्या च प्रोचुस्तीर्थमनुत्तमम् ।

ऋषय ऊचुः –

अथ तीर्थं प्रवक्ष्यामः श्रृणु त्वमनुजैः सह ॥ ३१ ॥

ಮನಸ್ಸಿನಲ್ಲಿ ವಿಚಾರಮಾಡಿ ಸಿದ್ಧಿಯುಳ್ಳವರಾಗಿ, ಉತ್ತಮೋತ್ತಮವಾದ ತೀರ್ಥವನ್ನು ಋಷಿಗಳು ಹೇಳಿದರು. ತೀರ್ಥಮಾಹಾತ್ಮ್ಯವನ್ನು ಹೇಳುವೆನು. ಮನುಷ್ಯರಿಂದ ಕೂಡಿಕೊಂಡು ಕೇಳು. ೩೧

ज्ञातिक्षयकृतात्पापान्मुच्यसे त्वं युधिष्ठिर ।
तच्छ्रुत्वा सानुजो धर्मः प्रांजलिश्चोक्तवान् मुनीन् ॥ ३२ ॥

ಧರ್ಮರಾಜನೇ ! ಜ್ಞಾತಿಗಳ ಕ್ಷಯಮಾಡಿದ ಪಾಪಗಳಿಂದ ನೀನು ಮುಕ್ತನಾಗುವಿ. ಅವನ್ನು ಕೇಳಿ ಎಲ್ಲ ತಮ್ಮಂದಿರಿಂದ ಕೂಡಿಕೊಂಡು ಧರ್ಮರಾಜನು ಕೈಮುಗಿದುಕೊಂಡು ಋಷಿಗಳಿಗೆ ಪ್ರಶ್ನೆಮಾಡಿದನು. ೩೨

शीघ्रं ब्रुवन्तु भो विप्राः सर्वज्ञाः करुणाकराः ।

ब्राह्मणा ऊचुः –

ಯಾವ ಸ್ಥಳದಲ್ಲಿ ಅಸ್ಥಿಗಳು ಕೃಷ್ಣವೇಣೀ ಜಲಸ್ಪರ್ಶವಾದ ಮೇಲೆ ಆರು ತಿಂಗಳಲ್ಲಿಯೇ ಶಿಲಾರೂಪಗಳಾಗುವವು ? ಧರ್ಮರಾಜನೇ ! ಇದರಕಿಂತಲೂ ಉತ್ತಮ ವಾದ ತೀರ್ಥ ಇನ್ನು ಯಾವದಿದೆ. ೩೪

तच्छ्रुत्वा धर्मराजोऽसौ ब्राह्मणैर्बंधुभिः सह ।
केशवेन च संयुक्तो हस्त्यश्वादिभिरावृतः ॥ ३५ ॥

ಅದನ್ನು ಕೇಳಿ ಧರ್ಮರಾಜನು ಬ್ರಾಹ್ಮಣರಿಂದಲೂ, ಬಾಂಧವರಿಂದಲೂ ಹಾಗೂ ಶ್ರೀಕೃಷ್ಣ ಪರಮಾತ್ಮನಿಂದಲೂ ಕೂಡಿಕೊಂಡು ಆನೆ, ಕುದುರೆ, ಮುಂತಾದ ರಾಜವೈಭವದಿಂದ ಕೂಡಿಕೊಂಡು. ೩೫

धौम्येन स्वजनैर्भक्त्या प्रजाभिर्मुख्यवृत्तिभिः ।
प्रययौ पांडवः श्रीमान् जयंतीं महतीं पुरीम् ॥ ३६ ॥

ಧೌಮ್ಯಋಷಿಗಳಿಂದಲೂ, ಸ್ವಜನರಿಂದಲೂ, ಮುಖ್ಯವೃತ್ತಿಯಲ್ಲಿ ಇರುವ ಪ್ರಜಾಜನರಿಂದಲೂ ಕೂಡಿಕೊಂಡು ಭಕ್ತಿಪುರಃಸರವಾಗಿ ಭಾಗ್ಯವಂತನಾದ ಧರ್ಮ ರಾಜನು ಮಹತ್ತರವಾದ ಜಯಂತೀಪಟ್ಟಣಕ್ಕೆ ಹೋದನು. ೩೬

हृष्टपुष्टजनाकीर्णां गोपुरैरुपशोभिताम् ।
चतुर्द्वारां महापद्मसदृशां लोकरक्षकाम् ॥ ३७ ॥

ಮಹಾಪದ್ಮದಂತೆ ಲೋಕರಕ್ಷಕವಾದ ನಾಲ್ಕು ಮಹಾದ್ವಾರ ಉಳ್ಳ ದೊಡ್ಡದೊಡ್ಡ ಗೋಪುರಗಳಿಂದ ಶೋಭಿತವಾದ ಆನಂದದಿಂದ ಪರಿಪುಷ್ಟರಾದ ಜನರಿಂದ ತುಂಬಿ ತುಳುಕುವ, ೩೭

दृष्ट्वेंद्रनगरीतुल्यां राजा हर्षसमाकुलः ।
क्रोशार्धंदंतिकं यानादुत्तीर्य परमादरात् । ३८ ।

कृष्णां दृष्ट्वा धर्मराजा प्रणनाम मुहुर्मुहुः ॥ ३९ ॥

ಎಲ್ಲ ಸಜಾತೀಯರೂ, ವಿಜಾತೀಯರಿಂದಲೂ ಕೂಡಿಕೊಂಡು ಬುದ್ಧಿವಂತನಾದ ಧರ್ಮರಾಜನು ಕೃಷ್ಣವೇಣಿಯನ್ನು ನೋಡಿ, ಪುನಃ-ಪುನಃ ನಮಸ್ಕಾರಮಾಡಿದನು. ೩೯

सर्वे लोकास्तदा कृष्णां नमश्चक्रुर्मुदान्विताः ।
गंगातीरे तदागत्य स्नानं चक्रुर्यथाविधि ॥ ४० ॥

ಆಗ ಎಲ್ಲ ಜನರೂ ಸಂತೋಷಭರಿತರಾಗಿ ಕೃಷ್ಣವೇಣಿಗೆ ನಮಸ್ಕರಿಸಿದರು. ಗಂಗಾ ತಟಾಕಕ್ಕೆ ಬಂದು ವಿಧಿಪೂರ್ವಕವಾಗಿ ಸ್ನಾನ ಮಾಡಿದರು. ೪೦

धौम्यमामंत्र्य चापृच्छद्दातुं दानानि भक्तितः ।
केभ्यो दानं प्रदातव्यं वक्तव्याऽपात्रपात्रता ॥ ४१ ॥

ಧೌಮ್ಯ ಮುನಿಗಳನ್ನು ಆಮಂತ್ರಿಸಿ ಭಕ್ತಿಯಿಂದ ದಾನಗಳನ್ನು ಯಾರಿಗೆ ಕೊಡತಕ್ಕದ್ದು ? ಏನು ದಾನಕೊಡುವದು. ಪಾತ್ರ ಅಪಾತ್ರರೂ ಯಾರು ಹೇಳಿರಿ. ೪೧

पात्रापात्रविचारेण कृतं दानं सुपुण्यदम् ।
वक्तव्यं विस्तराद्धौम्य कृष्णातीरे विशेषतः ॥ ४२ ॥

ಪಾತ್ರಾಪಾತ್ರ ವಿಚಾರಮಾಡಿ ದಾನ ಮಾಡುವದು ಪುಣ್ಯ ಪ್ರದವಾಗಿದೆ. ಆದ್ದರಿಂದ ಧೌಮ್ಯ ಋಷಿಗಳೇ ! ಈ ಕೃಷ್ಣಾತೀರದಲ್ಲಿ ವಿಶೇಷವಾಗಿ ವಿಸ್ತಾರವಾಗಿ ಹೇಳಿರಿ. ೪೨

धौम्य उवाच –

दानानि विविधानीह सर्वथा कर्तुमर्हसि ।
पात्राणि कथयिष्ये त्वां तदिहैकमनाः श्रृणु ॥ ४३ ॥

ಬಹುವಿಧವಾದ ದಾನಗಳು ಇರುವವು. ಅವಶ್ಯ ಮಾಡಲೇಬೇಕು. ನಿನಗೆ ಪಾತ್ರಗಳನ್ನು ಹೇಳುವೆನು. ಏಕಾಗ್ರಮನಃಸಿನಿಂದ ಕೇಳು. ೪೩

न मत्तेचैव चोन्मत्ते न स्तेने न चिकित्सके ।
न वाग्हीने विवर्णे वा नांगहीने न वामने ॥ ४५ ॥

ಮತ್ತರಿಗೆ ಉನ್ಮತ್ತರಿಗೂ, ಕಳ್ಳರಿಗೆ, ವೈದ್ಯರಿಗೆ, ಮೂಕರಿಗೆ, ಕುರೂಪಿಗಳಿಗೆ, ಅಂಗಹೀನರಾದವರಿಗೆ, ಕುಬ್ಜರಿಗೆ ದಾನ ಮಾಡಬಾರದು. ೪೫

न दुर्जने दौः कुले वा व्रतैर्वा यो न संस्कृतः ।
यत् श्रोत्रियमृते दानं दानं ब्रह्मविवर्जिते ॥ ४६ ॥

ದುರ್ಜನರಿಗೆ, ದುಷ್ಟಕುಲದಲ್ಲಿ ಹುಟ್ಟಿದವರಿಗೆ, ವ್ರತಗಳಿಂದ ಯಾರಿಗೆ ಸಂಸ್ಕಾರ ವಿಲ್ಲವೋ ಆ ಅಸಂಸ್ಕೃತರಿಗೆ, ಶ್ರೋತ್ರಿಯನಾಗದೇ ಇದ್ದವರಿಗೆ, ಅಬ್ರಾಹ್ಮಣನಿಗೆ. ೪೬

असम्यक्चैव यद्दत्तं असम्यक्च प्रतिग्रहः ।
उभयोः स्यादनर्थाय दातुरादातुरेव च ॥ ४७ ॥

ಅಯೋಗ್ಯರಿಗೆ ಕೊಡಬಾರದು. ಅಯೋಗ್ಯರಿಂದ ದಾನ ತೆಗೆದುಕೊಳ್ಳಬಾರದು. ಎರಡೂ ಕೊಡತಕ್ಕವರೂ ತೆಗೆದು ಕೊಳ್ಳತಕ್ಕವರೂ ಇಬ್ಬರಿಗೂ ಅನರ್ಥವಾಗುವದು. ೪೭

यथा खदिरमालंब्य शिलां वाप्यर्णवं तरेत् ।
मज्जन्मज्जन्नधो याति तद्वद्दाता प्रतिग्रही ॥ ४८ ॥

ಹೇಗೆ ಖದಿರವನ್ನು, ಬಂಡಿಗಲ್ಲನ್ನು ಕಟ್ಟಿಗೊಂಡು ಹೇಗೆ ಸಮುದ್ರ ದಾಟಲಿಕ್ಕೆ ಬರುವದಿಲ್ಲವೋ, ಹೇಗೆ ಮುಳುಗಿ ಮುಳುಗಿ ಹೋಗುವನೋ, ಹಾಗೆ ದಾನ ಮಾಡತಕ್ಕವನೂ ದಾನ ತೆಗೆದು ಕೊಳ್ಳತಕ್ಕವನೂ ಅನರ್ಥವನ್ನು ಹೊಂದುವರು. ೪೮

काष्ठैरार्द्रैर्यथा वह्निरुपस्तीर्णो न दीप्यते ।
तपःस्वाध्यायचारित्र्यैरेवं हीनः प्रतिग्रही ॥ ४९ ॥

ಹಸಿ ಕಟ್ಟಿಗೆಗಳನ್ನು, ಅಗ್ನಿಯು ಹೇಗೆ ಉರಿಸುವದಿಲ್ಲವೋ, ಹಾಗೆ ತಪಃಸ್ವಾಧ್ಯಾಯ ಚಾರಿತ್ರ್ಯಗಳಿಂದ ಹೀನನಾದ ವನಕಡೆಯಿಂದ ದಾನ ತೆಗೆದುಕೊಳ್ಳತಕ್ಕವನು ಹೀನನಾಗುವನು. ೪೯

ಹೇಗೆ ಕಟ್ಟಿಗೆಯಿಂದ ಮಾಡಿದ ಆನೆಯು ಗೊಂಬೆ, ಹೇಗೆ ಚರ್ಮದಿಂದ ಮಾಡಿದ ಮೃಗವ ಗೊಂಬೆ, ಅಧ್ಯಯನ ಮಾಡದ ಬ್ರಾಹ್ಮಣನು ಗೊಂಬೆ, ಮೂರೂ ಕೇವಲ ನಾಮಧಾರಕರು. ೫೧

यथा षंढरतिः स्त्रीषु यथा गौर्गवि वाऽफला ।
शकुनिर्वाप्यपक्षस्यान्निर्मन्त्रो ब्राह्मणस्तथा ॥ ५२ ॥

ಹೇಗೆ ಷಂಢನು ಸ್ತ್ರೀಯರಿಗೆ ರತಿ ಕೊಡಲು ಸಾಧ್ಯವಿಲ್ಲವೋ, ಹೇಗೆ ಆಕಳವು ಗೋಗಳಲ್ಲಿ ನಿಷ್ಫಲವೊ, ಹೇಗೆ ರೆಕ್ಕೆ ಇಲ್ಲದ ಪಕ್ಷಿಯು ವ್ಯರ್ಥವೋ, ಹಾಗೆ ವೇದ ಮಂತ್ರ ಅಧ್ಯಯನ ವಿಲ್ಲದ ಬ್ರಾಹ್ಮಣ ವ್ಯರ್ಥ. ೫೨

ग्रामधान्यं यथा शून्यं यथा कूपश्च निर्जलः ।
यथा हुतमनग्नौ च तथैव स्यान्निरक्षरः ॥ ५३ ॥

ಹೇಗೆ ಗ್ರಾಮಧಾನ್ಯಗಳು ಶೂನ್ಯವೋ, ಹೇಗೆ ನೀರಿಲ್ಲದ ಭಾವಿ ವ್ಯರ್ಥವೋ, ಭಸ್ಮದಲ್ಲಿ (ಬೂದಿಯಲ್ಲಿ) ಮಾಡಿದ ಹೋಮವು ಹೇಗೆ ವ್ಯರ್ಥವೋ, ಹಾಗೆ ನಿರಕ್ಷರನಾದ ಬ್ರಾಹ್ಮಣನು ವ್ಯರ್ಥ. ೫೩

देवतानां पितृणां च हव्यकव्यविनाशकः ।
शत्रुरर्थहरो मूर्खो न लोकान्प्राप्तुमर्हति ॥ ५४ ॥

ದೇವತೆಗಳ ಉದ್ದೇಶ್ಯವಾಗಿ ಮಾಡುವ ಹವ್ಯ ಹವನಾದಿಗಳು ಇವೆರಡಕ್ಕೂ ಪಿತೃಗಳ ಉದ್ದೇಶ್ಯವಾಗಿ ಮಾಡುವ ಕವ್ಯ ಶ್ರಾದ್ಧಾದಿಗಳೂ ಇವೆರಡಕ್ಕೂ ಆ ನಿರಕ್ಷರ ಬ್ರಾಹ್ಮಣನು ವಿನಾಶಕನು. ಶತ್ರುನು. ದ್ರವ್ಯಹರಣ ಮಾಡುವನು. ಮೂರ್ಖನು. ಸದ್ಗತಿಯನ್ನು ಪಡೆಯಲಾರನು. ೫೪

एवं ज्ञानविधिः प्रोक्तो मया तुभ्यं युधिष्ठिर ।
एवं ज्ञानग्रहे चेष्टो विशेषं श्रृणवतः परम् ॥ ५५ ॥

ಎಲೈ ಧರ್ಮ ರಾಜನೇ ಹೀಗೆ ಜ್ಞಾನ ವಿಧಿಯನ್ನು ನಾನು ನಿನಗೆ ಹೇಳಿರುವೆನು. ಹೀಗೆ ಜ್ಞಾನದ ಗ್ರಹಗಳ ವ್ಯಾಪಾರವು ಇನ್ನು ಮುಂದೆ ವಿಶಿಷ್ಟವಾದದ್ದನ್ನು ಹೇಳುವೆನು

तेषां दत्तं किंचिदपि तदानंत्याय कल्पते ।
पात्रापात्रं विचार्यैवं गंगातीरेऽतिपावने ॥ ५७ ॥

ಆ ಬ್ರಾಹ್ಮಣರಿಗೆ ಏನಾದರೂ ಕಿಂಚಿತ್ತು ದಾನ ಕೊಟ್ಟರೂ ಅನಂತ ಫಲಪ್ರದವಾಗುವದು. ಆದ್ದರಿಂದ ಗಂಗಾತೀರ(ಕೃಷ್ಣವೇಣೀ)ದಲ್ಲಿ ಪಾತ್ರಾಪಾತ್ರ ವಿಚಾರ ಮಾಡತಕ್ಕದ್ದು. ೫೭

दानं दद्यात्प्रयत्नेन युधिष्ठिर न संशयः ।
इति श्रुत्वा च तद्वाक्यं प्रहस्य च युधिष्ठिरः ॥ ५८ ॥

ಹೇ ಧರ್ಮನಂದನನೇ ! ನಿಃಸಂಶಯವಾಗಿ ಪ್ರಯತ್ನಪೂರ್ವಕವಾಗಿ ದಾನ ಕೊಡತಕ್ಕದ್ದು. ಈ ಮಾತನ್ನು ಕೇಳಿ ಧರ್ಮರಾಜನು ಮಂದಹಾಸದಿಂದ. ೫೮

दत्तासनेभ्यो विप्रेभ्यो दानानि सुबहून्यपि ।
प्रत्येकं भारमेकैकं सुवर्णं गोसमन्वितम् ॥५९ ॥

ಬ್ರಾಹ್ಮಣರಿಗೆ ಆಸನವನ್ನು ಕೊಟ್ಟು ಪ್ರತಿ ಒಬ್ಬರಿಗೂ ಒಂದು ಭಾರದಂತೆ ಸುವರ್ಣ ಸಹಿತವಾದ ಗೋದಾನವನ್ನೂ ಯಥೇಷ್ಟ ದಾನಗಳನ್ನೂ ಕೊಟ್ಟನು. ೫೯

प्रपात्य विधिवत्पिंडान् ज्ञातीनुद्दिश्य वारिणा ।
तुलापुरुषदानं वै सर्वदानोत्तमोत्तमम् ॥ ६० ॥

ಜ್ಞಾತಿಗಳನ್ನು ಉದ್ದೇಶಮಾಡಿಕೊಂಡು ಪಿಂಡದಾನವನ್ನೂ ಮಾಡಿದನು. ಎಲ್ಲ ದಾನಗಳಲ್ಲಿ ಉತ್ತಮೋತ್ತಮವಾದದ್ದು ತುಲಾಪುರುಷದಾನವು (ತುಲಾಭಾರವು). ೬೦

हयं गजांश्चान्नदानं श्रद्धया तत्र दत्तवान् ।
तदा संतुष्टमनसः सर्वे दानं प्रचक्रिरे ॥ ६१ ॥

ಕುದುರೆ, ಆನೆ, ಮುಂತಾದ ಪ್ರಾಣಿಗಳ ಸಹಿತ ಅನ್ನದಾನ ಸಹಿತ ಶ್ರದ್ಧಾಪೂರ್ವಕವಾಗಿ ದಾನಮಾಡಿದನು. ಆಗ ಸಂತೋಷ ಮನಃಸಿನಿಂದ ಎಲ್ಲರೂ ದಾನವನ್ನೂ ಮಾಡಿದರು. ೬೧

ಕೊಂಡನು. ಒಂದು ಭಾಗದಲ್ಲಿ ತಾನೇ ಸ್ವತಃ ಕೂತುಕೊಂಡು ಶುಚಿರ್ಭೂತನಾಗಿ. ೬೩

सुवर्णरत्नवैडूर्यप्रवालं मौक्तिकानि च।
निधाय भागे चान्यस्मिन्ब्राह्मणेभ्यः प्रदत्तवान् ॥ ६४ ॥

ಒಂದು ಭಾಗದಲ್ಲಿ ಸುವರ್ಣ ರತ್ನ ಪ್ರವಾಳ ಮುತ್ತುಗಳನ್ನು ಇಟ್ಟು ತುಲಾಭಾರ ಮಾಡಿ ಎಲ್ಲವನ್ನೂ ಬ್ರಾಹ್ಮಣರಿಗೆ ದಾನ ಮಾಡಿದನು. ೬೪

भूरि श्राद्धं ततः कृत्वा गोदानानि तथैव च।
पौरुषैः पावमान्यैश्च रुद्रसूक्तैस्तथैव च ॥ ६५ ॥

ಭೂರಿಶ್ರಾದ್ಧವನ್ನು ಮಾಡಿ ಹಾಗೂ ಗೋದಾನವನ್ನೂ ಮಾಡಿದನು. ಪುರುಷ ಸೂಕ್ತಗಳಿಂದಲೂ ರುದ್ರಸೂಕ್ತಗಳಿಂದಲೂ, ೬೫

अभिषिच्य महालिंगं स्वयं शंखेन तं हरिः।
सुवर्णकुसुमैः पूज्यबिल्वपत्रैस्तथैव च ॥ ६६ ॥

ಮಹಾಲಿಂಗವನ್ನು ಅಭಿಷೇಕಮಾಡಿ ಸ್ವತಃ ಹರಿಯು ಶಂಖದಿಂದಲೂ, ಸುವರ್ಣ ಕುಸುಮಗಳಿಂದಲೂ, ಹಾಗೂ ಬಿಲ್ವ ಪತ್ರಗಳಿಂದಲೂ, ಪೂಜೆಮಾಡಿದನು. ೬೬

धूपदीपैः सुनैवेद्यैर्दक्षिणामंत्रपुष्पकैः।
दीपमालादिभिश्चापि संपूज्य शशिशेखरम् ॥ ६७ ॥

ಧೂಪ ದೀಪಗಳಿಂದಲೂ, ಸುನೈವೇದ್ಯಗಳಿಂದಲೂ, ದಕ್ಷಿಣಾ ಮಂತ್ರ ಪುಷ್ಪ ಗಳಿಂದಲೂ, ದೀಪ ಮಾಲಾದಿಗಳಿಂದಲೂ, ಶಶಿಶೇಖರನಾದ ರುದ್ರ ದೇವರನ್ನು ಪೂಜಿಸಿ, ೬೭

ब्राह्मणानां भोजनैश्च कोटिसंख्यामितैर्नृपः।
कुब्जांधबधिरादिभ्यस्त्वनाथेभ्यस्तथैव च ॥ ६८ ॥

ಕೋಟ್ಯಾವಧಿಸಂಖ್ಯಾಕರಾದ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಕುಬ್ಜರು ಅಂಧರು

ಗಳನ್ನು ಕೊಟ್ಟು ಕೃಷ್ಣವೇಣೀ ತಟದಲ್ಲಿ ಸಂತೋಷದಿಂದ ವಾಸ ಮಾಡಿದನು. ೬೯

जयंतीनगरे भक्त्या द्रव्यं तृणवदुत्तमम् ।
द्विजेभ्यः क्षेत्रवासिभ्यो दानानि च पृथक्पृथक् ॥ ७० ॥

ಜಯಂತೀನಗರದಲ್ಲಿ ಧರ್ಮರಾಜನು ಕ್ಷೇತ್ರವಾಸಿಗಳಾದ ಬ್ರಾಹ್ಮಣರಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಯಥೇಷ್ಟವಾಗಿ ದ್ರವ್ಯದಾನ ಮಾಡಿದನು. ೭೦

राजानं तत्र तिष्ठन्तं मन्त्रिणः शरणं ययुः ।
गजाह्वयं परित्यज्य गंगातीरे कथं वसेः ॥ ७१ ॥

ಜಯಂತೀನಗರದಲ್ಲಿಯೇ ವಾಸಮಾಡಿದ ಧರ್ಮರಾಜನಿಗೆ ಎಲ್ಲ ಮಂತ್ರಿಗಳು ಶರಣು ಬಂದು ಹೇಳಿದರು. ಹಸ್ತಿನಾವತೀನಗರವನ್ನು ಬಿಟ್ಟು (ಕೃಷ್ಣವೇಣೀ) ಗಂಗಾತೀರ ದಲ್ಲಿ ಏಕೆ ವಾಸಮಾಡುವಿರಿ. ೭೧

किमर्थं साहसमिदं भवता करुणात्मना ।
कृतं राज्ञः परो धर्मो यत्प्रजानां सुरक्षणम् ॥ ७२ ॥

ಕರುಣಾಶೀಲರಾದ ನೀವು ಇದೆಂಥ ಸಾಹಸಮಾಡುತ್ತಾ ಇರುವಿರಿ. ರಾಜರಿಗೆ ಪ್ರಜಾ ಪಾಲನವೇ ಪರಮಧರ್ಮವು. ೭೨

नलो नीलश्च मांधाता मनुश्चापि शिबिस्तथा ।
अंबरीषः पृथुश्चापि ये चान्ये भूभुजोत्तमाः ॥ ७३ ॥

ನಲರಾಜನೂ, ನೀಲ, ಮಾಂಧಾತ, ಮನು, ಶಿಬಿ, ಹಾಗೂ ಅಂಬರೀಷ, ಪೃಥುರಾಜನೇ ಮೊದಲಾದ ಎಷ್ಟೋ ರಾಜಾಧಿರಾಜರು, ೭೩

प्रजापालनधर्मेण तीर्णाः सर्वे भवांबुधिम् ।
नान्यत्कुर्वन्ति राजानः प्रजानां रक्षणं विना ॥ ७४ ॥

ಈ ಎಲ್ಲ ರಾಜರೂ ಪ್ರಜಾ ಪಾಲನ ಧರ್ಮದಿಂದಲೇ, ಸಂಸಾರ ಸಮುದ್ರವನ್ನು ದಾಟಿರುವರು. ಪ್ರಜರ ರಕ್ಷಣ ವಿನಾ ರಾಜರಿಗೆ ಎರಡನೇ ಧರ್ಮವಿಲ್ಲ. ೭೪

तस्माद्वै गम्यतां राजन् गंगातीराद्गजाह्वयम् ॥ ७६ ॥

ಪ್ರಜರು ಪರಮದಾರುಣರಾದ ಕಳ್ಳರಿಂದ ಪೀಡಿತರಾಗುವರು. ಆದ್ದರಿಂದ ರಾಜನೇ ಬೇಗನೇ ಕೃಷ್ಣಾತೀರದಿಂದ ಹಸ್ತಿನಾವತೀ ಪಟ್ಟಣಕ್ಕೆ ಹೊರಡಿರಿ. ೭೬

अयमेव महान् धर्मो इदमेव परं तपः ।
इदमेव परं ज्ञानं यत्प्रजानां सुरक्षणम् ॥ ७७ ॥

ಇದೇ ಪರಮಶ್ರೇಷ್ಠವಾದ ಧರ್ಮವು. ಇದೇ ಪರಮತಪಃಸು. ಪ್ರಜಾಪಾಲನ ಮಾಡುವದೇ ಪರಮಶ್ರೇಷ್ಠವಾದ ಜ್ಞಾನವು. ೭೭

इति तेषां वचः श्रुत्वा धर्मराजो महामतिः ।
अवश्यमिति चोक्त्वा तान्कृष्णवाक्यानुमोदितः ॥ ७८ ॥

ಬುದ್ಧಿವಂತನಾದ ಧರ್ಮರಾಜನು ಅವರ ಮಾತುಗಳನ್ನು ಕೇಳಿ, ಅವರ ಮಾತಿಗೆ ಅನುಮೋದನಕೊಟ್ಟು, ಅವಶ್ಯವಾಗಲಿ. ಎಂದು ಹೇಳಿದನು. ೭೮

तथापि कृष्णां पापघ्नीं त्यक्तुं नोत्सहते मनः ।
ब्राह्मणानां तदा श्रुत्वा वाक्यानि स महीपतिः ॥७९ ॥

ಆದರೂ ಪಾಪ ಪರಿಹಾರಕಳಾದ ಕೃಷ್ಣವೇಣೀಯನ್ನು ಬಿಡಲಿಕ್ಕೆ ಮನಃಸು ಸಿದ್ಧವಾಗಲಿಲ್ಲ. ಆಗ ಬ್ರಾಹ್ಮಣರನ್ನು ಕೇಳಿದನು. ೭೯

प्रत्युवाच तदा वाक्यं खिन्नः परमधर्मवित् ।
अभाग्यानां कथं तत्तु पीयूषं जीर्यते पुनः ॥ ८० ॥

ಪರಮ ಧರ್ಮದ ರಹಸ್ಯವನ್ನು ಬಲ್ಲವನಾದ ಧರ್ಮಜನು ಆಗ ಖಿನ್ನ ಮನಃಸಿನಿಂದ ಈ ಮಾತನ್ನು ಹೇಳಿದನು. ಅಭಾಗ್ಯರಿಗೆ ಈ ಅಮೃತವು ಹೇಗೆ ಸಿಗುವದು. ೮೦

प्राप्तायां कृष्णवेणायां प्राप्तं विघ्नं महत्तरम् ।
तस्माद्विघ्ना भवन्त्यस्मान् तीरे पुण्यात्मनां न हि ॥ ८१ ॥

ಹೇ ಮುನೀಶ್ವರರೇ ! ನಾನೇನು ಮಾಡಲಿ ಹೇಳಿರಿ.

**ಋಷಿಗಳು ಹೇಳಿದರು**

ಪ್ರಜಾಪಾಲನೆಯೇ ರಾಜರಿಗೆ ಮಹತ್ತರವಾದ ಪರಮಧರ್ಮವು. ೮೨

**ब्राह्मणानां राजभिश्च गंगातीरनिवासिनाम्।**
**श्रोत्रियाणां निस्पृहाणां रक्षणं चान्नदानतः ॥ ८३ ॥**

ರಾಜರು ಗಂಗಾತೀರದಲ್ಲಿ (ಹರಿತೀರದಲ್ಲಿ) ವಾಸಮಾಡತಕ್ಕ ಶ್ರೋತ್ರಿಯರಾದ ನಿಸ್ಪೃಹರಾದ ಬ್ರಾಹ್ಮಣರಿಗೆ ಅನ್ನದಾನ ಮಾಡತಕ್ಕದ್ದು. ೮೩

**तथा स्वप्राणदानं च परोपकृतये सदा।**
**दधीचिश्चोंछवृत्तिश्च शिबिश्चापि बलिस्तथा ॥ ८४ ॥**

ಪರೋಪಕಾರದ ಸಲುವಾಗಿ ಯಾವಾಗಲೂ ತನ್ನ ಪ್ರಾಣದಾನ ಮಾಡಲೂ ಸಿದ್ಧನಿರಬೇಕು. ದಧೀಚಿ ಋಷಿಗಳು, (ಉಂಛವೃತ್ತಿಯಲ್ಲಿರತಕ್ಕ) ಶಿಬಿರಾಜನು, ಬಲಿ ರಾಜನಂತೆ. ೮೪

**तस्मात् त्वया कार्यमेतत्सावधानेन चेतसा।**
**प्रजानामुपकारार्थं गच्छ त्वं हस्तिनापुरम् ॥ ८५ ॥**

ಆದಕಾರಣ ನೀನು ಸಾವಧಾನ ಮನಃಸಿನಿಂದ ಆ ಕಾರ್ಯ ಮಾಡತಕ್ಕದ್ದು. ಪ್ರಜರಿಗೆ ಉಪಕಾರ ಮಾಡುವದರ ಗೋಸ್ಕರ ಹಸ್ತಿನಾವತೀ ನಗರಕ್ಕೆ ನೀನು ಹೋಗತಕ್ಕದ್ದು. ೮೫

**रक्षणाद्ब्राह्मणानां ते सर्वं पुण्यं भवेच्चिरम्।**
**परोपकृतये नित्यं यो यत्र निवसेन्नरः ॥ ८६ ॥**

ಪರೋಪಕಾರದ ಸಲುವಾಗಿ ಯಾವನು ಎಲ್ಲಿ ಇರುವನೋ ಅಲ್ಲಿ ಹಾಗೂ ಬ್ರಾಹ್ಮಣರ ರಕ್ಷಣೆ ಯಾರು ಮಾಡುವರೋ ಅವರ ಪುಣ್ಯವು ಮಹತ್ತರವಾದದ್ದು. ೮೬

**तत्र तस्य भवेद्गंगा यमुना च सरस्वती।**

ಎಲ್ಲ ತೀರ್ಥಗಳೂ ಇರುವವು. ಹಾಗೂ ನಿತ್ಯದಲ್ಲಿ ಆ ಆ ತೀರ್ಥದ ತ್ಮ್ಯವನ್ನು ಶ್ರದ್ಧಾ ಪೂರ್ವಕ ಶ್ರವಣ ಮಾಡಿದರೆ ಎಲ್ಲ ಫಲವು ಅಲ್ಲಿಯೇ ವದು. ೮೮

**सेव्यते तीर्थवासी स्यान्न तु भेको जले स्थितः ।**
**श्रुत्वैवं द्विजवाक्यानि सयुधिष्ठिरभूपतिः ॥ ८९ ॥**

ಯಾವ ಮನುಷ್ಯನು ತೀರ್ಥವಾಸಿಯಾಗಿ ತೀರ್ಥಸೇವನ ಮಾಡುವದಿಲ್ಲವೋ ಮಾಹಾತ್ಮ್ಯ ಶ್ರವಣ ಮಾಡುವದಿಲ್ಲವೋ, ಅವನು ಮನುಷ್ಯರೂಪದ ಕಪ್ಪೆ. ಹೀಗೆ ಹೇಳುವ ಬ್ರಾಹ್ಮಣರ ಮಾತನ್ನು ಕೇಳಿ, ಭೂಪತಿಯಾದ ರಾಜನು. ೮೯

**कृष्णमालोक्य तरसा गंतुं दध्रे मनो द्विजैः ।**
**तदा कृष्णोऽपि चागत्य कृष्णवेण्यास्तटे शुभे ॥ ९० ॥**

ಹಸ್ತಿನಾವತಿಗೆ ಹೊರಡಲು ಸಿದ್ಧನಾಗಿ ಮನಃಸು ಮಾಡಿದನು. ಕೃಷ್ಣನನ್ನು ನೋಡಿದನು. ಆಗಲೇ ಶ್ರೀಕೃಷ್ಣ ಪರಮಾತ್ಮನು ಆ ಶುಭಕರವಾದ ಕೃಷ್ಣವೇಣೀತಟಾಕಕ್ಕೆ ಬಂದನು. ೯೦

**स्नानं चक्रे यत्र यत्र धर्मादिभिरतंद्रितः ।**
**तत्तत्प्रवरतीर्थं तु तत्तन्नाम्ना बभूव ह ॥ ९१ ॥**

ಧರ್ಮರಾಜಾದಿ ಪಾಂಡವರಿಂದ ಕೂಡಿಕೊಂಡು ಉತ್ಸಾಹದಿಂದ ಎಲ್ಲರೂ ಎಲ್ಲೆ ಎಲ್ಲೆ ಸ್ನಾನ ಮಾಡಿದರೋ ಅಲ್ಲಿ ಅವರವರ ಹೆಸರಿನಿಂದ ತೀರ್ಥಗಳು ಪ್ರಸಿದ್ಧವಾದವು. ೯೧

**तत्र विख्यातमभवत्तीर्थं शंखाख्यमद्भुतम् ।**
**ततश्चतुष्कं तीर्थानां जातं परमपावनम् ॥ ९२ ॥**

ಅಲ್ಲಿ ಆ ತೀರ್ಥವು ಮಹದದ್ಭುತವಾಗಿ ಶಂಖತೀರ್ಥವೆಂದು ಪ್ರಸಿದ್ಧವಾಯಿತು. ಆ ಸ್ಥಳದಲ್ಲಿ ನಾಲ್ಕೂ ತೀರ್ಥಗಳು ಪರಮ ಪವಿತ್ರವಾದವುಗಳು. ೯೨

**अतस्तेषु पुमान् स्नात्वा वांछितार्थान् समश्नुते ।**

[illegible]

कृष्णवेणीं नमस्कृत्य प्रांजलिः खिन्नधीः स्वयम् ।
पुनः प्रनः प्रणम्याह मा विस्मर हरिप्रिये ॥ ९४ ॥

ಅಂಜಲಿಬದ್ಧನಾಗಿ ಖಿನ್ನವಾದ ಮನಃಸಿನಿಂದ ಕೃಷ್ಣವೇಣಿಯನ್ನು ಸ್ವತಃ ನಮಸ್ಕರಿಸಿ ಪುನಃ ಪುನಃ ನಮಸ್ಕಾರ ಮಾಡುತ್ತ ಹೇ ಹರಿಪ್ರಿಯೇ! ನನ್ನನ್ನು ಮರೆಯಬೇಡ ಅಂತ ಪ್ರಾರ್ಥನೆ ಮಾಡಿಕೊಂಡನು. ೯೪

मामित्येवं प्रार्थयित्वा जगाम गजसाह्वयम् ।
पुण्याध्यायमिमं पुण्यं कृष्णनद्याः सविस्तरम् ॥ ९५ ॥

ನನ್ನನ್ನು ಮರೆಯಬೇಡ ಎಂದು ಪುನಃ ಪುನಃ ಪ್ರಾರ್ಥನೆ ಮಾಡಿ ಹಸ್ತಿನಾವತಿ ನಗರಕ್ಕೆ ಹೊದನು. ಈ ಪುಣ್ಯಕರವಾದ ಅಧ್ಯಾಯವನ್ನು ಈ ಕೃಷ್ಣವೇಣಿಯ ಚರಿತ್ರವನ್ನು ಯಾರು ಸವಿಸ್ತಾರವಾಗಿ. ೯೫

श्रृणोति श्रावयेद्विद्वान् सर्वान् कामानवाप्नुयात् ॥ ९६ ॥

ಶ್ರವಣ ಮಾಡುವರೋ ಶ್ರವಣ ಮಾಡಿಸುವರೋ ಆ ಜ್ಞಾನಿಗಳು ಸಕಲ ಇಷ್ಟಾರ್ಥಗಳನ್ನೂ ಪಡೆಯುವರು. ೯೬

॥ इति श्रीस्कांदे कृष्णामाहात्म्ये एकपंचाशत्तमोऽध्यायः ॥

❀ ❀ ❀

## ॥ अथ द्विपंचाशत्तमोऽध्यायः ॥

स्कंद उवाच –

याज्ञवल्क्यादयोगत्वात् तीर्थान्यालोक्य यत्नतः ।
धौम्यादि शंखतीर्थांतं सर्वं दृष्ट्वा दक्षिणे ॥ १ ॥

ಆ ಸ್ಥಳವಲ್ಲಿ ಬಂದ ಕೂಡಲೇ ಮರಣ ಹೊಂದಿದವು. ೨

नृसिहस्य प्रसादेन कृतं तत्कार्यमंजसा ।
भंजनादाश्रमस्याथ प्रसादात्पुनरुत्थिताः ॥ ३ ॥

ಶ್ರೀಲಕ್ಷ್ಮೀನರಸಿಂಹದೇವರ ಪ್ರಸಾದದಿಂದ ಸರಿಯಾದ ಕಾರ್ಯವನ್ನು ಮಾಡಿದರು. ಆಶ್ರಮಗಳನ್ನು ಕೆಡವಿದ ಕೂಡಲೇ ಆ ಪ್ರಸಾದದಿಂದ ಆನೆಗಳು ಮತ್ತೆ ಎದ್ದು ನಿಂತವು. ೩

कृष्णानुमोदितमुनौ शरण्ये च युधिष्ठिरे ।
कमंडलुजलाक्षेपाद्गजा जीवमवाप्नुयुः ॥ ४ ॥

ಧರ್ಮರಾಜನು ಶರಣ ಬಂದ ಕೂಡಲೇ ಶ್ರೀಕೃಷ್ಣಪರಮಾತ್ಮನ ಅಪ್ಪಣೆಯ ಮೇರೆಗೆ ಋಷಿಗಳು ಕಮಂಡಲು ಒಳಗಿನ ನೀರುಗಳನ್ನು ಪ್ರೋಕ್ಷಣಮಾಡಿದ ಕೂಡಲೇ ಆನೆಗಳು ಮತ್ತೆ ಬದುಕಿದವು. ೪

इतःपरं यदि गजाः मदीयाश्रममागताः ।
निश्चयेन मृतिं यांति नैध्रुवस्य वचो यथा ॥ ५ ॥

ಇನ್ನು ಮುಂದೆ ಒಂದು ವೇಳೆ ಆನೆಗಳು ನನ್ನ ಆಶ್ರಮಕ್ಕೆ ಬಂದರೆ ನಿಶ್ಚಯವಾಗಿಯೂ ಮರಣವನ್ನು ಪಡೆಯುವವು. ೫

तमाश्रमं सदाश्चर्यकारकं ह्यवलोक्य च ।
पुरतो गंतुकामास्ते तीर्थान्यापुर्मनस्विनः ॥ ६ ॥

ಆಶ್ಚರ್ಯಕರವಾದ ಆ ಆಶ್ರಮವನ್ನು ನೋಡಿ ಆ ಎಲ್ಲರೂ ಮುಂದೆ ತೀರ್ಥಯಾತ್ರೆ ಗೋಸ್ಕರ ಹೊರಟರು. ೬

त्रयोदशाथ तीर्थानि कृष्णवेण्यास्तटे द्विजाः ।
त्रियोजनांतरस्थानि दुर्लभानि महात्मनाम् ॥ ७ ॥

ಹೇ ಬ್ರಾಹ್ಮಣರೇ! ಕೃಷ್ಣವೇಣೀ ತಟಾಕದಲ್ಲಿ ಮೂರು ಯೋಜನಗಳ

ಈ ಪದಿಮೂರು ತೀರ್ಥಗಳ ಮಧ್ಯದಲ್ಲಿ ಸಂಗಮತೀರ್ಥವು ವಿರಾಜಿಸುತ್ತಿರುವದು

**ಋಷಿಗಳು ಅಂದರು –**

ಬುದ್ಧಿವಂತರಾದ ಸ್ಕಂದರೇ ! ಆ ಪದಿಮೂರು ತೀರ್ಥಗಳು ಯಾವವು ? ಹೇಳಿರಿ. ೮

**कृपया ब्रूहि नो देव पापघ्नानि युगे युगे ।**

**स्कन्द उवाच –**

**ब्रह्मतीर्थं तु विज्ञेयं यत्र घोषः सुदुर्लभः ॥ ९ ॥**

ಯುಗ-ಯುಗಗಳಲ್ಲಿ ಪಾಪಪರಿಹಾರಕವಾದ ಆ ತೀರ್ಥಗಳನ್ನು, ನಮ್ಮ ಮೇಲೆ ಕೃಪೆ ಮಾಡಿ ಹೇಳಿರಿ.

**ಸ್ಕಂದ ಉವಾಚ –**

ಪರಮದುರ್ಲಭವಾದ ಧ್ವನಿಯು (ಘೋಷ) ಎಲ್ಲಿ ಬರುವದೋ ಅದು ಬ್ರಹ್ಮತೀರ್ಥವೆಂದು ತಿಳಿದುಕೊಳ್ಳಿರಿ. ೯

**याज्ञवल्क्यादयः सर्वे ऋषयः संशितव्रताः ।**
**ब्रह्मयज्ञं तदा कृत्वा भक्त्या तत्प्रीतमानसाः ॥ १० ॥**

ವ್ರತಸ್ಥರಾದ ಎಲ್ಲ ಯಾಜ್ಞವಲ್ಕ್ಯರೆ ಮೊದಲಾದ, ಋಷಿಗಳು ಭಕ್ತಿಪುರಃಸರವಾಗಿ ಬ್ರಹ್ಮಯಜ್ಞವನ್ನು ಮಾಡಿ ಪ್ರೀತಿಯಿಂದ ತುಂಬಿದ ಮನಃಸು ಉಳ್ಳವರಾದರು. ೧೦

**ब्रह्मत्वं प्राप्नुयुर्यत्र सनातनमनामयम् ।**
**ब्रह्मीभूता यतस्तत्र ब्रह्मतीर्थं विदुर्बुधाः ॥ ११ ॥**

ಆ ಎಲ್ಲ ಯಾಜ್ಞವಲ್ಕ್ಯ ಋಷಿಗಳು ಸನಾತನವಾದ ನಿರ್ದೋಷವಾದ ಬ್ರಹ್ಮತ್ವವನ್ನು ಪಡೆದರು. ಎಲ್ಲಿ ಬ್ರಹ್ಮತ್ವವನ್ನು ಪಡೆದು ಬ್ರಹ್ಮಭೂತರಾದರೋ ಆ ತೀರ್ಥವೇ ಬ್ರಹ್ಮ ತೀರ್ಥವು. ೧೧

ವಂತಹದು. ೧೩

अब्धिकन्या तपश्चक्रे विष्णुं भर्तारमिच्छती ।
नारायणाद्वरं लेभे श्रीतीर्थं भुवि विश्रुतम् ॥ १४ ॥

ಸಮುದ್ರರಾಜನ ಮಗಳು ವಿಷ್ಣುನೇ ಪತಿಯಾಗಬೇಕೆಂಬ ಇಚ್ಛೆಯಿಂದ ತಪಃಸು ಮಾಡಿ ನಾರಾಯಣನಿಂದ ವರವನ್ನು ಪಡೆದ ಸ್ಥಳ ಶ್ರೀತೀರ್ಥ. ಶ್ರೀತೀರ್ಥವೆಂದೇ ಭೂಮಂಡಲದಲ್ಲಿ ಪ್ರಸಿದ್ಧವಿದೆ. ೧೪

ततो विप्रवरं नाम गौरीतीर्थं महत्तरम् ।
तपश्चक्रे यत्र गौरी शंकरार्थं अहर्निशम् ॥ १५ ॥

ಅದರ ಮುಂದೆ ಮಹತ್ತರವಾದ ಶ್ರೇಷ್ಠವಾದ ಗೌರೀತೀರ್ಥವು ಇರುವದು. ಹಗಲು-ರಾತ್ರಿ ಏಕಪ್ರಕಾರವಾಗಿ ಪಾರ್ವತಿ ದೇವಿಯು ಶಂಕರನೇ ಪತಿಯಾಗಲಿ ಎಂದು ತಪಃಸು ಮಾಡಿದಳು. ೧೫

प्रसन्नस्त्र्यंबको यत्र दत्तवान्वरमुत्तमम् ।
मुदं लेभे यतो गौरी गौरीतीर्थं प्रचक्षते ॥ १६ ॥

ಗೌರೀತೀರ್ಥದಲ್ಲಿ ಮಾಡಿದ ತಪಃಸಿಗೆ ರುದ್ರದೇವರು ಪ್ರಸನ್ನರಾಗಿ ಉತ್ತಮವಾದ ವರವನ್ನು ಕೊಟ್ಟರು. ಪಾರ್ವತೀದೇವಿಗೆ ಪರಮ ಸಂತೋಷವಾಯಿತು. ಆದ್ದರಿಂದ ಅದಕ್ಕೆ ಗೌರೀತೀರ್ಥವೆಂದು ಹೆಸರು. ೧೬

गौरीतीर्थे नरः स्नात्वा सौभाग्यं पुत्रसंपदः ।
प्राप्नुवंति स्त्रियोऽप्यत्र गतिं वै योगिदुर्लभाम् ॥ १७ ॥

ಆ ಗೌರೀತೀರ್ಥದಲ್ಲಿ ಯಾರು ಸ್ನಾನಮಾಡುವರೋ ಹಾಗೂ ಸ್ತ್ರೀಯರೂ ಕೂಡ ಪುತ್ರ ಪೌತ್ರಾದಿ ಸೌಭಾಗ್ಯ ಸಂಪತ್ತು ಪಡೆದು ಕೊನೆಗೆ ಯೋಗಿಗಳಿಗೂ ದುರ್ಲಭವಾದ ಗತಿಯನ್ನು ಪಡೆಯುವರು. ೧೭

ರಾಗಿ ಎಲ್ಲ ತೀರ್ಥಗಳಲ್ಲಿ ಹೋದರೂ ಶಾಪದಿಂದ ಮುಕ್ತರಾಗಲಿಲ್ಲ. ೧೮

संगमेस्नानमात्रेण मनोनिर्मलतां ययौ ।
अग्रणीति समाचख्यौ स्नानात् पापं विनश्यति ॥ १९ ॥

ಈ ಸಂಗಮದಲ್ಲಿ ಸ್ನಾನಮಾಡಿದ ಮಾತ್ರದಿಂದ ಮನಃಸು ನಿರ್ಮಲವಾಯಿತು ಇಂದ್ರದೇವರಿಗೆ. ಆದ್ದರಿಂದ ಅಗ್ರಣೀ ಅಂತ ಪ್ರಸಿದ್ಧವಾಯಿತು. ಅಲ್ಲಿ ಸ್ನಾನಮಾತ್ರದಿಂದ ಪಾಪವು ನಾಶವಾಗುವದು. ೧೯

इंद्रस्तु प्राप तपसा देवानां पदमुत्तमम् ।
इंद्रतीर्थमिति ख्यातं स्नानादैश्वर्यदायकम् ॥ २० ॥

ಇಂದ್ರದೇವರು ಅಲ್ಲಿಯೇ ತಪಃಸುಮಾಡಿ, ದೇವತೆಗಳಿಗೆ ಉತ್ತಮವಾದ ಸ್ಥಾನವನ್ನು ಪಡೆದರು. ಆದಕಾರಣ ಇಂದ್ರತೀರ್ಥವೆಂದು ಪ್ರಸಿದ್ಧವಾಗಿದೆ. ಅಲ್ಲಿ ಸ್ನಾನಮಾಡಿದರೆ ಐಶ್ವರ್ಯ ಲಭಿಸುವದು. ೨೦

विष्णुतीर्थं ततो ज्ञेयं पीयूषार्थे पुरा हरिः ।
सामर्थ्यं लब्धवान्यत्र तपसा बहुवासरम् ॥ २१ ॥

ಅದರ ಮುಂದೆ ವಿಷ್ಣುತೀರ್ಥವಿರುವದು. ಪೂರ್ವದಲ್ಲಿ ಶ್ರೀನಾರಾಯಣನು ಅಮೃತದ ಸಲುವಾಗಿ ಬಹಳ ವರ್ಷಗಳ ಪರ್ಯಂತರ ಅಲ್ಲಿ ತಪಃಸು ಮಾಡಿದ ಕಾರಣ, ಆ ತಪಃಸಿನಿಂದ ಫಲ ಪಡೆದ ಕಾರಣ, ಅದಕ್ಕೆ ವಿಷ್ಣುತೀರ್ಥವೆಂದು ಹೆಸರು ಪ್ರಸಿದ್ಧವಾಗಿದೆ. ೨೧

वरं लब्ध्वा कृष्णवेण्याः सुरासुरविपर्यये ।
गंधर्वाश्च तपश्चक्रुः हरिदर्शनतत्पराः ॥ २२ ॥

ಕೃಷ್ಣವೇಣಿಯಿಂದ ವರವನ್ನು ಪಡೆದು, ದೇವ ದೈತ್ಯರ ಅಮೃತ ಮಥನಕಾಲದಲ್ಲಿ ದೈತ್ಯರಿಂದ ಹರಣ ಮಾಡಲ್ಪಡುವಾಗ ಮೋಹಿನೀರೂಪದಿಂದ ದೈತ್ಯರನ್ನು ಮೋಹಬಡಿಸಿ ಅಮೃತ ಪಡೆದನು. ಗಂಧರ್ವರೂ ಕೂಡ ಭಗವಂತನ ದರ್ಶನಕ್ಕೋಸ್ಕರ ತಪಃಸು ಮಾಡಿದರು. ೨೨

उर्वशी यत्र तपसा विश्वामित्रछलेच्छया ॥ २४ ॥

ಆ ವಿಷ್ಣುತೀರ್ಥದ ಮುಂದೆ ಪರಮಶ್ರೇಷ್ಠವಾದದ್ದು, ಸರ್ವಕಾಲವಲ್ಲಿಯೂ ಇಷ್ಟಾರ್ಥವನ್ನು ಪೂರ್ಣಮಾಡುವಂತಹದು ಯಾವದೆಂದರೆ ಉರ್ವಶಿಯು, ವಿಶ್ವಾಮಿತ್ರನು ಹಟದಿಂದ ಎಲ್ಲಿ ತಪಃಸು ಮಾಡುವನೋ ಅಲ್ಲಿ ಬಂದಳು, ತಪೋಭಂಗಮಾಡಲು. ೨೪

बहुकालांतरे कृष्णा प्रसन्ना चाघहारिणी ।
वांछितं मे समाचक्ष्व यत्ते मनसि वर्तते ॥ २५ ॥

ಬಹುಕಾಲಾನಂತರದಲ್ಲಿ ಪಾಪ ಪರಿಹಾರಕಳಾದ ಕೃಷ್ಣವೇಣಿಯು ಪ್ರಸನ್ನಳಾಗಿ ನಿನ್ನ ಮನಃಸಿನಲ್ಲಿ ಏನಿದೆ ? ನಿನ್ನ ಇಚ್ಛೆ ಏನಿರುವದು ಹೇಳು. ೨೫

उर्वश्याह ततः कृष्णामिंद्रेण प्रेषिता ह्यहम् ।
कौशिकं तपतां श्रेष्ठं मोहयित्वा शुचिस्मिते ॥ २६ ॥

ಆಗ ಉರ್ವಶಿಯು ಕೃಷ್ಣವೇಣೀದೇವಿಗೆ ಹೇಳಿದಳು. ಹೇ ಶುಚಿಸ್ಮಿತೇ ! ತಪಸ್ವಿಗಳಲ್ಲಿ ಶ್ರೇಷ್ಠನಾದ ಕೌಶಿಕನನ್ನು ಮೋಹಬಡಿಸಲು ಇಂದ್ರದೇವರು ನನ್ನನ್ನು ಕಳಿಸಿರುವರು. ೨೬

आगच्छेति पुनः स्वर्गं तत्सामर्थ्यं प्रदेहि मे ।
ॐमित्युक्त्वा कृष्णवेणी तत्रैवांतर्हिता क्षणात् ॥ २७ ॥

ಮೋಹಬಡಿಸಿ ಪುನಃ ಸ್ವರ್ಗಕ್ಕೆ ಬಾ ಎಂದು ಇಂದ್ರ ದೇವರ ಅಪ್ಪಣೆಯಾಗಿದೆ. ಆದಕಾರಣ ಮೋಹಬಡಿಸುವ ಸಾಮರ್ಥ್ಯವನ್ನು ನನಗೆ ಕೊಡು. ಎಂದು ಉರ್ವಶಿಯು ಕೇಳಿದಳು. ಕೃಷ್ಣವೇಣಿಯು ತಥಾಸ್ತು ಅಂತ ಹೇಳಿ ಅಲ್ಲಿಯೇ ಕ್ಷಣದಲ್ಲಿಯೇ ಅಂತರ್ಧಾನಳಾದಳು. ೨೭

ततो जगाम चार्वंगी विश्वामित्राश्रमं पुनः ।
तं लोभयित्वा सा बाला तपोनिधिमनन्यधीः ॥ २८ ॥

ಅಲ್ಲಿಂದ ಉರ್ವಶಿಯು ಪುನಃ ವಿಶ್ವಾಮಿತ್ರ ಋಷಿಗಳ ಆಶ್ರಮಕ್ಕೆ ಹೋದಳು.

ದರ್ಶನ ಪಡೆವವರು ಭೂಮಿಯಲ್ಲಿ ವಿರಕ್ತರಾಗುವರು. ಆದರ ಮುಂದೆ ೫೦ ಬಾಣದ ತರುವಾಯ ಶ್ರೇಷ್ಠವಾದ ತೀರ್ಥವಿದೆ. ೨೯

सूर्यतीर्थमिति ख्यातं सर्वतीर्थोत्तमोत्तमम् ।
सूर्यमेको ऋषिर्यत्र तपः परमदारुणम् ॥ ३० ॥

ಸಕಲತೀರ್ಥಗಳಲ್ಲಿ ಉತ್ತಮೋತ್ತಮವಾದ, ಪ್ರಸಿದ್ಧವಾದ, ಸೂರ್ಯತೀರ್ಥ ವಿರುವದು. ಸೂರ್ಯನೆಂಬ ಋಷಿಯು ಪರಮದಾರುಣವಾದ ತಪಃಸು ಮಾಡಿದ ಸ್ಥಳವು ಸೂರ್ಯತೀರ್ಥವು. ೩೦

तप्त्वा नारायणं ध्यायन्कृष्णातीरमुपाश्रितः ।
पूर्णे वर्षशते जाते आविरासीन्महामतिः ॥ ३१ ॥

ಪರಮಬುದ್ಧಿವಂತನಾದ ಆ ಸೂರ್ಯನೆಂಬ ಋಷಿಯು ಆ ಕೃಷ್ಣಾತೀರದಲ್ಲಿ ಶ್ರೀನಾರಾಯಣನನ್ನು ಧ್ಯಾನಮಾಡುತ್ತಾ (೧) ಒಂದು ನೂರು ವರ್ಷ ಪೂರ್ಣವಾದ ಮೇಲೆ ಕೃಷ್ಣವೇಣಿಯು ಪ್ರಕಟಳಾದಳು. ೩೧

कृष्णा ऋषिमुवाचेत्थं वांछितार्थं वृणीष्व भो ।
ब्राह्मणो ज्ञानसंपन्नो वव्रे वरमनुत्तमम् ॥ ३२ ॥

ಪ್ರಕಟಳಾದ ಕೃಷ್ಣವೇಣಿಯು ಆ ಸೂರ್ಯಋಷಿಗಳಿಗೆ ಇಷ್ಟಾರ್ಥವನ್ನು ಬೇಡಿಕೊಳ್ಳಿರಿ ಎಂದು ಹೇಳಿದಳು. ಜ್ಞಾನಸಂಪನ್ನನಾದ ಆ ಋಷಿವರ್ಯರು ಉತ್ತಮ ವಾದ ವರವನ್ನು ಬೇಡಿಕೊಂಡರು. ೩೨

ममाश्रमपदे नित्यं जगन्मातर्हि ये नराः ।
स्नानं कुर्वंति भूयिष्ठास्तपोविद्याविशारदाः ॥ ३३ ॥

ಜಗನ್ಮಾತೆಯೇ! ಯಾರು ನನ್ನ ಆಶ್ರಮಸ್ಥಳವಾದ ಕೃಷ್ಣವೇಣಿಯಲ್ಲಿ ನಿತ್ಯದಲ್ಲಿಯೂ ಸ್ನಾನಮಾಡುವರೋ ಅವರು ಯಥೇಷ್ಟವಾಗಿ ತಪೋವಿದ್ಯಾ ವಿಶಾರದರಾಗಲಿ. ೩೩

तत्पुण्यं को वर्णयितुं शक्तः स्यान्मानवो भुवि ॥ ३५ ॥

ಯಾವ ಸೂರ್ಯಭಕ್ತನು ಆ ಸೂರ್ಯತೀರ್ಥದಲ್ಲಿ ತಪಸ್ಸು ಮಾಡುತ್ತ ಯಾವಾಗಲೂ ವಾಸಮಾಡುವನೋ, ಅವನ ಪುಣ್ಯವನ್ನು ವರ್ಣಿಸಲು ಭೂಮಿಯಲ್ಲಿ ಯಾವ ಮನುಷ್ಯನಿಗೆ ಸಾಧ್ಯವಾದೀತು. ೩೫

महाश्रेष्ठो याज्ञवल्क्यश्चेतिहासान्ब्रवीच्च तान् ।
तीर्थानां प्रवरं ज्ञेयं सप्तसागरसंज्ञकम् ॥ ३६ ॥

ಮಹಾಶ್ರೇಷ್ಠರಾದ ಯಾಜ್ಞವಲ್ಕ್ಯ ಋಷಿಗಳು ಆ ಬ್ರಾಹ್ಮಣರಿಗೆ ಇತಿಹಾಸಗಳನ್ನು ಹೇಳುತ್ತಿರುವರು. ಈ ಎಲ್ಲ ತೀರ್ಥಗಳಲ್ಲಿ ಪರಮ ಶ್ರೇಷ್ಠವಾದ ತೀರ್ಥವು ಸಪ್ತಸಾಗರ ಎಂಬ ಸಂಜ್ಞೆಯುಳ್ಳದ್ದು. ೩೬

माहात्म्यं तत्रवक्ष्यामि श्रृणुध्वं मुनिसत्तमाः ।
अत्रार्थे कथयिष्यामि प्राचीनमितिहासकम् ॥ ३७ ॥

ಹೇ ಋಷಿಶ್ರೇಷ್ಠರೆ ! ಕೇಳಿರಿ, ಆ ಸಪ್ತಸಾಗರದ ಮಹಿಮೆಯನ್ನು ಹೇಳುವೆನು. ಈ ವಿಷಯದಲ್ಲಿ ಪ್ರಾಚೀನವಾದ ಇತಿಹಾಸ ಹೇಳುವೆನು. ೩೭

पुराऽभूत्सुमतिर्नाम शालग्रामो महायशाः ।
राजा धर्मज्ञकुशलो दैवात्तीरमुपागतः ॥ ३८ ॥

ಶಾಲಗ್ರಾಮದಲ್ಲಿ ಮಹಾಕೀರ್ತಿವಂತನಾದ ಸುಮತಿ ಎಂಬ ಧರ್ಮಜ್ಞನಾದ ರಾಜನು ಇದ್ದನು. ಬಹಳ ಕುಶಲನು. ದೈವಯೋಗದಿಂದ ಕೃಷ್ಣಾತೀರಕ್ಕೆ ಬಂದನು. ೩೮

याज्ञवल्क्यादयोऽप्यत्र समाजग्मुर्यदृच्छया ।
तान्नमस्कृत्य सहसा विनयात्प्रत्युवाच ह ॥ ३९ ॥

ಯಾಜ್ಞವಲ್ಕ್ಯರೇ ಮೊದಲಾದ ಋಷಿಗಳು ಕೂಡ ಯದೃಚ್ಛಾದಿಂದ ಆ ಕೃಷ್ಣವೇಣೀತೀರಕ್ಕೆ ಬಂದರು. ರಾಜನು ಅವರಿಗೆ ನಮಸ್ಕಾರ ವಿನಯಪೂರ್ವಕವಾಗಿ ಪ್ರಾರ್ಥನೆ ಮಾಡಿಕೊಂಡನು. ೩೯

ಕರುಣಾರಸಪೂರ್ಣರಾದ ಮಹಾಭಾಗ್ಯವಂತರಾದ ಋಷಿಗಳೇ! ಹೇಳಿರಿ, ಎಂದು ರಾಜನ ಮಾತನ್ನು ಕೇಳಿ ಪರಮ ಸಂತುಷ್ಟರಾಗಿ ಸುಮತಿ ರಾಜನಿಗೆ ಹೇಳಿದರು. ೪೧

**ऊचुर्यज्ञश्च कर्तव्यो राज्ञा परमधर्मिणा ।**
**यज्ञेन प्रथते सर्वं धनव्ययविशंकया ॥ ४२ ॥**

ಪರಮಧರ್ಮಿಷ್ಠರಾದ ರಾಜರು ಯಜ್ಞಗಳನ್ನು ಮಾಡತಕ್ಕದ್ದು. ಯಜ್ಞದಿಂದಲೇ ಸಕಲವೂ ಸಿದ್ಧಿಸುವದು. ಧನದ ಕಾಳಜೀಮಾಡಬಾರದು. ೪೨

**ब्राह्मणैः सह संचिन्त्य कृष्णातीरे तु भूपतिः ।**
**यज्ञं चकार विततं सांगं संभारसंवृतः ॥ ४३ ॥**

ಅರಸನಾದ ಸುಮತಿಯು, ಬ್ರಾಹ್ಮಣರಿಂದ ಕೂಡಿಕೊಂಡು ವಿಚಾರಮಾಡಿ ಕೃಷ್ಣಾತೀರದಲ್ಲಿ ಸಕಲ ಸಂಭಾರಗಳ ಸಂಭ್ರಮದಿಂದ ಕೂಡಿಕೊಂಡು, ವಿಸ್ತಾರವಾಗಿ ಯಜ್ಞಮಾಡಿದನು. ೪೩

**यज्ञांते त्ववभृथस्नाने समुद्रेभ्यः समाहृतम् ।**
**जलं तत्तपसा तैस्तु मिलित्वा दीक्षितं द्विजाः ॥ ४४ ॥**

ಆ ಎಲ್ಲ ಬ್ರಾಹ್ಮಣರು ಕೂಡಿಕೊಂಡು ತಮ್ಮ ತಪಃಸಿನಿಂದ ಸಪ್ತ ಸಮುದ್ರಗಳಿಂದ ನೀರು ತರಿಸಿ ಯಜ್ಞದ ನಂತರ ಆ ಕೃಷ್ಣವೇಣಿಯಲ್ಲಿ ಆ ಸಮುದ್ರನೀರು ಬೆರಿಸಿ ಅವಭೃತಸ್ನಾನ ಮಾಡಿದರು. ೪೪

**सप्तसागरमित्येवं यज्ञे प्रथितमंजसा ।**
**अद्यापि तीर्थशोभा सा यज्ञभूम्यां विराजते ॥ ४५ ॥**

ಆದ್ದರಿಂದ ಆ ತೀರ್ಥಕ್ಕೆ ಸಪ್ತಸಾಗರತೀರ್ಥವೆಂದು ಪ್ರಸಿದ್ಧಿ ಪಡೆದಿದೆ. ಆ ಯಜ್ಞಭೂಮಿಯು ಅದ್ಯಾಪಿ ಶೋಭಾಯಮಾನವಾಗಿ ವಿರಾಜಿಸುತ್ತಿರುವದು. ೪೫

**तत्रापि भावि वा तीर्थं कलौ तु जनमेजयः ।**
**तदंतिके महायज्ञं सर्पसत्रं करिष्यति ॥ ४६ ॥**

ಸ್ನಾನಮಾಡಿ ವಿಧಿಪೂರ್ವಕವಾಗಿ ದಾನ ಕೊಡಬೇಕು. ೪೭

सप्तसागरसंघेषु कृतपुण्यफलं लभेत् ।
सुबुद्धिर्यत्र जायेत गतिश्चापि न संशयः ॥ ४८ ॥

ಸಪ್ತ ಸಮುದ್ರಗಳ ಸಂಗಮದಲ್ಲಿ ಮಾಡಿದ ಪುಣ್ಯವು ಬರುವದು. ಸುಬುದ್ಧಿ ಹುಟ್ಟುವದು. ನಿಃಸಂಶಯವಾಗಿ ಸದ್ಗತಿಯಾಗುವದು. ೪೮

तत्तीर्थात्प्रवरं तीर्थं क्रोशमात्रमथो श्रृणु ।
विभूतितीर्थमत्युग्रं श्रवणात्पापनाशनम् ॥ ४९ ॥

ಆ ಸಪ್ತ ಸಾಗರತೀರ್ಥದ ಮುಂದೆ ಒಂದು ಕ್ರೋಶದ ತರುವಾಯ ಅತಿ ಉಗ್ರವಾದ ವಿಭೂತಿತೀರ್ಥವಿದೆ. ಅದರ ಮಾಹಾತ್ಮ್ಯದ ಶ್ರವಣದಿಂದ ಪಾಪನಾಶವಾಗುವದು. ೪೯

तपस्विनं महात्मानं कृष्णातीरनिवासिनम् ।
राक्षसः क्रोधताम्राक्षः क्रोधाद्दुद्रावतं मुनिम् ॥ ५० ॥

ಕೃಷ್ಣಾತೀರದಲ್ಲಿ ವಾಸ ಮಾಡುವ ಮಹಾತ್ಮರಾದ ಒಬ್ಬ ತಪಸ್ವಿಗಳನ್ನು ರಾಕ್ಷಸನು ಸಿಟ್ಟಿನಿಂದ ಕಣ್ಣು ಕೆಂಪಗೆ ಮಾಡಿ ಸಿಟ್ಟಿನ ಭರದಲ್ಲಿ ಆ ಋಷಿಗಳನ್ನು ಕಾಡಿದನು. ೫೦

तं दृष्ट्वा संभ्रमापन्नो गंगातीरमृदं तदा ।
चिक्षेप सहसा विप्रो जलैः सार्धमुदारधीः ॥ ५१ ॥

ಆ ರಾಕ್ಷಸನ ಉಪಟಳವನ್ನು ನೋಡಿ, ಆ ಋಷಿಗಳು ಕೃಷ್ಣಾತೀರದ ಮೃತ್ತಿಕೆ, ಹಾಗೂ ನೀರು, ಎರಡನ್ನೂ ಆ ರಾಕ್ಷಸನ ಮೇಲೆ ಉದಾರವಾದ ಬುದ್ಧಿಯಿಂದ ಗೊಜ್ಜಿದನು. ೫೧

जलस्पर्शाद्दाहाशु विसृष्टो राक्षसाधमः ।
दिव्यं देहमनुप्राप्य प्रणम्योवाच तं पुनः ॥ ५२ ॥

ಆ ರಾಕ್ಷಸಾಧಮನು ಆ ಜಲಸ್ಪರ್ಶದಿಂದ ಸುಟ್ಟು ಹೋದನು. ದಿವ್ಯದೇಹ ತೆಗೆದು ಕೊಂಡು ಆ ಋಷಿಗಳಿಗೆ ಪುನಃ ಪುನಃ ನಮಸ್ಕಾರ ಮಾಡಿ ಹೇಳಿದನು. ೫೨

ब्राह्मणानां च साधूनां छलनादीदृशं गतिम् ।

आरुह्य दिव्यवपुषा तत्तीर्थं भस्मसंज्ञकम्                    ॥ ५४ ॥

ಹೀಗೆ ಅವನು ಸಂಭಾಷಣ ಮಾಡಿ ವಿಮಾನಾರೂಢನಾಗಿ ದಿವ್ಯದೇಹಧಾರಣ ಮಾಡಿ ಕೊಂಡು ದೇವಲೋಕಕ್ಕೆ ಹೋದನು. ಆದ್ದರಿಂದ ಆ ತೀರ್ಥಕ್ಕೆ ವಿಭೂತಿ ತೀರ್ಥ (ಭಸ್ಮ) ತೀರ್ಥವೆಂದು ಹೆಸರು ಪ್ರಸಿದ್ಧವಾಯಿತು. ೫೪

अतो माहात्म्यमेतेषां तीर्थानां विस्मयावहम् ।
स्वामिन्कथय नामानि प्रभावं च पृथक् पृथक्                    ॥ ५५ ॥

ಆದ್ದರಿಂದ ಈ ತೀರ್ಥಗಳ ಮಾಹಾತ್ಮ್ಯವು ಆಶ್ಚರ್ಯಕರವಾಗಿವೆ. ಸ್ವಾಮಿನ್ ಆ ತೀರ್ಥಗಳ ಮಹಾತ್ಮ್ಯವನ್ನೂ ಪ್ರಭಾವಗಳನ್ನು ಪ್ರತ್ಯೇಕವಾಗಿ ಹೇಳಿರಿ. ೫೫

स्कंद उवाच –

पश्चिमे प्रथमं तीर्थं गो:पादमिति कीर्तितम् ।
धनुस्त्रिंशत्सहस्त्रं तु बहुगोपादचिह्नितम्                    ॥ ५६ ॥

ಪಶ್ಚಿಮದಲ್ಲಿ (ದಿಕ್ಕಿನಲ್ಲಿ) ಗೋಃಪಾದ ತೀರ್ಥವೆಂದು ಇರುವದು ಮೂರು ಸಾವಿರ ಧನುಷ್ಯದವರೆಗೂ ಬಹಳ ಗೋಪಾದಗಳಿಂದ ಚಿಹ್ನಿತವಾಗಿದೆ. ೫೬

मर्यादार्थं च तस्य प्राक् गो:पादांते स्थित: शिव: ।
लिंगरूपी स्वयंभूतो गो:पादेशोऽखिलाघहृत्                    ॥ ५७ ॥

ಗೋಪಾದತೀರ್ಥದ ಮರ್ಯಾದಾರ್ಥವಾಗಿ ಗೋಃಪಾದದ ಸಮೀಪದಲ್ಲಿಯೇ ರುದ್ರದೇವರು ಸನ್ನಿಹಿತರಾಗಿರುವರು. ಲಿಂಗರೂಪದಿಂದ ಸ್ವಯಂಭೂ ಅಗಿ ಗೋಃಪಾದೇಶರಾಗಿ ಸಕಲ ಪಾಪಗಳನ್ನು ಪರಿಹಾರ ಮಾಡುತ್ತಿರುವರು. ೫೭

सुरभि: सा जगन्माता समभ्यर्च्य च शंकरम् ।
गवामैश्वर्यमासाद्य तीर्थायास्मै वरान्ददौ                    ॥ ५८ ॥

ಜಗನ್ಮಾತೆಯಾದ ಸುರಭಿಯು ಶಂಕರನನ್ನು ಪೂಜಿಸುತ್ತ ಗೋಗಳಿಗೆ ಗೋಗ್ರಾಸ ಕೊಟ್ಟವರಿಗೆ ಕಾಮಧೇನುವು ಗೋವು ಆ ತೀರ್ಥಕ್ಕೆ ವರಕೊಟ್ಟಿರುವಳು. ೫೮

न तेषां निष्कृतिर्यावदिह गोतीर्थसेवनम् ॥ ६० ॥

ಲೋಕಗಳಿಗೆ ಜನರಿಗೆ ಮಾತೆಯಾಗಿರುವವು ಗೋಗಳು. ಆ ಗೋಗಳ ದ್ರೋಹವನ್ನು ಯಾರು ಆಚರಿಸುವರೋ ಅವರಿಗೆ ಈ ಗೋತೀರ್ಥ ಸೇವನ ಮಾಡುವವರೆಗೂ ಪಾಪದ ಪರಿಹಾರವಿಲ್ಲ. ೬೦

ताडयंति च ये गाश्च क्लेशयंत्यतिकर्षणात् ।
निरुंधंति च तेषां वै ह्येतत्तीर्थं विशोधनम् ॥ ६१ ॥

ಯಾರು ಗೋಗಳನ್ನು ತಾಡನ ಮಾಡುವರೋ, ನೇಗಿಲ ಎಳಿಸಿ ಸಂಕಟ ಬಡಿಸುವರೋ ಆ ಗೋಗಳನ್ನು ನಿರೋಧ ಮಾಡುವರೋ, ಅವರೆಲ್ಲರನ್ನೂ ಈ ತೀರ್ಥವು ಪವಿತ್ರ ಮಾಡುವದು. ೬೧

येऽत्र स्नात्वाऽर्चयेल्लिंगं मासमेकं जितेंद्रियः ।
इह गोवृद्धिमाप्नोति प्रेत्य गोलोकमश्नुते ॥ ६२ ॥

ಯಾರು ಈ ಗೋಪ್ಪಾದತೀರ್ಥದಲ್ಲಿ ಸ್ನಾನ ಮಾಡಿ ಒಂದು ತಿಂಗಳ ಪರ್ಯಂತರ ಜಿತೇಂದ್ರಿಯರಾಗಿ ಶಂಕರನನ್ನು ಪೂಜಿಸುವರೋ ಅವರಿಗೆ ಸಮೃದ್ಧಿ ಗೋಗಳು ಉಂಟಾಗುವವು. ಅನಂತರ ಸದ್ಗತಿಯನ್ನು ಪಡೆಯುವರು. ೬೨

स्वपितृभ्यश्च त्रीन्दद्यात्तिलमिश्रान् तिलांजलीन् ।
कामधेनुरहं तेषां स दैवेष्टप्रपूरिणी ॥ ६३ ॥

ಈ ಗೋಪಾದತೀರ್ಥದಲ್ಲಿ ತಮ್ಮ ಪಿತೃಗಳಿಗೆ ಮೂರು ಮೂರು ಸಲ ತಿಲಾಂಜಲಿಯನ್ನು ಯಾರು ಕೊಡುವರೋ ಅವರಿಗೆ ಕಾಮಧೇನು ಸಕಲ ಇಷ್ಟಾರ್ಥವನ್ನು ಪೂರ್ಣ ಮಾಡುವಳು. ೬೩

इति दत्वा वरान्देवी स्वर्लोकं गोकुलैर्ययौ ।
पर्वण्येतास्तु संयांति तेनेदं गोःपदं स्मृतम् ॥ ६४ ॥

ಹೀಗೆ ದೇವಿಯು ವರಗಳನ್ನು ಕೊಟ್ಟು ಎಲ್ಲ ಗೋಗಳಿಂದ ಕೂಡಿಕೊಂಡು

[illegible]
ಈ ಗೋಮಂತ್ರವನ್ನು ಜಪಿಸಬೇಕು. ೬೫

नमो गोभ्यः श्रीपतिभ्यः सौरभेयिन्य एव च ।
नमो ब्रह्मसुताभ्यश्च पवित्राभ्यो नमो नमः ॥ ६६ ॥

ಗೋಗಳಿಗೆ ನಮಸ್ಕಾರವೂ, ಶ್ರೀಪತಿಗಳಿಗೆ ನಮಸ್ಕಾರವೂ, ಕಾಮಧೇನುಗಳಿಗೆ ನಮಸ್ಕಾರಗಳು, ಬ್ರಹ್ಮದೇವರ ಮಕ್ಕಳಿಗೆಲ್ಲ ನಮಸ್ಕಾರಗಳು. ಪವಿತ್ರಗಳಿಗೆ ನಮೋ ನಮಃ. ೬೬

एवंकृत्वः सकृन्मर्त्यः पूतो ब्रह्मपदं व्रजेत् ।
स्मृत्वैवं दूरसंस्थोपि गोप्रदानफलं लभेत् ॥ ६७ ॥

ಹೀಗೆ ಮನುಷ್ಯನು ಒಂದೇ ಸಲ ಕೂಡ ಸ್ತೋತ್ರ ಮಾಡಿದರೂ ಬ್ರಹ್ಮಲೋಕಕ್ಕೆ ಹೋಗುವನು. ಎಷ್ಟೇ ದೂರವಿದ್ದರೂ ಈ ಸ್ತೋತ್ರವನ್ನು ಸ್ಮರಣಮಾಡಿದರೂ ಗೋಪ್ರದಾನದ ಫಲವನ್ನು ಪಡೆಯುವರು. ೬೭

॥ इति श्रीस्कान्दे कृष्णामाहात्म्ये द्विपंचाशत्तमोऽध्यायः ॥

❀ ❀ ❀

## ॥ अथ त्रिपंचाशत्तमोऽध्यायः ॥

स्कंद उवाच –

तस्मात्पूर्वं अनंताख्यं पंचाशद्धनुषावृतम् ।
तीर्थांतरं सरिन्मध्ये लिंगं तु फणिना कृतम् ॥ १ ॥

ಅದರ ಮುಂದೆ ಪೂರ್ವ ದಿಕ್ಕಿನಲ್ಲಿ ೫೦ ಧನುಷ್ಯದ ಅಳತೆಯಿಂದ ಆವೃತವಾದ (ಸುತ್ತಳತೆ) ಅನಂತ ಎಂಬ ಹೆಸರಿನ ತೀರ್ಥವಿದೆ. ನದಿಯ ಮಧ್ಯದಲ್ಲಿ ಶೇಷನ ಹೆಡೆಯ ಆಕಾರವಾಗಿ ರುದ್ರದೇವರ ಲಿಂಗವಿರುವದು. ೧

ಕೆಲವು ದಿವಸಗಳ ಮೇಲೆ ಜಗನ್ನಿಯಾಮಕನಾದ ಸಾಕ್ಷಾತ್ ಪರಮಾತ್ಮನು ಹಾಗೂ ರುದ್ರದೇವರು ಇಬ್ಬರೂ ಅನಂತನು ತಪಃಸು ಮಾಡುವ ಸ್ಥಳದಲ್ಲಿ ಬಂದು ಅಭಯಧಾನ ಮಾಡಿ ಅಮರತ್ವವನ್ನು ಕೊಟ್ಟರು. ೩

शय्या त्वं मे भवेत्युक्त्वा विष्णुस्तस्य फणे: स्वयम् ।
उपाविशत्सुखस्पर्शलीलया शंभुना सह ॥ ४ ॥

ವಿಷ್ಣು ಸ್ವತಃ ಆ ಅನಂತನಿಗೆ ನೀನು ನನ್ನ ಹಾಸಿಗೆ ಆಗು ಅಂತ ಹೇಳಿ, ಇವನ ಹೆಡೆಯ ಮೇಲೆ ಕುಳಿತನು. ಆ ಸುಖದ ಸ್ಪರ್ಶದಿಂದ ಲೀಲಾಜಾಲವಾಗಿ ರುದ್ರದೇವರೂ ಕೂಡ ಕುಳಿತರು. ೪

प्रसन्न: शंभुसंस्पर्शात्सोऽपि नष्टतप: श्रम: ।
जहर्ष धन्यतां यात: प्रसादादुत्तरं ददन् ॥ ५ ॥

ರುದ್ರದೇವರ ಸ್ಪರ್ಶದಿಂದಲೇ ತಪಃಸಿನ ಶ್ರಮವೆಲ್ಲವೂ ಪರಿಹಾರವಾಗಿ ಪ್ರಸನ್ನನಾದನು. ಅನಂ ತನು ಧನ್ಯನಾದನು. ಪ್ರಸನ್ನತೆಯಿಂದ ಉತ್ತರವನ್ನೂ ಕೊಟ್ಟನು. ೫

तावद्ब्रह्मादयो देवा देवास्तीर्थानि तापसा: ।
समेत्य तुष्टुवु: सर्वे दृष्ट्वा देवौ फणास्थितौ ॥ ६ ॥

ಆ ಕ್ಷಣದಲ್ಲಿ ಬ್ರಹ್ಮಾದಿದೇವತೆಗಳು ವೇದಾಭಿಮಾನಿದೇವತೆಗಳು, ತೀರ್ಥಾಭಿಮಾನಿದೇವತೆಗಳು, ತಪಸ್ವಿಗಳು, ಎಲ್ಲರೂ ಶೇಷನ ಮೇಲೆ ಇರುವ ವಿಷ್ಣು, ರುದ್ರದೇವರನ್ನು ನೋಡಿ ಸ್ತೋತ್ರಮಾಡಿದರು. ೬

फणिशय्यां समारूढे लक्ष्मीशे सह शंभुना ।
चक्रुर्महोत्सवं सिद्धा गंधर्वा: पुष्पवर्षिण: ॥ ७ ॥

ಲಕ್ಷ್ಮೀಪತಿಯಾದ ನಾರಾಯಣನು ರುದ್ರದೇವರಿಂದ ಕೂಡಿಕೊಂಡು ಶೇಷದೇವರ ಮೇಲೆ ಆರೋಹಣ ಮಾಡಿದ ಕೂಡಲೇ ಸಿದ್ಧರೂ, ಗಂಧರ್ವರೂ, ಪುಷ್ಪವೃಷ್ಟಿ ಮಾಡಿ ಮಹೋತ್ಸವವನ್ನು ಮಾಡಿದರು. ೭

ततोऽनंतो वरान् वव्रे सिद्धदेवौघसन्निधौ ।

तीर्थानामसुराणां च देवतानां सदैव हि ।
युवयोश्चापि कलया समस्तानां च सन्निधौ ॥ ९ ॥

ಈ ತೀರ್ಥದಲ್ಲಿ ಅಸುರರ, ದೇವತೆಗಳ, ಇಷ್ಟಾರ್ಥಗಳು. ಸಿದ್ದಿಸಲಿ. ನಿಮ್ಮಿಬ್ಬರ ಒಂದೊಂದು ಅಂಶದಿಂದ ಸನ್ನಿಹಿತರಾಗಿ ಇಷ್ಟಾರ್ಥಗಳನ್ನು ಪೂರ್ಣಮಾಡಿರಿ. ೯

श्रीविष्णुरुवाच –

अनंततीर्थमेतद्धि कीर्त्यते भुवनत्रये ।
स्नानदानजपादीनामनंतफलदं स्मृतम् ॥ १० ॥

ಭುವನತ್ರಯಗಳಲ್ಲಿ ಅನಂತತೀರ್ಥವೆಂದು ಪ್ರಸಿದ್ಧಿಯನ್ನು ಪಡೆಯುತ್ತದೆ. ಅಲ್ಲಿ ಸ್ನಾನ, ದಾನ, ಜಪಾದಿಗಳನ್ನು ಮಾಡುವವರಿಗೆ ಅನಂತ ಫಲ ದೊರಕುವದು. ೧೦

अनंतस्त्वं अनंतोऽहं अनंतोऽयं सदाशिवः ।.
तीर्थानि देवा वेदाश्च सर्वेऽनंता स्थितास्त्विह ॥ ११ ॥

ನೀನೂ ಅನಂತ, ನಾನೂ ಅನಂತ, ಸದಾಶಿವನೂ ಅನಂತ, ಎಲ್ಲ ತೀರ್ಥಗಳೂ ವೇದಾಭಿಮಾನಿ ದೇವತೆಗಳೂ, ಸರ್ವರೂ, ಅನಂತರಾಗಿ ಇಲ್ಲೇ ಸ್ಥಿರವಾಗಿ ಇರಲಿ. ೧೧

ईश्वर उवाच –

योऽत्र स्नात्वा फणिस्थौ तु समाधायैकलिंगके ।
अर्चयेत्परया भक्त्या स मया सह मोदते ॥ १२ ॥

ಯಾರು ಈ ಅನಂತತೀರ್ಥದಲ್ಲಿ ಸ್ನಾನ ಮಾಡಿ ಶೇಷನ ಮೇಲೆ ಪವಡಿಸಿದ ನಮ್ಮಿಬ್ಬರನ್ನೂ (ಲಿಂಗಾಕಾರವಾಗಿರುವ) ಪರಮಭಕ್ತಿಯಿಂದ ಪೂಜೆಮಾಡುವರೊ ಅವರು ನನ್ನಿಂದ ಕೂಡಿಕೊಂಡು ಆನಂದ ಪಡುವರು. ೧೨

ब्रह्माद्या ऊचुः –

इत्थं संभाष्यते सर्वे तत्रैवान्तर्दधुस्तदा ।
नित्यं सन्निहिताश्चात्र तेनेदं तीर्थमुत्तमम् ॥ १४ ॥

ಅವರೆಲ್ಲರೂ ಹೀಗೆ ಸಂಭಾಷಣೆಮಾಡಿ ಅಂತರ್ಧಾನರಾದರು. ನಿತ್ಯದಲ್ಲಿಯೂ ಅವರೆಲ್ಲರೂ ಆ ತೀರ್ಥದಲ್ಲಿ ಸನ್ನಿಹಿತರಾಗಿರುವರು. ಆದ್ದರಿಂದ ಇದು ಉತ್ತಮೋತ್ತಮವಾದ ಅನಂತತೀರ್ಥವು. ೧೪

ततःप्रभृति लोकानां ज्ञापनार्थं शिलात्मकम् ॥ १५ ॥

ಅವತ್ತಿನಿಂದ ಜನರಿಗೆ ತಿಳಿಸಿಕೊಡುವದರಗೋಸ್ಕರ ಇನ್ನೂವರೆಗೂ, ಆ ಅನಂತನಲ್ಲಿ ಹರಿ-ಹರಾತ್ಮಕವಾದ, ಶಿಲಾತ್ಮಕವಾದ ಲಿಂಗವು ಕಂಡುಬರುವದು. ೧೫

पंच चान्यानि नामानि सिद्धवेद्यानि संति हि ।
अत्रैव पुण्यदृश्यास्ति शिलानामांतरेण सा ॥ १६ ॥

ಐದು ಬೇರೆ ಬೇರೆ ನಾಮಗಳು ತಿಳಿದುಕೊಳ್ಳಲಿಕ್ಕೆ ಯೋಗ್ಯವಾದಂಥವುಗಳು ಇರುವವು. ಆ ಲಿಂಗಾಕಾರವಾದ ಶಿಲೆಯು ನಾಮಾಂತರದಿಂದ ಪುಣ್ಯವಂತರಿಗೆ ಮಾತ್ರ ಕಂಡುಬರುವವು. ೧೬

तस्मात्स्नात्वा च नियतो लिंगं हरिहरात्मकम् ।
शेषं च भक्त्या संपूज्य प्रणमेदिति वै जपन् ॥ १७ ॥

ಆದ ಕಾರಣ ಅಲ್ಲಿ ಸ್ನಾನ ಮಾಡಿ ನಿಯಮದಿಂದ ಹರಿ-ಹರಾತ್ಮಕವಾದ ಲಿಂಗವನ್ನೂ, ಶೇಷನನ್ನೂ, ಭಕ್ತಿಯಿಂದ ಪೂಜೆಮಾಡಿ ನಮಸ್ಕರಿಸತಕ್ಕದ್ದು ಹಾಗೂ ಜಪಮಾಡತಕ್ಕದ್ದು. ೧೭

योऽनंतो धरणीं धत्ते योऽनंतः सचराचरः ।
योनंतस्त्वंचविश्वेशस्त्रीननंतान्नतोस्म्यहम् ॥ १८ ॥

ಈ ಭೂಮಂಡಲವನ್ನು ಧಾರಣಮಾಡಿದ, ಅನಂತನು ನೀನೇ. ಈ

[illegible]
ಭಯದಿಂದ ಮುಕ್ತರಾಗಿ ಕುಲವನ್ನು ವೃದ್ಧಿಮಾಡತಕ್ಕ ಸಂತತಿಯನ್ನು ಪಡೆಯುವರು. ೧೯

स्कंद उवाच–

सूर्यतीर्थं ततःपूर्वमिति तीर्थविदो विदुः ।
धनुःशतप्रमाणं च सिद्धिदं सिद्धसेवितम् ॥ २० ॥

ಆ ಅನಂತತೀರ್ಥದ ಮುಂದೆ ಸಿದ್ಧಿಪ್ರದವಾದ ಸಿದ್ಧರಿಂದ ಸೇವಿಸಲ್ಪಡುವ ತೀರ್ಥವು ಇರುವದು. ಒಂದು ನೂರು ಧನುಷ್ಯದ ಅಳತಿಯ ಮುಂದೆ ಇರುವದು ಎಂದು, ತೀರ್ಥಜ್ಞಾನ ಬಲ್ಲವರು ಸೂರ್ಯತೀರ್ಥವೆಂದು ಕರೆಯುವರು. ೨೦.

तस्य पश्चिममर्यादां ज्ञापयन् लिंगमूर्तिधृक् ।
सोमेश इति विख्यातो नदीमध्ये सुसंस्थितः ॥ २१ ॥

ಪಾರ್ವತೀ ಸಹಿತ ರುದ್ರರು ಅದರ ಪಶ್ಚಿಮ ದಿಕ್ಕಿಗೆ ಅಳತೆಯನ್ನು ತಿಳಿಸಿ ಕೊಡಲಿಕ್ಕೆ ಒಂದು ಲಿಂಗಮೂರ್ತಿ ಇರುವದು. ಅದು ಸೋಮೇಶವೆಂದು ಪ್ರಸಿದ್ಧವಿದೆ. ನದೀಮಧ್ಯದಲ್ಲಿ ಸ್ಥಿರವಾಗಿರುವದು. ೨೧

महर्षिः पावमान्यस्तु तपस्तप्त्वा महत्तपः ।
आराधयन् जगन्मूर्तिं सूर्यं तुष्टाव भक्तिमान् ॥ २२ ॥

ಪಾವಮಾನಿ ಎಂಬ ಮಹರ್ಷಿಗಳು (ಆ ಸೋಮೇಶತೀರ್ಥ) ಸೂರ್ಯತೀರ್ಥದಲ್ಲಿ ಮಹತ್ತರವಾದ ತಪಃಸುಮಾಡಿ, ಜಗನ್ಮೂರ್ತಿಯಾದ ಸೂರ್ಯನ ಆರಾಧನೆಮಾಡುತ್ತ ಭಕ್ತಿಯಿಂದ ಸ್ತೋತ್ರ ಮಾಡಿದರು. ೨೨

पावमान्य उवाच –

नमः सवित्रेऽव्यक्ताय स्मार्ताय मणिने तथा ।
जगत्स्थिति सृष्टिकर्त्रे बालाय हितकारिणे ॥ २३ ॥

ಜಗತ್ತಿನ ಸೃಷ್ಟಿ-ಸ್ಥಿತಿಗಳಿಗೆ ಕಾರಣನಾದ, ಅವ್ಯಕ್ತನಾದ ಸ್ಯಮಂತಮಣಿಯ ಸ್ವರೂಪ

ಸೂರ್ಯನೇ ! ನಿನಗೆ ನಮಸ್ಕಾರಗಳು. ೨೪

यथा ग्रीष्मे शोषयसि तृणानि दुरितं तथा।
त्वंसुज्वलान्ज्वलैः पूर्णान्नित्याभ्युदयशालिनः ॥ २५ ॥

ಹೇಗೆ ಗ್ರೀಷ್ಮಋತುವಿನಲ್ಲಿ (ಬಿಸಿಲದಿವಸದಲ್ಲಿ) ಹುಲ್ಲುಗಳನ್ನು ಹೇಗೆ ಒಣಗಿಸಿ ಬಿಡುವಿಯೋ, ಹಾಗೆ ನೀನು ಪ್ರಜ್ವಲಿತವಾದ ಕಿರಣಗಳಿಂದ ನಮ್ಮದುರಿತಗಳನ್ನು (ಪಾಪಗಳನ್ನು) ಸುಟ್ಟು ಹಾಕು. ನಿತ್ಯದಲ್ಲಿಯೂ ಅಭ್ಯುದಯಶಾಲಿಗಳಾದವರ ಪಾಪಗಳನ್ನೂ ಸುಟ್ಟುಹಾಕು. ೨೫

स्वभक्तास्वसमानांश्च करोषि करुणानिधे।
व्रह्मादिदेवाः संध्यासु ये कुर्वंति जलांजलीन् ॥ २६ ॥

ಯಾವ ಬ್ರಹ್ಮಾದಿ ದೇವತೆಗಳು ಸಂಧಿಕಾಲದಲ್ಲಿ ಸಂಧ್ಯಾವಂದನ ತರ್ಪಣಾದಿಗಳನ್ನು ಮಾಡುವರೋ, ಆ ಭಕ್ತರನ್ನು ಸಾರೂಪ್ಯರನ್ನಾಗಿ ಮಾಡುವಿ. ೨೬

युक्तं वै न हि ते पूज्यास्तेषां त्वं च वरप्रदः।
यथा प्रतिक्षणे देव अनायासेन वोध्यसे ॥ २७ ॥

ಯಾರು ನಿನ್ನ ಪೂಜಿಸುವದಿಲ್ಲವೋ, ಅವರಿಗೂ ಕೂಡ ವರಪ್ರದನಾಗಿರುವಿ. ಪ್ರತಿಕ್ಷಣದಲ್ಲಿ ಅನಾಯಾಸವಾಗಿ ತಿಳಿಯಲ್ಪಡುವಿ. ೨೭

आयुरारोग्यदाता त्वं त्वं च प्रत्यक्षजस्तथा।
त्वमेव जीवश्चक्षुश्च तेजश्चास्योपकारकम् ॥ २८ ॥

ಪ್ರತ್ಯಕ್ಷವಾಗಿ ನೀನು ಎಲ್ಲರಿಗೂ ಆಯುಷ್ಯ, ಆರೋಗ್ಯ, ಮುಂತಾದವುಗಳನ್ನು ಕೊಡತಕ್ಕವನು. ನೀನೇ ಎಲ್ಲರಿಗೂ ಜೀವ, ಕಣ್ಣು, ತೇಜಸ್ಸು, ಉಪಕಾರಕನು. ೨೮

भाग्यं च परमात्मा च त्वन्मयं सकलं जगत्।
प्रसीद सर्वभूतात्मन् लोकात्मन् विश्वतोमुख ॥ २९ ॥

ನೀನು ನಮ್ಮ ಭಾಗ್ಯದಾತನು. ನೀನೇ ಪರಮಾತ್ಮನು. ಇಡೀ ಜಗತ್ತು ನಿನ್ನ ಅಧೀನ

... ಭಕ್ತವತ್ಸಲನು. ಹೀಗೆ ಆ ಸೂರ್ಯನನ್ನು (ಸೂರ್ಯಾಂತ
ರ್ಗತ) ಪರಮಾತ್ಮನನ್ನು ಸ್ತೋತ್ರಮಾಡಲಾಗಿ. ೩೦

दिव्याकृतिः पुरस्तस्थावादित्यो निजमंडलात्।
तं दृष्ट्वा सहसा देवं हृष्टरोमासनात्ततः ॥ ३१ ॥

ಸೂರ್ಯಮಂಡಲದಿಂದ ಆದಿತ್ಯನು ದಿವ್ಯವಾದ ಆಕಾರದಿಂದ ಆ ಪಾವಮಾನಿ ಋಷಿಗಳ ಮುಂದೆ ಪ್ರಸನ್ನನಾಗಿ, ಪ್ರಕಟನಾದನು. ಒಮ್ಮೆಲೇ ಪ್ರತ್ಯಕ್ಷನಾದ ಆ ದೇವ ದೇವೇಶನನ್ನು ನೋಡಿ, ರೋಮಾಂಚಿತನಾಗಿ ಆಸನದಿಂದ ಎದ್ದು. ೩೧

पपात दंडवद्भूमौ प्रसीदेति वदन्मुहुः।
तमुत्थायाह देवेशो वरं वरय सुव्रत ॥ ३२ ॥

ಭೂಮಿಯ ಮೇಲೆ ಸಾಷ್ಟಾಂಗ ನಮಸ್ಕಾರ ಮಾಡಿದನು. ನನ್ನ ಮೇಲೆ ಪ್ರಸನ್ನರಾಗಿರಿ ಎಂದು. ದೇವೇಶನು ಆ ಪಾವಮಾನಿ ಋಷಿಗಳನ್ನು ಎರಡೂ ಕೈಯಿಂದ ಎತ್ತಿ ಹಿಡಿದು, ವ್ರತಸ್ಥನೇ, ವರಗಳನ್ನು ಕೇಳು. ೩೨

प्रीतोऽस्मि तपसा तेऽद्य स्तोत्रेण च महामुने।

पावमान्य उवाच –

तुष्टस्त्वं यदि देवेश भवरोगहरो ह्यसि ॥ ३३ ॥

ಹೇ ಮಹಾಮುನೇ! ನಿನ್ನ ತಪಸ್ಸಿನಿಂದಲೂ, ಸ್ತೋತ್ರದಿಂದಲೂ, ಪ್ರೀತನಾಗಿರುವೆನು.

**ಪಾವಮಾನಿ ಋಷಿಗಳು ಅಂದರು–**

ದೇವೇಶನೇ! ಒಂದು ವೇಳೆ ನೀನು ಸಂತುಷ್ಟನಾಗಿದ್ದ ಪಕ್ಷದಲ್ಲಿ ಭವರೋಗ ಪರಿಹಾರಮಾಡುವವನಾಗು. ೩೩

ज्ञानं भक्तिं च मे देहि भवरोगघ्नमौषधम्।

ಯಾರು ಈ ಸ್ತೋತ್ರದಿಂದ ನನ್ನನ್ನು ಸ್ತೋತ್ರಮಾಡುವರೋ ಅವರಿಗೆ ಜ್ಞಾನ, ಭಕ್ತಿ ಉಂಟಾಗಿ ಭವರೋಗ ಪರಿಹಾರವಾಗಲಿ. ೩೪

भक्त्या स्तोष्यति तस्यापि स एवास्तु सदा वरः ।
सूर्यतीर्थमिति ख्यातमेतत्तीर्थं भविष्यति ॥ ३५ ॥

ನನ್ನನ್ನು ಭಕ್ತಿಯಿಂದ ಸ್ತೋತ್ರಮಾಡತಕ್ಕವರಿಗೂ, ಈ ವರವು ಸಿಗುವದು. ಇವತ್ತಿನಿಂದ ಈ ತೀರ್ಥವು ಸೂರ್ಯತೀರ್ಥವೆಂದು ಪ್ರಸಿದ್ಧವಾಗುವದು. ೩೫

यत्र मत्रापणाद्या च ताम्रा संदृश्यते शिला ।
योऽत्र स्नात्वा समभ्यर्च्य सोमेशं मां च भक्तिमान् ॥ ३६ ॥

ಎಲ್ಲಿ ನಾನು ನಿನಗೆ ಪ್ರಕಟನಾಗಿರುವೆನೋ, ಅಲ್ಲೆ ಆ ಶಿಲೆಯು ತಾಮ್ರಮಯವಾಗಿ ಕಾಣಿಸುವದು. ಅಲ್ಲಿ ಯಾರು ಸ್ನಾನಮಾಡಿ ಪಾರ್ವತೀರುದ್ರದೇವರನ್ನೂ, ನನ್ನನ್ನೂ ಭಕ್ತಿಯಿಂದ ಪೂಜಿಸುವರೋ, ೩೬

नमस्कुर्याद्वरस्तस्मै सोऽस्तु यद्धि तमीप्सितम् ।
अनुग्राह्येति भगवान् ऋषि तीर्थं च सर्वदा ॥ ३७ ॥

ನಮಸ್ಕಾರಮಾಡುವರೋ, ಅವರಿಗೂ ಈ ವರವು ಹಾಗೂ ಅವರ ಇಷ್ಟಾರ್ಥವು ಪೂರ್ಣವಾಗಲಿ. ಋಷಿಗಳೂ ಅನುಗ್ರಹಿಸಲಿ. ೩೭

ययौ स्वमंडले देवः कृतार्थश्चाभवन्मुनिः ।
तस्मात् सूर्यप्रसादेन तीर्थमेतद्धि मुक्तिदम् ॥ ३८ ॥

ಸೂರ್ಯನು ತನ್ನ ರವಿಮಂಡಲಕ್ಕೆ ಹೋದನು. ಪಾವಮಾನೀ ಋಷಿಗಳು ಕೃತಾರ್ಥರಾದರು. ಆದಕಾರಣ ಸೂರ್ಯನ ಪ್ರಸಾದದಿಂದ ಈ ತೀರ್ಥವು ಮುಕ್ತಿಪ್ರದವಾಗಿರುವದು. ೩೮

सर्वकामप्रदं पुण्यं सदा सेव्यं मनीषिभिः ।
इति श्रुत्वा महत्तीर्थं माहात्म्यं लोकपावनम् ॥ ३९ ॥

तस्मादनंतरं संतः कोटितीर्थं प्रचक्षते ॥ ४० ॥

ನಮಗೆ ತೃಪ್ತಿಯಾಗಲಿಲ್ಲ. ಆದಕಾರಣ ಇನ್ನೂ ಬೇರೆ ಬೇರೆ ತೀರ್ಥಗಳ ಮಹಾತ್ಮ್ಯವನ್ನು ಹೇಳಿರಿ.

**ಶೂರಪಾಲಯ ಕ್ಷೇತ್ರವರ್ಣನೆ –**

**ಸ್ಕಂದನು ಅಂದನು –**

ಜ್ಞಾನಿಗಳೇ ! ಆಮೇಲೆ ಅದರ ಮುಂದೆ ಕೋಟಿತೀರ್ಥವಿರುವದು. ೪೦

पवित्रं परमं यावच्छिलासेतुः प्रदृश्यते ।
सप्तर्षयोऽत्र मध्याह्ने कदाचित्स्नातुमुद्यताः ॥ ४१ ॥

ಆ ಕೋಟಿ ತೀರ್ಥವೆಂದರೆ ಪರಮ ಪವಿತ್ರವಾದ ಯಾವ ಶಿಲಾಸೇತು ಎಂಬುವದೊಂದು ಕಂಡುಬರುವದು. ಅಲ್ಲಿ ಸಪ್ತ ಋಷಿಗಳು ಮಧ್ಯಾಹ್ನಕಾಲದಲ್ಲಿ ಸ್ನಾನಕ್ಕೆ ಬರುವರು. ೪೧

प्रत्येकं कोटितीर्थानि मनसा समभावयन् ।
अथ तेषां प्रभावेण तीर्थानां सप्तकोटयः ॥ ४२ ॥

ಪ್ರತಿಯೊಂದು ಕೋಟಿತೀರ್ಥಗಳು ಎಂದು ಮನಸಾ ಸಂಕಲ್ಪ ಮಾಡಿಕೊಂಡು ಸ್ನಾನಮಾಡುತ್ತಿದ್ದರು. ಆದ ಕಾರಣ ಆ ಸಪ್ತಋಷಿಗಳ ಪ್ರಭಾವದಿಂದ ಆ ತೀರ್ಥಗಳು ಸಪ್ತ ಕೋಟಿಗಳಾದವು. ೪೨

तत्तीर्थं समनुप्राप्ताः स्थितास्तत्रैव तद्गिरा ।
तस्मात्तत्परमं तीर्थं सेवितव्यं मनीषिभिः ॥ ४३ ॥

ಆ ಸಪ್ತ ಋಷಿಗಳು ಅಲ್ಲಿಗೆ ಬಂದು ಅಲ್ಲಿಯೇ ಸ್ಥಿರವಾಗಿ ಉಳಿದರು. ಆದ ಕಾರಣ ಆ ತೀರ್ಥವು ಪರಮತೀರ್ಥವಾಯಿತು. ಜ್ಞಾನಿಗಳು ಅವಶ್ಯವಾಗಿ ಆ ತೀರ್ಥವನ್ನು ಸೇವಿಸತಕ್ಕದ್ದು. ೪೩

दानं श्राद्धं जपो यत्र सप्तकोटिगुणो भवेत् ।

ಪರಮಾತ್ಮನು ಇದು ವಿಜ್ಞಾನ ಸಾಧನವೆಂದು ಹೇಳಿದನು. ೪೫

तत्तीर्थमिह लोकानां हितार्थे प्राह केशवः ।
क्षिप्तमेतन्महाचक्रं सुदर्शनमनुत्तमम् ॥ ४६ ॥

ಜನರ ಹಿತದ ಸಲುವಾಗಿ ಅತಿಶಯ ಉತ್ತಮವಾದ ಈ ಮಹಾಚಕ್ರವನ್ನು ಇಲ್ಲೇ ಇಟ್ಟಿರುವೆನು. ಆದಕಾರಣ ಇದು ಚಕ್ರತೀರ್ಥವು. ೪೬

दर्शयिष्यति तत्तीर्थं इत्युक्त्वा प्राहिणोद्विभुः ।
तेनैतद्दर्शितं तीर्थं ततःप्रभृति भूतले ॥ ४७ ॥

ಪರಮಾತ್ಮನು ನಿನಗೆ ಆ ತೀರ್ಥವನ್ನು ತೋರಿಸುವನು ಎಂದು ಹೇಳಿ ಕಳಿಸಿದನು. ಅವನಿಗೆ ಎಂದು ತೋರಿಸಿದನೋ ಅವತ್ತಿನಿಂದ ಅದು ಚಕ್ರತೀರ್ಥವೆಂದು ಪ್ರಸಿದ್ಧವಾಗಿದೆ. ೪೭

चक्रतीर्थमिति ख्यातं राजा चात्रावसच्चिरम् ।
कात्यायनी च तत्रास्ते तत्तीर्थस्य समीपतः ॥ ४८ ॥

ಆ ಪ್ರಸಿದ್ಧವಾದ ಚಕ್ರತೀರ್ಥದಲ್ಲಿಯೇ ಅಂಬರೀಷರಾಜನು ವಾಸಮಾಡಿದನು. ಆ ತೀರ್ಥದ ಸಮೀಪದಲ್ಲಿ ಕಾತ್ಯಾಯನೀ ದೇವಿಯೂ ಕೂಡ ವಾಸಮಾಡಿರುವಳು. ೪೮

चक्रतीर्थे वसन्मर्त्यः षण्मासाल्लभते ध्रुवम् ।
ज्ञानं संसारचक्रघ्नं प्रसादादेव चक्रिणः ॥ ४९ ॥

ಆ ಚಕ್ರತೀರ್ಥದಲ್ಲಿ ಆರು ತಿಂಗಳು ಯಾರು ವಾಸಮಾಡುವರು, ಅವರು ಆ ಚಕ್ರದ ಪ್ರಸಾದದಿಂದ ಸಂಸಾರಚಕ್ರವನ್ನು ನಾಶಮಾಡುವ ಜ್ಞಾನವನ್ನು ಪಡೆಯುವರು. ೪೯

ततः पूर्वं महापुण्यं शंखतीर्थमिति स्मृतम् ।
शंखाकृतिः शिला यत्र दृश्यते तावदेव तु ॥ ५० ॥

ಅದರ ಮುಂದೆ ಮಹಾಪುಣ್ಯಕರವಾದ ಶಂಖತೀರ್ಥವಿರುವದು. ಯಾವ ಸ್ಥಳದಲ್ಲಿ ಶಿಲೆಯು ಶಂಖದ ಆಕಾರ ಉಳ್ಳದ್ದಾಗಿ ತೋರುವದೋ ಅದೇ ಶಂಖತೀರ್ಥವು. ೫೦

कदाचिद्देवकीसूनुर्गच्छन्दक्षिणदिग्जये ।

शखनादकमानाय तस्मिन्तीर्थे स माधवः।
लिंगं संस्थापयामास प्राह चैतन्महाफलम् ॥ ५२ ॥

ಆ ತೀರ್ಥದಲ್ಲಿ ಮಾಧವನು ಶಂಖದಿಂದ ನೀರನ್ನು ತೆಗೆದುಕೊಂಡು ಲಿಂಗವನ್ನು ಸ್ಥಾಪನೆಮಾಡಿದನು. ಇದು ಮಹಾಫಲಪ್ರದವೆಂದು ಹೇಳಿದನು. ೫೨

लोकानां ज्ञापनार्थाय चिह्नं तत्र शिलातले।
शंखेन चक्रे लोकेशस्तीर्थं चोत्तमोत्तमम् ॥ ५३ ॥

ಜನರಿಗೆ ತಿಳಿಸಿಕೊಡುವದಕ್ಕೋಸ್ಕರ ಜಗನ್ನಿಯಾಮಕನಾದ ಶ್ರೀಹರಿಯು, ಆ ಶಿಲಾತಲದಲ್ಲಿ ಶಂಖದಿಂದ ಚಿಹ್ನವನ್ನು ಮಾಡಿದನು. ಆ ತೀರ್ಥವು ಉತ್ತಮೋತ್ತಮವು. ೫೩

तस्मात्पूर्वं महातीर्थं संगमे लोकविश्रुतम्।
यावन्मलापहारिण्यास्तटं पूर्वं प्रदृश्यते ॥ ५४ ॥

ಅದರ ಮುಂದೆ ಮಹಾತೀರ್ಥವು ಇರುವದು. ಲೋಕಪ್ರಸಿದ್ಧವಾದದ್ದು, ಮಲಾಪಹಾರಿಣೀ ತಟದಲ್ಲಿ ಮೊದಲು ಕಂಡುಬಂದಿರುವದು. ೫೪

तदेतत्परमं तीर्थं दुर्लभं पापकर्मणाम्।
न मे प्रगल्भ्यते वाणी तस्य माहात्म्यवर्णने ॥ ५५ ॥

ಅದು ಪರಮಶ್ರೇಷ್ಠವಾದ ತೀರ್ಥವು. ಪಾಪಿಗಳಿಗೆ ಬಹಳ ದುರ್ಲಭವಾದದ್ದು. ಆ ಸಂಗಮತೀರ್ಥದ ವರ್ಣನೆ ಮಾಡಲಿಕ್ಕೆ ನನ್ನ ವಾಣಿಯು ಸಮರ್ಥವಾಗುವದಿಲ್ಲ. ೫೫

क्रोशमात्रं सुविस्तीर्णं संगमं क्षेत्रमुत्तमम्।
गोःपदानि च तीर्थानि तत्रैव निवसन्त्यतः ॥ ५६ ॥

ಆ ಉತ್ತಮೋತ್ತಮವಾದ ಸಂಗಮತೀರ್ಥವು ಒಂದು ಕ್ರೋಶಪರ್ಯಂತರ ವಿಸ್ತೀರ್ಣವಾಗಿರುವದು. ಗೋಃಪಾದತೀರ್ಥಗಳೂ ಕೂಡ ಅಲ್ಲಿಯೇ ಇರುವವು. ೫೬

प्रणवस्था यथा वेदाः शिवस्थाः सर्वदेवताः।
तथा सर्वाणि तीर्थानि संगमस्थानि सुव्रताः ॥ ५७ ॥

ಕೊಳ್ಳಲ್ಪಡುವದು. ಪರಮ ಪಾಪಿಯೂ ಕೂಡ ಇಲ್ಲಿ ಮೃತನಾದರೆ, ಪರಮ ಪಾಪದಿಂದ ಬಿಡುಗಡೆಯಾಗಿ ಸಂಸಾರ ಬಂಧನದಿಂದ ಬಿಡುಗಡೆಯಾಗುವನು. ೫೮

वराहस्योत्तरे देशे दक्षिणे संगमस्ततः।
मम क्षेत्रमिति प्राह स्वयं देवो महेश्वरः ॥ ५९ ॥

ಉತ್ತರದಲ್ಲಿ ವರಾಹ, ದಕ್ಷಿಣದಲ್ಲಿ ಸಂಗಮ, ಅದರ ಮಧ್ಯಪ್ರದೇಶವು ನನ್ನ ಕ್ಷೇತ್ರವೆಂದು ಸ್ವತಃ ಮಹೇಶ್ವರನೇ ಹೇಳುವನು. ೫೯

श्रीशैले च प्रभासे च स्मशानेऽमरकंटके।
घटपासंगमे सेतौ वसामि क्षेत्रगौरवात् ॥ ६० ॥

ಶ್ರೀಶೈಲದಲ್ಲಿ, ಪ್ರಭಾಸದಲ್ಲಿ, ಶ್ಮಶಾನದಲ್ಲಿ, ಅಮರಕಂಟಕದಲ್ಲಿ, ಘಟಪ್ರಭಾ ಸಂಗಮದಲ್ಲಿ, ರಾಮೇಶ್ವರದಲ್ಲಿ, ಕ್ಷೇತ್ರಗೌರವದಿಂದ ವಾಸಮಾಡುವೆನು. ೬೦

वाराणस्यां च विश्वेशं संगमेशं च संगमे।
श्रुत्वा रामेश्वरं नत्वा जन्माघौघं व्यपोहति ॥ ६१ ॥

ವಾರಾಣಸಿಯಲ್ಲಿ ವಿಶ್ವೇಶ್ವರನನ್ನು, ಸಂಗಮದಲ್ಲಿ ಸಂಗಮೇಶನನ್ನು, ಹಾಗೂ ರಾಮೇಶ್ವರನ ಮಹಾತ್ಮ್ಯವನ್ನು ಶ್ರವಣಮಾಡಿ ನಮಸ್ಕರಿಸಿದರೆ, ಜನ್ಮಜನ್ಮಾಂತರಗಳ ಪಾಪಗಳೆಲ್ಲವೂ ಪರಿಹಾರ ವಾಗುವವು. ೬೧

कृत्वा तुल्यानि तीर्थानि अर्चयन्मासमात्रकः।
तस्याहं सुलभो देवि किमु स्वर्गादिकं फलम् ॥ ६२ ॥

ಅಸದೃಶಗಳಾದ ಈ ತೀರ್ಥಗಳನ್ನು ಒಂದು ತಿಂಗಳ ಪರ್ಯಂತರ ಯಾರು ಪೂಜಿಸುವರೋ ಅವರಿಗೆ ಹೇ ದೇವಿ ! ನಾನೇ ಸುಲಭ ಸಾಧ್ಯನಾಗುವೆನು. ಅಂದ ಮೇಲೆ ಸ್ವರ್ಗಾದಿ ಫಲಗಳು ಸುಲಭ ಸಾಧ್ಯವೆಂದು ಏನು ಹೇಳಬೇಕು. ೬೨

घटपायाः संगमे च मत्सेवार्थं सदा नराः।
सिद्धर्षयो यक्षवरा नागाश्चापि हि संगमे ॥ ६३ ॥

लिंगात्माऽप्यष्टधा यत्र स्थितोऽहं भक्तवत्सलः ।
नदीमध्ये बहिश्चापि क्षेत्रेऽस्मिन् स्वयमुत्थितः ॥ ६५ ॥

ಭಕ್ತವತ್ಸಲನಾದ ನಾನು, ಎಂಟು ಪ್ರಕಾರ ಉಳ್ಳವನಾಗಿ, ಲಿಂಗಾಕಾರನಾಗಿ ನದಿಯ ಮಧ್ಯದಲ್ಲಿ, ನದಿಯ ಹೊರಗಡೆ ದೇಶದಲ್ಲಿ ಈ ಕ್ಷೇತ್ರದಲ್ಲಿ ಸ್ವತಃ ಪ್ರಕಟನಾಗಿರುವೆನು. ೬೫

कृष्णवेण्यामनेकानि प्राधान्यादष्टलिंगकम् ।
वाराणस्यां यथोंकार कृत्तिवासकपर्दिनः ॥ ६६ ॥

ಕೃಷ್ಣವೇಣಿಯಲ್ಲಿ ಅನೇಕ ಲಿಂಗಗಳು ಇರುವವು. ಅವುಗಳಲ್ಲಿ ಪ್ರಧಾನವಾದವುಗಳು ಎಂಟು ಲಿಂಗಗಳು ಮಾತ್ರ. ಹೇಗೆ ವಾರಾಣಸಿಯಲ್ಲಿ ಓಂಕಾರ, ಕೃತ್ತಿವಾಸ, ಕಪರ್ದಿ ಪ್ರಧಾನವೋ ಹಾಗೆ. ೬೬

विश्वेश मध्यमेशौ-च-लिंगान्येतानि भो द्विजाः ।
पंचलिंगात्मकान्यत्र पंचभूतानि भारतः ॥ ६७ ॥

ಭೋ ಬ್ರಾಹ್ಮಣರೇ ! ವಿಶ್ವೇಶ, ಮಧ್ಯಮೇಶ, ಪಂಚಲಿಂಗಗಳೂ, ಪಂಚಲಿಂಗಾತ್ಮಕವಾಗಿ ಪಂಚಭೂತಾತ್ಮಕವಾಗಿ ಇರುವವು. ೬೭

अमृतो यज्ञनामार्को रामेशः शंकरः शशी ।
लिंगानामष्टकं चैतत्स्मृतं सर्वाघनाशनम् ॥ ६८ ॥

ಅಮೃತ, ಯಜ್ಞ, ನಾಮ, ಅರ್ಕ, ರಾಮ, ಈಶ, ಶಂಕರ, ಶಶೀ ಹೀಗೆ ಎಂಟು ಲಿಂಗಗಳನ್ನು ಸ್ಮರಣ ಮಾಡತಕ್ಕವರ ಎಲ್ಲ ಪಾಪಗಳೂ ನಾಶವಾಗುವವು. ೬೮

शिवलोकप्रदं नृणां अर्चनान्मुक्तिदायकम् ।
अष्टानां चैव लिंगानां माहात्म्यं समुदाहृतम् ॥ ६९ ॥

ಆ ಮನುಷ್ಯರಿಗೆ ಶಿವಲೋಕವನ್ನು ಕೊಡುವದು. ಪೂಜಿಸಿದರೆ ಮುಕ್ತಿಯಾಗುವದು. ಹೀಗೆ ಎಂಟು ಲಿಂಗಗಳ ಮಹಾತ್ಮ್ಯವನ್ನು ಉದಾಹರಿಸಿರುವೆವು. ೬೯

ಕ್ಷೇತ್ರ ಪ್ರದಕ್ಷಿಣ ಹಾಕಿದರೆ ಭೂಪ್ರದಕ್ಷಿಣ ಮಾಡಿದ ಫಲವು ಬರುವದು. ಈ ಮನುಷ್ಯರು ಎಲ್ಲಿ ಇರುವರೋ ಅಲ್ಲೆ ಸ್ವತಃ ಶಂಕರರು ಇರುವರು. ೭೦

लिगपंचकमध्यात् प्राक् धनुषां च शतद्वयम् ।
रुद्रपादौ स्थितौ दृष्ट्वा पुमान्मुच्येत संसृतेः ॥ ७२ ॥

ಪಂಚಲಿಂಗಗಳ ಮುಂದೆ ೨೦೦ ದನುಷ್ಯದ ಅಳತೆಯ ಮೇಲೆ ರುದ್ರದೇವರ ಎರಡು ಪಾದಗಳು ಇರುವವು. ಆ ಪಾದಗಳ ದರ್ಶನ ಪಡೆದ ಮನುಷ್ಯರು ಸಂಸಾರದಿಂದ ಮುಕ್ತರಾಗುವರು. ೭೧

रुद्रः कपाली तीर्थानि चरन्ब्रम्ह कपालधृक् ।
तत्र स्थित्वार्चयद्देवं पंचलिंगमयं शिवम् ॥ ७३ ॥

ರುದ್ರದೇವರು ಕೈಯಲ್ಲಿ ಕಪಾಲವನ್ನು ಹಿಡಿದವರಾದ ಕಾರಣ ಕಪಾಲಿ ತೀರ್ಥವೆಂದು ಪ್ರಸಿದ್ಧವಿದೆ. ಅಲ್ಲಿಯೇ ಇದ್ದುಕೊಂಡು ಪಂಚಲಿಂಗ ಮಯನಾದ ಶಿವನನ್ನು ಪೂಜಿಸಬೇಕು. ೭೨

लिगं प्रत्यङ्मुखौ पादौ स्थितौ मुक्तिप्रदौ द्विजाः ।
जगद्धितार्थं विन्यस्तौ सर्वपापहरौ शुभौ ॥ ७४ ॥

ಭೋ ಬ್ರಾಹ್ಮಣರೇ ! ಆ ಲಿಂಗವು ಪಶ್ಚಿಮಕ್ಕೆ ಮುಖ ಮಾಡಿ ಕೊಂಡಿರುವದು. ಅದು ಮುಕ್ತಿ ಪ್ರದವಾಗಿದೆ. ಜಗತ್ತಿನ ಹಿತದ ಸಲುವಾಗಿ ಸರ್ವ ಪಾಪವನ್ನು ಹರಣ ಮಾಡುವವರಗೋಸ್ಕರ ಶುಭದ ಸಲುವಾಗಿ ವಿಸ್ತಾರ ಮಾಡಿ ಇಟ್ಟಿರುವರು. ೭೪

पिंडप्रदानं तत्रैव कुर्याद्भक्तिसमन्वितः ।
दातुश्च तत्पितृणां च सुदुर्लभ गतिप्रदम् ॥ ७५ ॥

ಅಲ್ಲಿ ಭಕ್ತಿಪೂರ್ವಕವಾಗಿ ಯಾರು ಪಿಂಡದಾನ ಮಾಡುವರೋ, ಪಿಂಡದಾನ ಮಾಡತಕ್ಕವರಿಗೂ ಅವರ ಪಿತೃಗಳಿಗೂ ಉತ್ತಮವಾದ ಗತಿ ಸಿಗುವದು. ೭೫

त्रिरात्रं संगमे तिष्ठन मुच्यते सर्वपातकैः ।

संवत्सरं तु निवसन् शिवसालोक्यमाप्नुयात् ।
तत्रैव मरणान्मोक्षं नरः प्राप्नोत्यसंशयः ॥ ७७ ॥

ಒಂದು ವರ್ಷ ಪರ್ಯಂತರ ಇರುವವರು ಶಿವಸಾಲೋಕ್ಯವನ್ನೇ ಪಡೆಯುವರು. ಅಲ್ಲಿಯೇ ಮರಣವನ್ನು ಪಡೆಯುವವರು, ನಿಃಸಂಶಯವಾಗಿ ಮೋಕ್ಷವನ್ನು ಹೊಂದುವರು. ೭೭

श्रुत्वाऽध्यायमिमं पुण्यं श्रावयेद्वा समाहितः ।
सर्वपापविनिर्मुक्तो गतिं प्राप्नोति दुर्लभाम् ॥ ७८ ॥

ಸಮಾಧಾನ ಮನಃಸ್ಸಿನಿಂದ ಯಾರು ಈ ಅಧ್ಯಾಯವನ್ನು ಶ್ರವಣಮಾಡುವರೋ, ಶ್ರವಣ ಮಾಡಿಸುವರೋ ಅವರು ಸಕಲ ಪಾಪಗಳಿಂದ ಮುಕ್ತರಾಗಿ ದುರ್ಲಭವಾದ ಗತಿಯನ್ನು ಪಡೆಯುವರು. ೭೮

॥ इति श्रीस्कांदे कृष्णामाहात्म्ये त्रिपंचाशत्तमोऽध्यायः ॥

❀ ❀ ❀

## ॥ अथ चतुःपंचाशत्तमोऽध्यायः ॥

स्कंद उवाच –

अन्यत्तीर्थं प्रवक्ष्यामि सर्वपापहरं शुभम् ।
ऋणमोचनसंज्ञं तु जन्मांतरकृताघहत् ॥ १ ॥

**ಶೂರಪಾಲಯ ಕ್ಷೇತ್ರವರ್ಣನೆ**

ಸಕಲಪಾಪವನ್ನೂ ಪರಿಹಾರಮಾಡಿ, ಶುಭವನ್ನು ಉಂಟುಮಾಡಿ ಕೊಡತಕ್ಕ ಬೇರೆ ತೀರ್ಥವನ್ನು ಹೇಳುವೆನು. ಅದರ ಹೆಸರು ಋಣಮೋಚನತೀರ್ಥ. ಜನ್ಮಾಂತರದಲ್ಲಿ ಮಾಡಿದ ಪಾಪವನ್ನೂ ಪರಿಹಾರ ಮಾಡುವಂತಹದು. ೧

ऋणैस्त्रिभिः परिवृत्तः पुरुषो जायते किल ।
[illegible] ॥ २ ॥

ಆ ಋಣಮೋಚನತೀರ್ಥವೇ ಶೂರ್ಪಾಲಯಕ್ಷೇತ್ರವು. ಪರಮ ಪವಿತ್ರವು. ಪಾಪನಾಶಕರವು. ಕೃಷ್ಣವೇಣೀತೀರದ ಶೂರ್ಪಾಲಯಕ್ಷೇತ್ರದಲ್ಲಿ ಇರುವ ಅಶ್ವತ್ಥ ವೃಕ್ಷವು ವಿಷ್ಣುವಿನ ರೂಪವುಳ್ಳದ್ದಾಗಿರುವದು. ೩

तद्वामभागतीरे च अस्थीं त्यक्त्वा तु सद्गतिम् ।
त्रिःसप्तकुलउद्धारे शूर्पाले तीर्थरूपिणि ॥ ४ ॥

ಆ ಶೂರ್ಪಾಲಯದ ಕೃಷ್ಣವೇಣೀತೀರದ ವಾಮಭಾಗ ಎಡದಂಡೆಯಲ್ಲಿ ಅಸ್ಥಿಯನ್ನು ಹಾಕಿದರೆ ಅವರಿಗೆ ಸದ್ಗತಿಯಾಗುವದು. ತೀರ್ಥರೂಪಿಣಿಯಾದ ಶೂರ್ಪಾಲಯಕ್ಷೇತ್ರವು ಇಪ್ಪತ್ತೊಂದು ಕುಲವನ್ನು ಉದ್ಧಾರ ಮಾಡುವಂತಹದು. ೪

ब्राम्हणाः कृष्णरूपाश्च लक्ष्मीरूपा यतस्त्रियः ।
तत्र गत्वा तु तौ पूज्य वैकुंठं वसते चिरम् ॥ ५ ॥

ಶೂರ್ಪಾಲಯಕ್ಷೇತ್ರಸ್ಥ ಬ್ರಾಹ್ಮಣರು ಕೃಷ್ಣರೂಪ (ಕಪ್ಪು ಬಣ್ಣ) ಉಳ್ಳವರು. ಅಲ್ಲಿಯ ಸ್ತ್ರೀಯರು ಲಕ್ಷ್ಮೀರೂಪ ಉಳ್ಳವರು. ಶೂರಪಾಲಯಕ್ಕೆ ಹೋಗಿ ಬ್ರಾಹ್ಮಣ ಸುವಾಸಿನಿಯರನ್ನು ಪೂಜೆಮಾಡಿದರೆ ಅಖಂಡವಾಗಿ ವೈಕುಂಠದಲ್ಲಿ ವಾಸ ಮಾಡುವರು. ೫

दानं स्नानं च यत्तत्र तदानंत्याय कल्पते ।
ये वसंति त्रिरात्रं ते अश्वमेधादि भागिनः ॥ ६ ॥

ಅಲ್ಲಿ ದಾನ, ಸ್ನಾನ ಮಾಡಿದ್ದು ಅನಂತ ಫಲಪ್ರದವಾಗುವದು. ಮೂರು ದಿವಸ ಅಲ್ಲಿ ವಾಸಮಾಡುವವರು ಅಶ್ವಮೇಧಾದಿ ಯಜ್ಞದ ಫಲವನ್ನು ಪಡೆಯುವರು. ೬

तत्तीरेऽस्थीनि त्यक्तानि षण्मासाच्छंखरूपताम् ।
शूर्पाले संगमे चैव छायायां श्रीगिरौ तथा ॥ ७ ॥

सर्वत्र सुलभा कृष्णा चतुस्थानेषु दुर्लभा ।
अश्वत्थरूपी विष्णुश्च विष्णुतीर्थं प्रचक्षते ॥ ८ ॥

ऋणापहरणं यो वै अकुर्वान्निह चेन्मृतः ॥ ९ ॥

ಆ ವಿಷ್ಣುತೀರ್ಥ ಹತ್ತು ಬಾಣದ ಅಳತೆಯಮೇಲೆ ಋಣಮೋಚನ ತೀರ್ಥ ವಿರುವದು. ಸಾಲ ತಗೊಂಡು ತಿರುಗಿ ಸಾಲ ಮುಟ್ಟಿಸದೆ ಮೃತರಾದವರು, ಋಣಾಪಹಾರಿಗಳು. ೯.

निगृह्यते द्विजोत्यर्थं परलोके न संशयः ।
ऋणापहरणं चैव सुकरं चात्र संगमे ॥ १० ॥

ಋಣಾಪಹಾರಿಗಳಾದ ಬ್ರಾಹ್ಮಣರು, ಪರಲೋಕದಲ್ಲಿ ನಿಃಸಂಶಯವಾಗಿ ಬಂಧಿತನಾಗುವನು. ಋಣಾಪಹರಣವು ಬಹಳ ಸುಕರ. ಆದರೆ. ೧೦

कर्म चैवास्य जीवस्य यदेव सुकरं परम् ।
अज्ञानालस्यलोभाद्यैर्देवविघ्नैरथापि वा ॥ ११ ॥

ಈ ಜೀವನಿಗೆ ಕರ್ಮವು ಯಾವದು ? ಸುಕರ ಪರಮವೆಂದರೆ ಅಜ್ಞಾನ, ಆಲಸ್ಯ, ಲೋಭಾದಿಗಳು ದೇವಕಾರ್ಯಗಳಿಗೆ ವಿಘ್ನ ಉಂಟುಮಾಡುವದು. ೧೧

एतत्कथं च नाकुर्वन् किं कुर्यात्करुणानिधे ।

ईश्वर उवाच –

साधु वत्स त्वया पृष्टं घृणया भवदुःखिनः ॥ १२ ॥

ಹೇ ಕರುಣಾನಿಧೀ ! ಈ ಅಕರ್ಮಗಳು ಆಗದಂತೆ ಏನು ಮಾಡಲಿ ?

ಈಶ್ವರನು ಹೇಳಿದನು –

ಹೇ ವತ್ಸನೇ ! ನೀನು ಯೋಗ್ಯವಾದದ್ದನ್ನೇ ಕೇಳಿದಿ. ದುಃಖಿಗಳ ಮೇಲೆ ನೀನು ಬಹಳ ದಯಾ ಉಳ್ಳವನು. ೧೨

ऋणेभ्यो बिभ्यतस्त्राणमस्ति साधो श्रृणुश्व तत् ।
सर्वस्य पापजातस्य नश्छेदिच्छते हतिम् ॥ १३ ॥

ಇರುವ ಸ್ಥಳವು. ೧೪

क्षेत्रं विमुक्तिदं प्राहुरंतरा सह्यसागरम्।
ग्रामे वा यदि वारण्ये तीर्थे वा यत्र कुत्र वा ॥ १५ ॥

ಮುಕ್ತಿ ಪ್ರದವಾದ ಕ್ಷೇತ್ರವೆಂದು ಜ್ಞಾನಿಗಳು ಹೇಳುವರು. ಅದು ಗ್ರಾಮವಿರಲಿ, ಅರಣ್ಯವಿರಲಿ, ತೀರ್ಥವಿರಲಿ, ಏನೇ ಇರಲಿ, ಅದು ಮಹಾ ಕ್ಷೇತ್ರವೇ. ೧೫

कृष्णावेणांभसि स्नातो वाजिमेधफलं लभेत्।
षष्ठिवर्षसहस्राणि भागीरथ्यावगाहने ॥ १६ ॥

ಭಾಗೀರಥಿ ತೀರದಲ್ಲಿ (೬೦,೦೦೦) ಅರವತ್ತು ಸಹಸ್ರವರ್ಷ ಅವಗಾಹನ ಸ್ನಾನ ಮಾಡಿದರೆ ಯಾವ ಫಲ ಬರಬೇಕೋ ಆ ಫಲವು ಕೃಷ್ಣವೇಣಿಯಲ್ಲಿ ಒಂದೇ ದಿವಸ ಸ್ನಾನ ಮಾಡಿದರೆ ಬರುವದಲ್ಲದೇ, ಅಶ್ವಮೇಧ ಯಜ್ಞದ ಫಲವೂ ಬರುವದು. ೧೬

कृष्णावेण्यां सकृत्स्नानं समं कन्यागते गुरौ।
कन्यागते गुरौ सोमवारे विष्णोः शुभे दिने ॥ १७ ॥

ಕೃಷ್ಣವೇಣಿಯಲ್ಲಿ ಒಂದೇ ಸಲ ಸ್ನಾನಮಾಡಿದರೆ ಕನ್ಯಾಗತದಲ್ಲಿ ಸ್ನಾನಮಾಡಿದ ಫಲ ಬರುವದು. ಕನ್ಯಾರಾಶಿಗೆ ಗುರು ಬಂದಾಗ (ಕನ್ಯಾಗತದಲ್ಲಿ) ಸೋಮವಾರ ದಿನವು ವಿಷ್ಣುವಿನ ಶುಭದಾಯಕವಾದ ದಿನವು. ೧೭

वेणायां प्लावनं नृणां कोटिजन्माघनाशनम्।
कृष्णायां प्लवनं श्राद्धं ऋक्षे चैव तु वैष्णवे ॥ १८ ॥

ವೇಣಾದಲ್ಲಿ ಮುಳುಗಿ ಸ್ನಾನ ಮಾಡಿದರೆ ಮನುಷ್ಯರ ಕೋಟಿಜನ್ಮದ ಪಾಪಗಳು ನಾಶವಾಗುವವು. ಕೃಷ್ಣಾದಲ್ಲಿ ಮುಳುಗಿ ಸ್ನಾನ ಮಾಡಿ, ಶ್ರಾದ್ಧ ಮಾಡಿದರೆ, ವಿಷ್ಣುಭಕ್ತರಾಗಿ ಬ್ರಹ್ಮಜ್ಞಾನಿಗಳಾಗುವರು. ೧೮

अत्राप्युदाहरंतीममितिहासं पुरातनम् ॥ २० ॥

ಸ್ನಾನಮಾತ್ರದಿಂದ ಎಲ್ಲರ ಪಾಪಗಳ ಕುಲವೇ ನಾಶವಾಗುವದು. ಈ ವಿಷಯದಲ್ಲಿ ಪ್ರಾಚೀನವಾದ ಒಂದು ಇತಿಹಾಸವಿರುವದು. ೨೦

दाल्भ्यो नाम द्विजः कश्चित् आतिथ्यं कृतवान्पुरा ।
गृहीत्वाऽन्यगृहाच्चान्नं ददावतिथये ततः ॥ २१ ॥

ಪೂರ್ವದಲ್ಲಿ ದಾಲ್ಭ್ಯನೆಂಬ ಒಬ್ಬ ಬ್ರಾಹ್ಮಣನು ಅತಿಥಿಸತ್ಕಾರ ಮಾಡಿದನು. ಒಬ್ಬರ ಮನೆಯಿಂದ ಅನ್ನ ತೆಗೆದುಕೊಂಡು ಅತಿಥಿಗಳಿಗೆ ಕೊಟ್ಟನು. ೨೧

तदेतद्विस्मृतं तेन ऋणं सः पंचतां ययौ ।
कालेन नोदितश्चापि तिर्यक्त्वं प्रतिपद्य सः ॥ २२ ॥

ತಿರುಗಿ ಆ ಅನ್ನವನ್ನು ಮುಟ್ಟಿಸಲಾರದೇ ಆ ಋಣವನ್ನು ಮರೆತನು ಮತ್ತು ಮೃತನಾದನು. ಅಷ್ಟರಿಂದಲೇನೇ ಋಣಮುಕ್ತನಾಗದೇ ಕ್ಷುದ್ರ ಪ್ರಾಣಿಯಾಗಿ ಹುಟ್ಟಿದನು. ೨೨

सह्याचले ततः शून्ये सर्वतः कंटकावृते ।
निर्जने व्याघ्रभूयिष्ठे श्रृगालः स चचार ह ॥ २३ ॥

ಸಹ್ಯಪರ್ವತದಲ್ಲಿ (ಸಹ್ಯಾದ್ರಿ) ನಿರ್ಜನ ಪ್ರದೇಶದಲ್ಲಿ ಕಂಟಕಗಳಿಂದ ತುಂಬಿದ ಅರಣ್ಯದಲ್ಲಿ ಹುಲಿಗಳೇ ಮುಂತಾದ ಕ್ರೂರ ಪ್ರಾಣಿಗಳು ತುಂಬಿದ ಸ್ಥಳದಲ್ಲಿ ನರಿಯಾಗಿ ಹುಟ್ಟಿದನು. ೨೩

पुनर्वृकत्वमापन्नः पुनश्चैव श्रृगालताम् ।
पूर्वजातिं स्मरत्येव तपोमाहात्म्यकारणात् ॥ २४ ॥

ಮತ್ತೇ ತೋಳ ಆಗಿ ಹುಟ್ಟಿದನು. ಮತ್ತೇ ನರಿಯಾಗಿ ಹುಟ್ಟಿದನು. ಪೂರ್ವಜನ್ಮದಲ್ಲಿ ಮಾಡಿದ ತಪಃಸಿನ ಮಹಿಮೆಯಿಂದ ಪೂರ್ವಜನ್ಮದ ಸ್ಮರಣವಾಯಿತು. ೨೪

ಆ ದಾಲ್ಭ್ಯನು ಪೂರ್ವಜನ್ಮದಲ್ಲಿ ಮಾಡಿದ ಕರ್ಮವನ್ನು ಸರ್ವವನ್ನೂ ತಿಳಿದು ಕೊಂಡು ಆ ಗೌತಮ ಋಷಿಗಳು ಅವನಿಗೆ ಜನ್ಮಾಂತರದ ಪಾಪನಿವೃತ್ತಿಯ ಉಪಾಯವನ್ನು ಹೇಳಿದರು. ೨೬

गौतम उवाच –

दाल्भ्यस्त्वमसि धर्मेण ऋणसंबंधकारणात् ।
तिर्यक्त्वं दुःखबहुलं प्राप्तवानसि सुव्रत ॥ २७ ॥

ನೀನು ದಾಲ್ಭ್ಯನೆಂಬ ಬ್ರಾಹ್ಮಣನು. ಧರ್ಮದಿಂದ ಇರುವಿ. ಆದರೆ ಋಣಸಂಬಂಧಿ ಕಾರಣದಿಂದ ಕ್ಷುದ್ರ ಪ್ರಾಣಿಯಾಗಿ ಬಹಳ ದುಃಖವನ್ನು ಹೊಂದಿರುವಿ. ೨೭

दाल्भ्य उवाच –

भगवन् किं मया कार्यं कथं जानामि निष्कृतिम् ।
यद्यस्ति मयि कारुण्यं कथयस्व निवृत्तये ॥ २८ ॥

ಪೂಜ್ಯರೇ ! ನಾನೇನು ಮಾಡಲಿ ? ಅದರ ಪರಿಹಾರವನ್ನು ಹೇಗೆ ತಿಳಿದುಕೊಳ್ಳಲಿ ? ನನ್ನ ಮೇಲೆ ನಿಮಗೆ ಅಂತಃಕರಣವಿದ್ದರೆ ಪಾಪ ಪರಿಹಾರದ ಉಪಾಯವನ್ನು ಹೇಳಿರಿ. ೨೮

गौतम उवाच –

देवर्षिभिः सदा पूज्या त्रैलोक्ये बीजकारिणी ।
कल्पकोटिकृतं पापं कृष्णा हंति क्षणाद्यतः ॥ २९ ॥

ಕೋಟ್ಯಾವಧಿ ಕಲ್ಪಗಳಲ್ಲಿ ಮಾಡಿದ ಪಾಪಗಳನ್ನು ಒಂದೇ ಕ್ಷಣದಲ್ಲಿ ಪರಿಹಾರ ಮಾಡುವವರಲ್ಲಿ ಬೀಜಭೂತಳಾಗಿರುವ ಆ ಕೃಷ್ಣವೇಣಿಯನ್ನು ದೇವರ್ಷಿಗಳು ಯಾವಾಗಲೂ ಪೂಜಿಸುತ್ತಾರೆ. ೨೯

तत्स्नानादचिरादेव मनुष्यत्वं भविष्यति ।
ततो गत्वा यत्र चोक्तं तत्र स्नानं समाचर ॥ ३० ॥

अस्यां तु कृष्णवेणायां स्नानसाधनमुक्तवान् ॥ ३१ ॥

ಸಕಲ ಪಾಪನಿವೃತ್ತಿಗೋಸ್ಕರ ಗೌತಮ ಋಷಿಗಳು ದಾಲ್ಭ್ಯನಿಗೆ ಹೇಳಿದರು. ಈ ಕೃಷ್ಣವೇಣಿಯಲ್ಲಿ ಸ್ನಾನ ಮಾಡುವದೇ ಸಾಧನವೆಂದು ಹೇಳಿದರು. ೩೧

ईश्वर उवाच –

ಈಶ್ವರ ಉವಾಚ –

दाल्भ्यगौतमसंवादं पावनं पुण्यवर्धनम् ।
वदाम्यहं भवत्प्रीत्या श्रृणु पुत्र षडानन ॥ ३२ ॥

ಧಾಲ್ಭ್ಯರಿಗೂ, ಗೌತಮರಿಗೂ ಆದ ಸಂವಾದವು ಬಹಳ ಪಾವನತಮವಾದದ್ದು. ಪುಣ್ಯವೃದ್ಧಿದಾಯಕವು. ಹೇ ಷಡಾನನ ಪುತ್ರನೇ !ನಿನ್ನ ಮೇಲೆ ಪ್ರೀತಿಯಿಂದ ಹೇಳುವೆನು. ಕೇಳು. ೩೨

गत्वा तु कृष्णवेणायां कुत्र स्नानं समाचरेत् ।
ब्रूहि त्वमिति पृष्टः सन्त तः प्रोवाच गौतमः ॥ ३३ ॥

ಕೃಷ್ಣವೇಣೀತೀರಕ್ಕೆ ಹೋದ ಮೇಲೆ ಎಲ್ಲಿ ಸ್ನಾನ ಮಾಡುವ ಸ್ಥಳವಿರುವದು ನೀವು ಹೇಳಿರಿ. ಎಂದು ಪ್ರಶ್ನೆ ಮಾಡಲಾಗಿ ಗೌತಮರು ಉತ್ತರ ಕೊಟ್ಟರು. ೩೩

गौतम उवाच –

कृष्णवेणा नदी नाम यत्र यत्र च गच्छति ।
स्नानस्य तत्र तत्रैव सर्वदानफलं लभेत् ॥ ३४ ॥

ಕಷ್ಣವೇಣಿ ನದಿಯು ಎಲ್ಲಿ ಎಲ್ಲಿ ಪ್ರವಹಿಸುವದೋ, ಅಲ್ಲಿ ಅಲ್ಲಿ ಸ್ನಾನ ಮಾಡುವದು. ಸಕಲ ದಾನದ ಫಲವು ಬರುವದು. ೩೪

पौर्णिमास्याममावास्यामष्टम्यां चंद्रसूर्ययोः ।
ग्रहणे स्नानमात्रेण गोसहस्रफलं लभेत् ॥ ३५ ॥

ಪೌರ್ಣಿಮೆ, ಅಮಾವಾಸ್ಯ, ಅಷ್ಟಮಿ, ಚಂದ್ರ-ಸೂರ್ಯಗ್ರಹಣ, ಪರ್ವಕಾಲ

विद्यानामुत्तमा वेदा वर्णानां ब्राह्मणः परः ॥ ३७ ॥

ಎಲ್ಲ ನದಿಗಳಲ್ಲಿ ಉತ್ತಮವಾದದ್ದು ವೇಣಾನದಿ. ದೇವತೆಗಳಲ್ಲಿ ಉತ್ತಮನು ಶ್ರೀಹರಿ. ವಿದ್ಯೆಗಳಲ್ಲಿ ಉತ್ತಮವಾದದ್ದು ವೇದಗಳು. ಎಲ್ಲ ವರ್ಣಗಳಲ್ಲಿ ಶ್ರೇಷ್ಠವಾದದ್ದು ಬ್ರಾಹ್ಮಣವರ್ಣವು. ೩೭

कृष्णवेणीजलं पीत्वा कीकटेष्वपि यो वसेत्।
गत्वा षण्मासपर्यंतं अदोषस्तं समाश्रयेत् ॥ ३८ ॥

ಗುಡಸಲದಲ್ಲಿ ಇದ್ದು ೬ ತಿಂಗಳ ಪರ್ಯಂತ ಕೃಷ್ಣವೇಣಿ ನದಿಯ ನೀರು ಪ್ರಾಶನ ಮಾಡಿದವರಿಗೆ, ಯಾವ ದೋಷವೂ ತಟ್ಟುವದಿಲ್ಲ. ೩೮

निद्रामात्रं प्रकुर्वंति कृष्णातीराश्रयो द्विजाः।
प्राणिनां ते वरिष्ठा स्युर्लभन्ते तपसः फलम् ॥ ३९ ॥

ಕೃಷ್ಣಾತೀರವನ್ನು ಆಶ್ರಯಿಸಿದವರು ಬ್ರಾಹ್ಮಣರೇ, ಕೇವಲ ನಿದ್ದೆಮಾಡಿದರೆ ಸಾಕು. ಅವರು ಪ್ರಾಣಿಗಳಲ್ಲಿ ಶ್ರೇಷ್ಠರಾಗಿ ತಪಃಸಿನ ಫಲವನ್ನು ಪಡೆಯುವರು. ೩೯

नदीनामादिभूता सा कृष्णवेणी द्विजोत्तमाः।
ये पिबंति च तत्तोयं नूनं ते पुण्यभागिनः ॥ ४० ॥

ಹೇ ಬ್ರಾಹ್ಮಣೋತ್ತಮರೇ! ಎಲ್ಲ ನದಿಗಳಲ್ಲಿ ಪ್ರಥಮವಾದದ್ದು ಕೃಷ್ಣವೇಣೀ ನದಿಯು. ಆದರ ನೀರು ಕುಡಿದವರು ನಿಶ್ಚಯವಾಗಿಯೂ ಪುಣ್ಯಭಾಗಿಗಳು. ೪೦

वक्ष्यामि श्रृणु दाल्भ्य त्वं तव पापनिवृत्तये।
मलापहारिणी नाम नदी सह्यसमुद्गता ॥ ४१ ॥

ಹೇ ದಾಲ್ಭ್ಯನೇ! ಕೇಳು, ನಿನ್ನ ಪಾಪನಿವೃತ್ತಿಯಾಗಬೇಕಾದರೆ, ಸಹ್ಯಾದ್ರಿಯಿಂದ ಉಗಮವಾಗಿ ಬರತಕ್ಕ ಮಲಾಪಹಾರಿಣೀ ಎಂಬ ನದಿಯು. ೪೧

निर्मिता सा च कल्याणी ब्रह्मणा शापशांतये।
तस्यास्तु सलिलं सद्यः किल्बिषं हरति क्षणात् ॥ ४२ ॥

ಹೋಗುವರು. ಆದ ಕಾರಣ ನೀನು ಕೃಷ್ಣವೇಣಿ ಮಲಾಪಹಾರಿಣೀ ಈ ಎರಡರ ಸಂಗಮಕ್ಕೆ ಹೋಗು. ಬಹಳ ಪವಿತ್ರವೂ ಪಾಪನಾಶಕಾರವೂ ಇರುವದು. ೪೪

रुद्रं पशुपतिं स्थाणुं तत्र स्नात्वा नमस्कुरु ।
मृगरूपं परित्यज्य ऋषित्वं प्राप्यसे चिरम् ॥ ४४ ॥

ಆ ಸಂಗಮದಲ್ಲಿ ಸ್ನಾನ ಮಾಡಿ, ಆ ಪಶುಪತಿ ರುದ್ರ ದೇವರನ್ನು ನಮಸ್ಕರಿಸು. ಮೃಗರೂಪವನ್ನು ಬಿಟ್ಟು ಬೇಗನೇ ಋಷಿಪದವಿಯನ್ನು ಪಡೆಯುವಿ. ೪೪

यदाकदाचिद्ये मर्त्याः कीर्तयंति च संगमम् ।
स्मरंति परमं स्थानं नूनं ते मोक्षभागिनः ॥ ४५ ॥

ಎಂದಾದರೊಂದು ದಿವಸ ಮನುಷ್ಯರು ಈ ಕೃಷ್ಣಾ-ಮಲಾಪಹಾ ಸಂಗಮವನ್ನು ಕೀರ್ತನೆ ಮಾಡಿದರೆ ಅಥವಾ ಸ್ಮರಣ ಮಾಡಿದರೆ ಪರಮಶ್ರೇಷ್ಠವಾದ ಸ್ಥಾನವನ್ನು ಪಡೆದು ಮೋಕ್ಷಭಾಗಿಗಳಾಗುವರು. ೪೫

इति देवाश्च पितरो गायंतो सततं दिवि ।
तस्मादागत्य तत्तीर्थं पापिनां दुर्मनस्विनाम् ॥ ४६ ॥

ಹೀಗೆ ದೇವತೆಗಳೂ, ಪಿತೃಗಳೂ, ದೇವಲೋಕದಲ್ಲಿ ಸತತವಾಗಿ ಗಾಯನ ಮಾಡುತ್ತಿರುವರು. ಆದ ಕಾರಣ ಅಲ್ಲಿಗೆ ಪಾಪಿಗಳೂ ದುಷ್ಟಬುದ್ಧಿಯವರೂ ಬಂದು, ೪೬

दानरूपेण तत्रैव तिलांशं यः प्रयच्छति ।
मेरुतुल्यं फलं प्राप्य तदंते मुक्तिमाप्नुयात् ॥ ४७ ॥

ದಾನರೂಪದಿಂದ ಒಂದು ಎಳ್ಳಿನ ಅಂಶದಷ್ಟಾದರೂ ಕೊಟ್ಟರೆ ಅದು ಮೇರುಪರ್ವತದ ಸಮಾನ ದಾನ ಮಾಡಿದ ಫಲ ಬಂದು ಕೊನೆಗೆ ಮೋಕ್ಷವೂ ಲಭಿಸುವದು. ೪೭

तत्र पिंडप्रदानेन मुक्तिरेव न संशयः ।

ಭಗೀರಥನೂ, ರಾಮಚಂದ್ರನೂ, ಮಾಂಧಾತರಾಜನೂ, ಮುಂತಾದವರೂ. ೪೯

असितो देवलश्चैव दत्तात्रेयपुरोगमाः ।
तत्र स्नात्वा तपः कृत्वा मुक्तिज्ञानपदे स्थिताः ॥ ५० ॥

ಅಸಿತ ಋಷಿಗಳೂ, ದೇವಲರೂ, ದತ್ತಾತ್ರೇಯನೇ ಮುಂತಾದವರೂ, ಆ ಸಂಗಮದಲ್ಲಿ ಸ್ನಾನ ಮಾಡಿ, ತಪಃಸು ಮಾಡಿ, ಮೋಕ್ಷಪ್ರದವಾದ ಜ್ಞಾನದ ಸ್ಥಾನದಲ್ಲಿ ಇರುವರು. ೫೦

रामः पुरा जगन्नाथो भार्गवः क्षत्रियांतकः ।
तत्र कृत्वा तपो घोरं पापस्यांतं प्रपन्नवान् ॥ ५१ ॥

ಪೂರ್ವದಲ್ಲಿ ರಾಮದೇವರು, ಜಗನ್ನಾಥನು, ಕ್ಷತ್ರಿಯರಿಗೆ ಅಂತಕರಾದ ಪರಶುರಾಮದೇವರು, ಅಲ್ಲಿ ಘೋರವಾದ ತಪಃಸುಮಾಡಿ, ಪಾಪದಿಂದ ಮುಕ್ತರಾದವರು. ೫೧

शूर्पालश्च महेन्द्रश्च संगमस्त्रयमुत्तमम् ।
त्रिषु स्थानेषु देवेशः समस्तिष्ठति सर्वदा ॥ ५२ ॥

ಶೂರ್ಪಾಲಯವೂ, ಮಹೇಂದ್ರ ಪರ್ವತವೂ, ಸಂಗಮವೂ, ಈ ಮೂರು ಬಹಳ ಉತ್ತಮ ಸ್ಥಳವು. ಈ ಸ್ಥಾನತ್ರಯಗಳಲ್ಲಿ ಪರಮಾತ್ಮನು ಯಾವಾಗಲೂ ಸಮನಾಗಿ ಇರುವನು. ೫೨

प्रातःकाले तु शूर्पाले त्वपराह्णे च संगमे ।
सायं महेंद्रे वसति रामः क्षत्रकुलांतकः ॥ ५३ ॥

ಪ್ರಾತಃಕಾಲದಲ್ಲಿ ಶೂರಪಾಲಯದಲ್ಲಿ, ಅಪರಾಹ್ನಕಾಲದಲ್ಲಿ ಸಂಗಮದಲ್ಲಿ, ಮಹೇಂದ್ರ ಪರ್ವತದಲ್ಲಿ ಸಾಯಂಕಾಲದಲ್ಲಿ, ಕ್ಷತ್ರಿಯ ಕುಲಕ್ಕೆ ಅಂತಕರಾದ ಪರಶುರಾಮದೇವರು ವಾಸಮಾಡುವರು. ೫೩

अत्र त्रयं महापुण्यं रामस्यैवाश्रमत्रयम् ।
पृथिव्यामंतरिक्षे च यानि तीर्थानि सन्ति वै ॥ ५४ ॥

ವಿರುವವು. ಅಲ್ಲಿ ಸ್ನಾನ ಮಾಡಿ, ನಮಸ್ಕಾರ ಮಾಡಿ, ನಾಮಸ್ಮರಣ ಮಾಡಿದರೆ ಶಾಶ್ವತವಾದ ರುದ್ರದೇವರ ಸ್ಥಾನಕ್ಕೆ ಹೋಗುವರು. ೫೫

माघमासे नरः स्नात्वा कार्तिके मासि सुव्रतः ।
शिवस्य सन्निधौ स्तोत्रं यः पठेन्नियतात्मवान् ॥ ५६ ॥

ಯಾವ ಮನುಷ್ಯನು ಮಾಘ ಮಾಸದಲ್ಲಿ ಸ್ನಾನಮಾಡಿ ಕಾರ್ತಿಕಮಾಸದಲ್ಲಿ ವ್ರತಸ್ಥನಾಗಿ ರುದ್ರದೇವರ ಸನ್ನಿಧಾನದಲ್ಲಿ ಇಂದ್ರಿಯನಿಗ್ರಹದಿಂದ ಈ ಸ್ತೋತ್ರವನ್ನು ಪಠಣ ಮಾಡುವರೋ. ೫೬

सोऽपि ब्रह्मपरं ज्ञात्वा गतिमाप्नोति शाश्वतीम् ।

दाल्भ्य उवाच –

भगवन्मम कारुण्यात् स्तोत्रं वै वक्तुमर्हति ॥ ५७ ॥

ಅವರು ಬ್ರಹ್ಮಜ್ಞಾನಿಗಳಾಗಿ ಶಾಶ್ವತವಾದ ಗತಿಯನ್ನು ಪಡೆಯುವರು.

ದಾಲ್ಭ್ಯರು ಅಂದರು –

ಪೂಜ್ಯರೇ ನನ್ನ ಮೇಲೆ ಅಂತಃಕರಣ ಮಾಡಿ ಆ ಸ್ತೋತ್ರವನ್ನು ಹೇಳಿರಿ. ೫೭

ज्ञात्वा तव प्रसादेन गमिष्यामि परां गतिम् ।

गौतम उवाच –

शिवः पशुपतिः स्थाणुः सिंहोऽनन्तो वृषध्वजः ॥ ५८ ॥

ನಿಮ್ಮ ಅನುಗ್ರಹದಿಂದ ಆ ಸ್ತೋತ್ರವನ್ನು ತಿಳಿದುಕೊಂಡು ಪರಮ ಸದ್ಗತಿಗೆ ಹೋಗುವೆನು.

ಗೌತಮನು ಅಂದನು –

ಶಿವ, ಪಶುಪತಿ, ಸ್ಥಾಣು, ಸಿಂಹ, ಅನಂತ, ವೃಷಧ್ವಜ,. ೫೮

वीरभद्रो महादेवः कामहा कुलवर्धनः ।

पद्मनाभः पद्ममूर्तिः दीप्तमान् पार्वतीप्रियः।
ईशः प्रचंडः क्रूराक्षो भूतनाथो जगद्गुरुः ॥ ६१ ॥

ಪದ್ಮನಾಭ, ಪದ್ಮಮೂರ್ತಿ, ದೀಪ್ತಿಮಾನ್, ಪಾರ್ವತೀಪ್ರಿಯ, ಈಶ, ಪ್ರಚಂಡ, ಕ್ರೂರಾಕ್ಷ, ಭೂತನಾಥ, ಜಗದ್ಗುರು. ೬೨

नतोऽस्मि त्वां जगन्नाथ पापं नाशय मेऽव्यय।
इत्येतैर्नामभिः स्तुत्वा दाल्भ्य त्वं मुक्तिमाप्स्यसि ॥ ६२ ॥

ಹೇ ಜಗನ್ನಾಥನೇ ! ನಾಶರಹಿತನೇ, ನಿನಗೆ ನಮಸ್ಕರಿಸುವೆನು. ನನ್ನ ಪಾಪವನ್ನು ನಾಶಮಾಡು. ಈ ನಾಮಗಳಿಂದ, ದಾಲ್ಭ್ಯನೇ ! ಸ್ತೋತ್ರಮಾಡು. ನೀನು ಮುಕ್ತಿಯನ್ನು ಪಡೆಯುವಿ. ೬೨

इत्युक्तः प्रणिपत्यैव प्रहृष्टः प्राप संगमम्।
कृत्वा यथोक्तं तद्भक्त्या दाल्भ्यः प्रापोत्तमां गतिम् ॥ ६३ ॥

ಹೀಗೆ ಹೇಳಿದ್ದು ಕೇಳಿ, ದಾಲ್ಭ್ಯರು ಸಾಷ್ಟಾಂಗ ನಮಸ್ಕಾರಮಾಡಿ, ಸಂತೋಷದಿಂದ ಸಂಗಮಕ್ಕೆ ಬಂದರು. ಇವರು ಹೇಳಿದಂತೆ ಮಾಡಿ ಭಕ್ತಿಯಿಂದ ದಾಲ್ಭ್ಯರು ಉತ್ತಮವಾದ ಗತಿಯನ್ನು ಪಡೆದರು. ೬೩

ततो विद्याबलं दृष्ट्वा तत्रस्था विस्मयं ययुः।
सोऽपि तत्रैव निवसन् स्थित्वा प्राप निजां गतिम् ॥ ६४ ॥

ಆ ವಿದ್ಯಾ ಬಲವನ್ನು ನೋಡಿ ಅಲ್ಲಿಯ ಜನರು ಆಶ್ಚರ್ಯ ಪಟ್ಟರು. ಆ ದಾಲ್ಭ್ಯನೂ ಅಲ್ಲಿಯೇ ವಾಸಮಾಡಿ ಸ್ವರೂಪ ಭೂತವಾದ ಗತಿಯನ್ನು ಪಡೆದನು. ೬೪

नारद उवाच –

इत्यादिमाहात्म्यमचिंत्यमस्याः स्कंदाय दैव्यै च जगाद शंभुः।
श्रुत्वातिभक्त्या तदशेषपापं विधूय मर्त्यः शिवलोकमेति ॥ ६५ ॥

ರುದ್ರದೇವರು ಇತ್ಯಾದಿ ಅಚಿಂತ್ಯ ಅದ್ಭುತವಾದ ಮಹಾತ್ಮ್ಯವನ್ನು ಷಣ್ಮುಖನಿಗೂ,

नाम चतुःपंचाशत्तमोऽध्यायः ॥

❀ ❀ ❀

## ॥ अथ पंचपंचाशत्तमोऽध्यायः ॥

ऋषयः ऊचुः –

अहो माहात्म्यमतुलं प्रसादाद्भवतः श्रुतम् ।
भूयः कथय कारुण्यात् अस्माकं श्रोतुमिच्छताम् ॥ १ ॥

ಏನಾಶ್ಚರ್ಯವು ! ಈ ಕೃಷ್ಣವೇಣೀ ಮಹಾತ್ಮ್ಯವು ಅದ್ಭುತವಾಗಿದೆ. ನಿಮ್ಮ ಪರಮಾನುಗ್ರಹದಿಂದ ಕೇಳಿದೆ. ನಮಗೆ ಇನ್ನೂ ಕೇಳಬೇಕಂತ ಇಚ್ಛೆ ಬಹಳವಿದೆ. ಆದ್ದರಿಂದ ಅಂತಃ ಕರಣ ಮಾಡಿ ಮತ್ತೆ ಮಹಾತ್ಮ್ಯವನ್ನು ಹೇಳಿರಿ. ೧

रामस्तत्र तपश्चक्रे कथं लोकगुरुः प्रभुः ।

नारद उवाच –

त्रिःसप्तकृत्वा नृपतीन्हत्वा भार्गवनंदनः ॥ २ ॥

ಪರಶುರಾಮದೇವರು ಜಗದ್ಗುರುಗಳು ಸರ್ವೋತ್ತಮ ದೇವತೆ ತಪಸ್ಸನ್ನು ಹೇಗೆ ? ಏಕೆ ಮಾಡಿದರು ?

ನಾರದ ಉವಾಚ–

ಪರಶುರಾಮದೇವರು ೨೧ ಸಲ ಕ್ಷತ್ರಿಯ ಕುಲವನ್ನು ನಾಶಮಾಡಿ, ೨

तस्य प्रशांत्यै तीर्थानि चरन्वै किल भार्गवः ।
प्रदर्शनाय लोकानां ऋषिसंघैस्ततो ययौ ॥ ३ ॥

ಸಂಗಮಕ್ಕೆ ಬಂದರು. ೪

सह्यपादाश्रिता लोकहिता याऽमृतवाहिनी ।
या सर्वमलहंत्रीति प्रख्याता च मलापहा ॥ ५ ॥

ಸಹ್ಯಾದ್ರಿಯಿಂದ ಉಗಮಳಾಗಿ ಜನಹಿತಕ್ಕೋಸ್ಕರ ಅಮೃತವಾಹಿನಿಯಾಗಿ ಸಕಲ ಮಲಗಳನ್ನೂ ಪರಿಹಾರ ಮಾಡತಕ್ಕವಳಾದ ಕಾರಣ ಜಗತ್ತಿನಲ್ಲಿ ಪ್ರಸಿದ್ಧಳೂ ಅದ ಕಾರಣ ಮಲಾಪಹಾ ಎಂಬ ಹೆಸರು ಉಳ್ಳವಳಾದಳು. ೫

जायते योजने यस्यां तीर्थानां शतमुत्तमम् ।
लिंगद्वयं च प्रख्यातं सुरसिद्धर्षिसेवितम् ॥ ६ ॥

ಆ ಮಲಾಪಹಾರಿಣಿಯಲ್ಲಿ ಒಂದೇ ಯೋಜನೆಯಲ್ಲಿ ನೂರಾರು ತೀರ್ಥಗಳಲ್ಲಿ ಉತ್ತಮವಾದ ಎರಡು ಲಿಂಗಗಳು ಉದ್ಭವಿಸಿರುವವು. ದೇವತೆಗಳಿಂದಲೂ ಸಿದ್ಧರಿಂದಲೂ ಋಷಿಗಳಿಂದಲೂ ಸೇವಿತವಾಗಿ ಪ್ರಸಿದ್ಧವಾಗಿರುವವು. ೬

सह्यादारभ्यतो देवीं सेव्यमानो जगत्पतिः ।
आनुलोम्यात्पितॄन्देवानर्चयन् संगमं ययौ ॥ ७ ॥

ಸಹ್ಯಾದ್ರಿ ಪರ್ವತದಿಂದ ಆರಂಭಮಾಡಿ ಮಲಾಪಹಾರಿಣೀ ದೇವಿಯನ್ನು ಸೇವಿಸುತ್ತ ಜಗತ್ಪತಿಯಾದ ಪರಶುರಾಮದೇವರು ಪಾರಂಪರ್ಯವಾಗಿ ಪಿತೃದೇವತೆಗಳನ್ನೂ ಪೂಜಿಸುತ್ತ ಸಂಗಮಕ್ಕೆ ಬಂದರು. ೭

अथ तस्य कुठाराग्रात्क्षत्रहत्याऽतिविह्वला ।
निर्गत्य मूर्तिमत्येषा कस्त्वमित्याह भार्गवम् ॥ ८ ॥

ಆ ಮೇಲೆ ಆ ಪರಶುರಾಮದೇವರ ಕುಠಾರದ ತುದಿಗೆ ಕ್ಷತ್ರಿಯರ ಹತ್ಯೆಯ ರಕ್ತವು (ಹತ್ಯೆಯು) ಹತ್ತಿದ್ದನ್ನು ನೋಡಿ ಅತಿಭಯಗ್ರಸ್ತಳಾಗಿ ಈ ಮಲಾ ಪಹಾರಿಣೀ ದೇವಿಯು ಮೂರ್ತಿ ಮಂತಳಾಗಿ ಎದ್ದು ಬಂದು, ಪರಶುರಾಮದೇವರನ್ನು, ನೀವು ಯಾರು ? ಎಂದು ಕೇಳಿದಳು. ೮

योऽयमंबुमयी देवी धर्माणां तु सुधामयी।
ज्वालामयी त्वधर्माणामित्युक्त्वा संगमं ययौ ॥ १० ॥

ಈ ಮಲಾಪಹಾರಿಣೀ ದೇವಿಯು ಜಲಮಯಳಾಗಿ ಧರ್ಮಗಳಿಗೆ ಅಮೃತ ಮಯಳಾಗಿ ಅಧರ್ಮಗಳಿಗೆ ಜ್ವಾಲಾಮಯಳಾಗಿ ಇರುವವಳಾಗಿದ್ದಾಳೆ. ಎಂದು ಹೇಳಿ ಸಂಗಮಕ್ಕೆ ಹೋದರು. ೧೦

अथ प्रहृष्टो भगवान् भार्गवो मुनिसन्निधौ।
प्रदृश्याश्चर्यमतुलं प्रशशंस मलापहाम् ॥ ११ ॥

ಪರಮ ಸಂತುಷ್ಟರಾದ ಪರಶುರಾಮ ದೇವರು ಋಷಿಗಳ ಸನ್ನಿಧಿಯಲ್ಲಿ ಆಶ್ಚರ್ಯಕರವಾದ ಮಹಿಮೆಯನ್ನು ತೋರಿಸಿ ಮಲಾಪಹಾರಿಣಿಯನ್ನು ಪ್ರಶಂಸೆ ಮಾಡಿದರು. ೧೧

प्रायश्चित्तार्थिनां विप्रा महापातकिनामपि।
मलापहैव शरणं विरक्तानां न संशयः ॥ १२ ॥

ಹೇ ಬ್ರಾಹ್ಮಣರೇ ! ಪ್ರಾಯಶ್ಚಿತ್ತಾರ್ಥಿಗಳಿಗೆ ಮಹಾಪಾತಕಿಗಳಿಗೂ ವಿರಕ್ತರಿಗೂ ಕೂಡ ಮಲಾಪಹಾರಿಣಿಯೇ ಶರಣಾಗತರಕ್ಷಕಳು. ೧೨

नद्योऽन्याश्च प्रशंसंति स्वर्गादिफलसाधने।
मलापहारिण्या काचित्समाऽन्या नैव विद्यते ॥ १३ ॥

ಬೇರೆ ಬೇರೆ ನದಿಗಳು ಸ್ವರ್ಗಾದಿಫಲಸಾಧನೇಗೋಸ್ಕರ ಪ್ರಶಂಸಾಮಾಡಲ್ಪಡುವವು. ಆದರೆ ಮಲಾಪಹಾರಿಣಿ ಸಮಾನ ಯಾವನದಿಯೂ ಆಗಲಾರದು. ೧೩

उद्‍वहति यत्रैषा स्नानदानजपादिकम्।
तत्र प्रशस्यतेऽत्यर्थं भानुवारेत्वनंतकम् ॥ १४ ॥

ಸುಲಭವಾಗಿ ಮುಕ್ತರಾಗುವರು. ೧೫

इत्युक्त्वाथ जगन्नाथः प्रहृष्टस्तद्विजैः सह ।
विधिवत्संगमे स्नात्वा तर्पयत्पितृदेवताः ॥ १६ ॥

ಜಗನ್ನಾಥನಾದ ಪರಶುರಾಮ ದೇವರು ಬ್ರಾಹ್ಮಣರಿಂದ ಕೂಡಿಕೊಂಡು ಸಂತೋಷದಿಂದ ವಿಧಿಪೂರ್ವಕ ಸಂಗಮದಲ್ಲಿ ಸ್ನಾನಮಾಡಿ. ಪಿತೃಗಳಿಗೂ ದೇವತೆಗಳಿಗೂ ತರ್ಪಣಕೊಟ್ಟರು. ೧೬

तत्राऽसौ संगमे क्षेत्रेश्वरः साक्षात्सदा प्रभुः ।
ईशान्यां शंकरश्चास्ते भुक्तिमुक्तिफलप्रदः ॥ १७ ॥

ಅಲ್ಲಿಯೂ ಆ ಸಂಗಮಕ್ಷೇತ್ರದಲ್ಲಿ ಸಾಕ್ಷಾತ್ ಸರ್ವೋತ್ತಮನಾದ ಪರಮಾತ್ಮನು ಪರಶುರಾಮರು ಕ್ಷೇತ್ರೇಶ್ವರರಾಗಿ ಇರುವರು. ಈಶಾನ್ಯದಲ್ಲಿ ರುದ್ರದೇವರು ಐಹಿಕ ಪಾರತ್ರಿಕ ಎರಡೂ ಫಲಗಳನ್ನು ಕೊಡುವವರಾಗಿ ಇರುವರು. ೧೭

तस्मिन् क्षेत्रे शिवो भक्त्या पापान्युच्चाटयन् प्रभुः ।
यस्य स्मरणमात्रेण सद्यो व्याधिग्रहादिकाः ॥ १८ ॥

ಆ ಸಂಗಮಕ್ಷೇತ್ರದಲ್ಲಿ ಭಕ್ತಿಯಿಂದ ರುದ್ರದೇವರನ್ನು ಯಾರು ಸ್ಮರಣ ಮಾಡುವರೋ ಅವರ ಪಾಪಗಳನ್ನು ಉಚ್ಚಾಟನೆ ಮಾಡಿ ಪ್ರಭುಗಳಾದ ರುದ್ರದೇವರು ತಕ್ಷಣ ಆಧಿವ್ಯಾಧಿಗ್ರಹಾದಿಗಳ. ೧೮

पीडा नश्यंति विविधाः सिध्यंत्याशु मनोरथाः ।
तत्रस्थं चाव पूजार्थं देवं तं नार्चयंति ये ॥ १९ ॥

ವಿಧ ವಿಧವಾದ ಎಲ್ಲ ಪೀಡಾದಿಗಳನ್ನು ನಾಶಮಾಡುವರು. ಸಕಲ ಮನೋರಥಗಳೂ ಬೇಗನೇ ಸಿದ್ಧಿಸುವವು. ಪೂಜಾರ್ಹನಾದ ಆ ದೇವನನ್ನು ಯಾರು ಪೂಜಿಸುವದಿಲ್ಲವೋ, ೧೯

तत्र पूज्य महायोगी स्वात्मानं जगतां गुरुम्     ॥ २१ ॥

ಮುನಿಗಳಿಂದ ಕೂಡಿಕೊಂಡು ಜಗತ್ತಿಗೆ ಶಾಂತಿದಾಯಕರಾದ ಶಂಕರನನ್ನು ಜಗದ್ಗುರುಗಳು, ನಿಯಾಮಕರು, ಎಂದು ಮಹಾಯೋಗಿ ಎಂದು ಪೂಜಿಸಿ. ೨೧

शिवः पशुपतिः स्थाणुरिति स्तोत्रं सदा पठन् ।
ततः शिवसमीपस्थो सर्वदेवान्समीपतः     ॥ २२ ॥

ಶಿವಃ ಪಶುಪತಿಃ ಸ್ಥಾಣುಃ ಎಂದು ಈ ಸ್ತೋತ್ರವನ್ನು ಸದಾ ಪಠಣಮಾಡುತ್ತ ರುದ್ರದೇವರ ಸಮೀಪದಲ್ಲಿ ಇರುವ ಎಲ್ಲ ದೇವತೆಗಳನ್ನೂ ಅಲ್ಲಿಯೇ ಸಮೀಪದಲ್ಲಿಯೇ, ೨೨

प्रणम्य प्रयतः प्रायाद्रुद्रपादौ सुशोभिनौ ।
तावभ्यर्च्य पितृभ्यश्च पिण्डान्दत्वा यथाविधि     ॥ २३ ॥

ರುದ್ರದೇವರ ಸುಂದರವಾದ ಎರಡೂ ಪಾದಗಳನ್ನೂ ಪ್ರಯತ್ನ ಪೂರ್ವಕವಾಗಿ ನಮಸ್ಕರಿಸಿ ಪೂಜಿಸಿ ವಿಧಿಪೂರ್ವಕವಾಗಿ ಪಿತೃಗಳಿಗೆ ಪಿಂಡದಾನ ಮಾಡಬೇಕು.೨೩

पंचलिंगान्यथाभ्यर्च्य तन्माहात्म्यं च सोऽभ्यधात् ।

राम उवाच –

पृथिव्यामेतदाश्चर्यं श्रृणुध्वं द्विजसत्तमः     ॥ २४ ॥

ಪಂಚಲಿಂಗಗಳನ್ನೂ ಪೂಜೆ ಮಾಡಿ ಅವುಗಳ ಮಾಹಾತ್ಮ್ಯವನ್ನೂ ಹೇಳಿದರು.

ರಾಮನು ಹೇಳಿದನು –

ಹೇ ಬ್ರಾಹ್ಮಣೋತ್ತಮರೇ ಪೃಥಿವಿಯಲ್ಲಿ ಪರಮ ಆಶ್ಚರ್ಯ ಕಾರಕವಾದದ್ದನ್ನು ಹೇಳುವೆನು ಕೇಳಿರಿ. ೨೪

पृथक् पंचमुखः साक्षाच्छिवोऽयं स्वयमुत्थितः ।
सद्योजातं मुखं शंभो वायव्यां धर्मदं त्विदम्     ॥ २५ ॥

अघोरमेतन्नैऋत्यां दिशि वै सर्वकामदम् ।
शांतिपुष्टिकरं चैव समस्तभयनाशनम् ॥ २७ ॥

ನೈಋತ್ಯ ದಿಕ್ಕಿನಲ್ಲಿ ಸಕಲ ಕಾಮನೆಗಳನ್ನೂ ಕೊಟ್ಟು ಶಾಂತಿ ಪುಷ್ಟಿಕರನಾಗಿ ಸಮಸ್ತ ಭಯ ಪರಿಹಾರ ಮಾಡತಕ್ಕ ಮುಖ ಉಳ್ಳವನು. ೨೭

ईशानं तु मुखं मध्ये मुक्तिदं सर्वकामदम् ।
पंचब्रह्ममयः सोयं तथा सर्वजगन्मयः ॥ २८ ॥

ಈಶಾನ್ಯದ ಮಧ್ಯದಲ್ಲಿ ಮುಖವು ಸರ್ವಕಾಮನೆಗಳನ್ನು ಪೂರ್ಣಮಾಡಿ ಮುಕ್ತಿ ಪ್ರದವಾಗಿರುವದು. ಹೀಗೆ ಪಂಚಬ್ರಹ್ಮಮಯವಾಗಿ ಸರ್ವಜಗನ್ಮಯವಾಗಿ ಪಂಚಮುಖ ಉಳ್ಳವರಾಗಿರುವರು. ೨೮

सर्वान्कामान्ददात्याशु तत्तन्मंत्रैः समर्चितः ।
य एवं नियतो भक्त्या सकृदभ्यर्चयेच्छिवम् ॥ २९ ॥

ಹೀಗೆ ಆ ಆ ಮಂತ್ರಗಳಿಂದ ಪಂಚಮುಖಿ ಶಂಕರನನ್ನು ಪೂಜಿಸಿದರೆ ಬೇಗನೆ ಸಕಲ ಕಾಮನೆಗಳನ್ನೂ ಕೊಡುವರು. ಹೀಗೆ ನಿಯಮದಿಂದ ಭಕ್ತಿಯಿಂದ ಒಂದೇ ಸಲ ಶಿವನನ್ನು ಪೂಜಿಸಿದರೆ, ೨೯

सर्वपापविनिर्मुक्तः शिवलोके महीयते ।
अत्र देवर्षयः सिद्धिं प्राप्ता ब्रह्मर्षयस्तथा ॥ ३० ॥

ಸಕಲ ಪಾಪಗಳಿಂದಲೂ ಮುಕ್ತರಾಗಿ ಶಿವಲೋಕದಲ್ಲಿ ವಿರಾಜಮಾನರಾಗುವರು. ಅಲ್ಲಿ ದೇವರ್ಷಿಗಳೂ ಬ್ರಹ್ಮರ್ಷಿಗಳೂ ಸಿದ್ಧಿಯನ್ನು ಪಡೆದರು. ೩೦

राजर्षयश्च बहवो तदेतत्परमं भुवि ।

नारद उवाच –

ಹೀಗೆ ಹೇಳಿ ಸಂತೋಷ ಪಟ್ಟು ಬ್ರಾಹ್ಮಣರಿಂದ ಕೂಡಿಕೊಂಡು ಪರಶುರಾಮ ದೇವರು ಋಷಿಗಳನ್ನು ಪೂಜಿಸಿದರು. ೩೧

तैरेव सहितः प्रायादमृतेशं महेश्वरम् ।
नानाविधाभिः पूजाभिरभ्यर्च्य स शिवं मुदा ॥ ३२ ॥

ಅವರೆಲ್ಲರಿಂದ ಕೂಡಿಕೊಂಡು ಅಮೃತೇಶನಾದ ಮಹೇಶ್ವರನನ್ನು ಕುರಿತು ಹೋಗಿ ಎಷ್ಟೋವಿಧವಾದ ಪೂಜಾಸಾಹಿತ್ಯಗಳಿಂದಲೂ ಸಂತೋಷದಿಂದ ರುದ್ರದೇವರನ್ನು ಪೂಜಿಸಿದರು. ೩೨

तस्य माहात्यमतुलं ऋषिभ्यः प्राह भार्गवः ।

भार्गव उवाच –

एष वः सर्वभूतानामेक आत्मा सदाश्रयः ॥ ३३ ॥

ಪರಶುರಾಮದೇವರು ಅಮೃತೇಶ್ವರನ ಅಸದೃಶವಾದ ಮಾಹಾತ್ಮ್ಯವನ್ನು ಹೇಳಿದರು. ಈ ರುದ್ರದೇವರು ನಿಮಗೂ ಸರ್ವಪ್ರಾಣಿಗಳಿಗೂ ಮುಖ್ಯವಾಗಿ ಎಲ್ಲರಿಗೂ ಆಶ್ರಯ ಭೂತರಾದವರು. ೩೩

धत्ते तेजोमयश्चायं सप्तलोकान्सनातनः ।
दधीचिर्नाम विप्रर्षिर्मृत्युं ज्ञात्वात्मनः पुरा ॥ ३४ ॥

ಸನಾತನರಾದ ಈ ರುದ್ರದೇವರು ತೇಜೋಮಯರಾಗಿ ಸಪ್ತಲೋಕಗಳನ್ನು ಧಾರಣಮಾಡಿರುವರು. ದಧೀಚಿ ಎಂಬ ಬ್ರಹ್ಮರ್ಷಿಗಳು ತಮಗೆ ಮೃತ್ಯು ಹತ್ತಿರ ಬಂದದ್ದು ತಿಳಿದು ಕೊಂಡು, ೩೪

अमृतेशार्चनाद्वज्रकायो भून्मृत्युवर्जितः ।
स्वच्छंदमृत्युर्यस्यासीत्सुरांस्तं प्रार्थ्य सेंद्रकाः ॥ ३५ ॥

ಆ ಅಮೃತೇಶನನ್ನು ಪೂಜೆಮಾಡಿ ವಜ್ರದೇಹಿ ಆಗಿ ಮೃತ್ಯುವನ್ನು ಜಯಿಸಿದರು. ಸ್ವಚ್ಛಂದ ಮೃತ್ಯುಉಳ್ಳವರಾದರು. ಇಂದ್ರಾದಿ ದೇವತೆಗಳು ಅವರನ್ನು ಪ್ರಾರ್ಥನೆ ಮಾಡಿ, ೩೫

नमस्तस्मै महेशाय ज्योतिर्लिंगस्वरूपिणे ॥ ३७ ॥

ಎಷ್ಟೋ ವಿಧವಾದ ಸಿದ್ಧಿಯನ್ನು ಪಡೆದವರಾಗಿ ಮೃತ್ಯುವನ್ನು ಗೆದ್ದವರಾಗಿ ವಿಹಾರ ಮಾಡಿಕೊಂಡು ಇರುವರು. ಅಂಥ ಮಹೇಶರಾದ ಜ್ಯೋತಿರ್ಲಿಂಗ ಸ್ವರೂಪಿಗಳಾದ ರುದ್ರದೇವರಿಗೆ ನಮಸ್ಕಾರಗಳು. ೩೭

यस्यादिं मध्यमंतं च ब्रह्माविष्णुर्न वेत्ति हि।

नारद उवाच –

इति स्तुत्वा प्रभुं नत्वा मुदितोऽसौ द्विजैः सह ॥ ३८ ॥

ಯಾವ ಜಗತ್ತಿಗೆ, ಆದಿ, ಮಧ್ಯ, ಅಂತ, ಬ್ರಹ್ಮನೋ ವಿಷ್ಣುನೋ ತಿಳಿಯುವದೇ ಇಲ್ಲ, ನಿಜವಾಗಿಯೂ.

ನಾರದರು ಹೇಳಿದರು –

ಹೀಗೆ ಸ್ತೋತ್ರ ಮಾಡಿ ರುದ್ರದೇವರಿಗೆ ನಮಸ್ಕಾರ ಮಾಡಿ ಈ ಪರಶುರಾಮ ದೇವರು ಬ್ರಾಹ್ಮಣರಿಂದ ಕೂಡಿಕೊಂಡು ಸಂತೋಷ ಪಟ್ಟರು. ೩೮

रामः कृत्वा ययौ सर्वं क्षेत्रमेव प्रदक्षिणम्।
गोःपादादिषु तीर्थेषु स्नात्वा स्नात्वार्चयन् पितृन् ॥ ३९ ॥

ಪರಶುರಾಮದೇವರು ಸರ್ವಕ್ಷೇತ್ರವನ್ನೂ ಪ್ರದಕ್ಷಿಣಾ ಮಾಡುತ್ತ ಹೊರಟರು. ಆಕಳ ಪಾದಾದಿ ಗುರುತುಉಳ್ಳ ತೀರ್ಥಗಳಲ್ಲಿ ಸ್ನಾನಮಾಡುತ್ತ ಪಿತೃಗಳನ್ನು ಅರ್ಚಿಸುತ್ತ, ೩೯

देवांश्च समनुप्राप्तः संगमे ब्राह्मणैः सह।
तत्र माध्यान्हिकं कृत्वा कर्तुं नित्यं शिवार्चनम् ॥ ४० ॥

ಬ್ರಾಹ್ಮಣರಿಂದ ಕೂಡಿಕೊಂಡು ಸಂಗಮದಲ್ಲಿ ದೇವತೆಗಳನ್ನು ಕೂಡಿಕೊಂಡರು. ಅಲ್ಲಿ ಮಧ್ಯಾಹ್ನದ ಆಹ್ನೀಕ ಕರ್ಮಗಳನ್ನು ಮಾಡಿ ದಿನಾಲು ಶಿವಾರ್ಚನೆ ಮಾಡುವದಕ್ಕೆ, ೪೦

[illegible]

अथोद्घाटयितुं देवं कराभ्यां जगृहे प्रभुम् ।
न ययौ तत्करं देवो रामः प्राप हि विस्मयम् ॥ ४२ ॥

ಆಮೇಲೆ ಉದ್ಘಾಟನೆಮಾಡುವದರಗೋಸ್ಕರ ಪ್ರಭುಗಳಾದ ಮಹಾದೇವರನ್ನು ಎರಡೂ ಕೈಗಳಿಂದ ಗ್ರಹಣಮಾಡಿದರು. ಆದರೆ ಆ ರುದ್ರದೇವರ ಕೈಗಳು ಸಿಗಲಿಲ್ಲ. ಆಗ ರಾಮದೇವರು ಬಹಳ ಆಶ್ಚರ್ಯವನ್ನು ಹೊಂದಿದರು. ೪೨

सशिष्यः क्लिष्यमानोऽपि कथं स्युर्मे मनोरथाः ।
अथ तत्प्राप्तये रामस्तपस्तीव्रं समाश्रितः ॥ ४३ ॥

ಶಿಷ್ಯಸಮೇತನಾಗಿ ಶ್ರಮದಿಂದ ಪೂಜೆ ಮಾಡಿದರೂ ನನ್ನ ಮನೋರಥಗಳು ಯಾಕೆ ಪೂರ್ಣವಾಗಲಿಲ್ಲ. ಆ ಮನೋರಥಗಳ ಪ್ರಾಪ್ತಿಗೋಸ್ಕರ ಪರಶುರಾಮ ದೇವರು ಮತ್ತೆ ಕಠಿಣವಾದ ತಪಃಸನ್ನು ಮಾಡಿದರು. ೪೩

ततस्तस्मात्समुत्तस्थौ लिंगात् ज्योतिर्मयः शिवः ।
देव्यागणैश्च सहितः पुरतः प्राह तं स्मरन् ॥ ४४ ॥

ಆ ಮೇಲೆ ಆ ಲಿಂಗದಿಂದ ಜ್ಯೋತಿರ್ಮಯನಾಗಿ ಶಿವನು ಮೇಲೆದ್ದು ಬಂದನು. ಮುಂದೆ ನಿಂತು ಕೊಂಡು ದೇವತಾಗಣಗಳಿಂದ ಕೂಡಿಕೊಂಡು ಪರಶುರಾಮದೇವರನ್ನು ಸ್ಮರಣ ಮಾಡುತ್ತ ಹೇಳಿದರು. ೪೪

मा राम क्लिश्यतां तात स्थास्याम्यत्रैव सर्वदा ।
त्वया च न व्यथा कार्या न मत्तोऽन्योसि भो प्रभो ॥ ४५ ॥

ಪರಶುರಾಮದೇವರೆ ! ಏನೂ ಕಾಳಜೀ ಮಾಡಬೇಡಿ. ತಾತರೇ ನಾನು ಸರ್ವದಾ ಇಲ್ಲಿಯೇ ಇರುವೆನು. ನೀವು ಏನೂ ವ್ಯಥೆಪಡಬೇಡಿರಿ. ಹೇ ಪ್ರಭುಗಳೇ !ನನ್ನ ಹೊರತಾಗಿ ಬೇರೆಯವರು. ಯಾರಿರುವರು. ೪೫

एवं प्रसन्नं तं नत्वा स्तुत्वा च मुनिभिः सह ।
तत्रैव स्थापयामास तल्लिगं संगमेश्वरम् ॥ ४६ ॥

ಹೀಗೆ ಪ್ರಸನ್ನರಾದ ಆ ರುದ್ರದೇವರನ್ನು ಸ್ತೋತ್ರಮಾಡಿ ಋಷಿಗಳಿಂದ ಕೂಡಿಕೊಂಡು ಆ ಸಂಗಮೇಶ್ವರನ ಲಿಂಗವ ಅಲ್ಲಿಯೇ ಸ್ಥಾಪನೆ ಮಾಡಿದರು. ೪೬

कालेऽतीते च महति महेन्द्रं च जगद्गुरुः ॥ ४८ ॥

ಮಧ್ಯಾಹ್ನಾನಂತರ ಎಲ್ಲ ಮಹರ್ಷಿಗಳಿಂದಲೂ ತೀರ್ಥಾಭಿಮಾನಿ ದೇವತೆಗಳಿಂದಲೂ ಕೂಡಿಕೊಂಡು ಕಾಲಾನಂತರ ಮಹೇಂದ್ರ ಪರ್ವತಕ್ಕೆ ಹೋದರು. ೪೮

पृष्टः सर्वाघशमनं प्राहेदं देवसंसदि ।
मा गंगा मा कुरुक्षेत्रं मा गया मा च पुष्करम् ॥ ४९ ॥

ದೇವತೆಗಳ ಸಭೆಯಲ್ಲಿ ಪ್ರಶ್ನೆ ಮಾಡಿದಾಗ ಸಕಲ ಪಾಪಗಳನ್ನು ಶಮನ ಮಾಡುವ ಈ ಮಾತನ್ನು ಹೇಳಿದರು. ಗಂಗೆಯು ಬೇಡ. ಕುರುಕ್ಷೇತ್ರ ಬೇಡ. ಪುಷ್ಕರಬೇಡ. ೪೯

तत्र गच्छ सुरश्रेष्ठ यत्रोदीची मलापहा ।

नारद उवाच –

एतद्वः कथितं विप्रा भार्गवस्य महात्मनः ॥ ५० ॥

ದೇವತೆಗಳಲ್ಲಿ ಶ್ರೇಷ್ಠರಾದವರೇ ! ಉತ್ತರವಾಹಿನಿಯಾದ ಮಲಾಪಹಾರಿ ತೀರಕ್ಕೆ ಹೋಗಿರಿ. ಹೇ ಬ್ರಾಹ್ಮಣರೇ ! ಮಹಾತ್ಮರಾದ ಪರಶುರಾಮದೇವರ ಮಹಾತ್ಮ್ಯವನ್ನು ನಿಮಗೆ ಹೇಳಿದೆನು. ೫೦

चरितं तीर्थमाहात्म्यं श्रुतमात्राघनाशनम् ।

यस्तीर्थमेतत्सकृदप्युपेत्य सेवेत् क्रमाद्भार्गवसंचरित्रम् ।
स्मरेदघघ्नं परिकीर्तयेद्वा भक्त्या स सायुज्यमुपैति शंभोः ॥ ५१ ॥

ಪಾಪ ಪರಿಹಾರಕವಾದ ಈ ತೀರ್ಥ ಮಾಹಾತ್ಮ್ಯವನ್ನು ಕೇಳಿದೆನು. ಒಂದು ಸಲವಾದರೂ ಈ ತೀರ್ಥಕ್ಕೆ ಬಂದು ಪರಶುರಾಮದೇವರ ಚರಿತ್ರವನ್ನು ಸ್ಮರಣ ಮಾಡಿ ಪಾಪ ಪರಿಹಾರಕವಾದದ್ದನ್ನು ಭಕ್ತಿಯಿಂದ ಕೀರ್ತನೆಮಾಡಿದರೆ, ಶಿವ ಸಾಯುಜ್ಯವನ್ನು ಪಡೆಯುವರು. ೫೧

॥ इति श्रीस्कान्दे कृष्णामाहात्म्ये मलापहासंगमवर्णनं नाम
पंचपंचाशत्तमोऽध्यायः ॥

तत्र लेभे गजैश्वर्यं तपसैरावतः पुरा ॥ १ ॥

ಅದರ ಮುಂದೆ ಶ್ರೇಷ್ಠವಾದ ತೀರ್ಥವು, ಐರಾವತ ತೀರ್ಥವು ಇರುವದು. ಪೂರ್ವದಲ್ಲಿ ಐರಾವತವು ಆ ಕೃಷ್ಣವೇಣೀ ತಟಾಕದಲ್ಲಿ ತಪಃಸುಮಾಡಿ, ಗಜದಷ್ಟು ಐಶ್ವರ್ಯವನ್ನು ಪಡೆಯಿತು. ೧

तत्र स्नात्वा नरःस्तीर्थे गजैश्वर्यत्वमाप्नुयात् ।
मनोरथांश्च लभते शक्रलोकं स गच्छति ॥ २ ॥

ಮನುಷ್ಯರು ಆ ಐರಾವತ ತೀರ್ಥದಲ್ಲಿ ಸ್ನಾನ ಮಾಡಿದರೆ ಗಜೈಶ್ವರ್ಯವನ್ನು ಪಡೆಯುವರು. ಮನೋರಥಗಳೂ ಪೂರ್ಣವಾಗುವವು. ಇಂದ್ರ ಲೋಕಕ್ಕೆ ಹೋಗುವರು. ೨

ततो धनदतीर्थं प्राक् कुबेरो यत्र संगमे ।
लेभे तत्सर्वमैश्वर्यं लोकपालत्वमप्यगात् ॥ ३ ॥

ಆದರ ಮುಂದೆ ಧನದ ತೀರ್ಥವು ಇರುವದು. ಆ ಸಂಗಮದಲ್ಲಿ ಕುಬೇರನಿರುವನು. ಅಲ್ಲಿ ಸ್ನಾನಮಾಡುವವನಾಗಿ ಐಶ್ವರ್ಯವನ್ನು ಪಡೆದು ಲೋಕಪಾಲತ್ವವನ್ನು ಪಡೆದನು. ೩

लिंगतीर्थं ततः पूर्वं शतलिंगं जले स्थितम् ।
सिद्धसेव्यं महद्दिव्यं तत्स्थानं सर्वसिद्धिदम् ॥ ४ ॥

ಅದರ ಮುಂದೆ ಲಿಂಗ ತೀರ್ಥವು, ಅದರ ಮುಂದೆ ಶತಲಿಂಗವು ನೀರೊಳಗೆ ಇರುವದು. ಅದು ಸಿದ್ಧರಿಂದ ಸೇವಿಸಲ್ಪಟ್ಟದ್ದು. ಪರಮದಿವ್ಯವಾದದ್ದು. ಆ ಸ್ಥಾನವು ಸಕಲಸಿದ್ಧಿ ಪ್ರದವಾಗಿದೆ. ೪

इंद्रेण कृष्णवेण्यां च कृताश्च क्रतवः परे ।
तीरे विश्वेश्वरो यत्र जटी साक्षाच्छिवः स्थितः ॥ ५ ॥

ಆ ಕೃಷ್ಣವೇಣೀ ತೀರದಲ್ಲಿ ಇಂದ್ರದೇವರು ಯಜ್ಞಗಳನ್ನು ಮಾಡಿದರು. ಅಲ್ಲಿ ವಿಶ್ವೇಶ್ವರನು ಸಾಕ್ಷಾತ್ ಶಿವನೇ ಜಟಾಧಾರಿಯಾಗಿ ಇರುವನು. ೫

मयूराख्यो महान् सिद्धः समाराध्य तु शंकरम् ॥ ७ ॥

ಆ ಜಟಾತೀರ್ಥದ ಮಹಾತ್ಮ್ಯವು ಅಸಾಮಾನ್ಯವಿದೆ. ಹೇಳುವದಕ್ಕೆ ಪ್ರಭು ಸ್ಕಂದನಿಗೂ ಸಾಧ್ಯವಿಲ್ಲ. ಮಯೂರ ಎಂಬ ಒಬ್ಬ ಸಿದ್ಧಪುರುಷರು ಶಂಕರನನ್ನು ಆರಾಧನೆಮಾಡಿ, ೭

सायुज्यं प्राप तेनेदं मायूरमिति कथ्यते ।
ततो वृषभतीर्थं तु सर्वपापविनाशनम् ॥ ८ ॥

ಸಾಯುಜ್ಯ ಪದವಿಯನ್ನು ಪಡೆದರು. ಆದ್ದರಿಂದ ಇದು ಮಯೂರ ಎಂದು ಕರೆಯಿಸಿಗೊಳ್ಳಲ್ಪಟ್ಟದೆ. ಅದರ ಮುಂದೆ ಸರ್ವ ಪಾಪ ಪರಿಹಾರಕವಾದ ವೃಷಭತೀರ್ಥ ವಿರುವದು. ೮

ब्रह्मद्वेषाद्धेनुकश्च ब्रह्मशापात्तु दैवतः ।
जातिस्मरत्वमापन्नोऽनडुहो देहमाश्रितः ॥ ९ ॥

ಧೇನುಕನೆಂಬುವನು ಬ್ರಹ್ಮದ್ವೇಷದಿಂದಲೂ, ಬ್ರಾಹ್ಮಣರ ಶಾಪದಿಂದಲೂ ಗ್ರಸ್ತನಾದನು. ದೈವಯೋಗದಿಂದ ಜನ್ಮಾಂತರಸ್ಮರಣ ಉಳ್ಳವನಾಗಿ (ಅನಡುಹ) ದೇಹವನ್ನು ಪಡೆದು. ೯

मुनीनां दर्शनात्कर्म स्मृत्वा पूर्वकृतं मुदा ।
द्विजत्वं प्राप तत्स्नानाद्गोचर्म भूमि दानतः ॥ १० ॥

ಋಷಿಗಳ ದರ್ಶನದಿಂದ ಪೂರ್ವ ಜನ್ಮವನ್ನು ಸ್ಮರಣೆಗೆ ತಂದು, ಸಂತೋಷದಿಂದ ಬ್ರಾಹ್ಮಣತ್ವವನ್ನು ಪಡೆದನು. ಸ್ನಾನಮಾಡಿ ಗೋಚರ್ಮದ ಪ್ರಮಾಣ ಭೂದಾನ ಮಾಡಿದ್ದರಿಂದ, ೧೦

गतिं प्राप महाप्राज्ञो वृषभो ज्ञानमाप्तवान् ।
तत्र स्नात्वा ययौ धीमान्सर्वलोकस्य पश्यतः ॥ ११ ॥

ಆ ವೃಷಭನು ಜ್ಞಾನವನ್ನು ಪಡೆದು, ಎಲ್ಲ ಜನರ ಸಮಕ್ಷಮದಲ್ಲಿ ಸ್ನಾನಮಾಡಿ ಒಳ್ಳೇ ಗತಿಯನ್ನು ಪಡೆದನು. ೧೧

ಪೂರ್ವದಲ್ಲಿ, ಈ ನದೀಜಲದಲ್ಲಿ ಭೀಮಾಲಿಂಗತಟ ಎಂಬ ಹೆಸರು ಇತ್ತು. ಅಲ್ಲಿ ಸಾಕ್ಷಾತ್ ಶಂಕರನು ಸೂಕ್ಷ್ಮಲಿಂಗ ಶರೀರ ಧಾರಣ ಮಾಡಿಕೊಂಡು ಇರುವನು. ೧೩

लिगतीर्थे नर: स्नात्वा शंकरं संप्रपूज्य तु ।
जातिस्मरत्वमाप्नोति ज्ञात्वा माहात्म्यमुत्तमम् ॥ १४ ॥

ಯಾವ ಮನುಷ್ಯನು ಆ ಲಿಂಗತೀರ್ಥದಲ್ಲಿ ಸ್ನಾನಮಾಡಿ, ರುದ್ರದೇವರನ್ನು ಸರಿಯಾಗಿ ಪೂಜೆಮಾಡಿ, ಉತ್ತಮವಾದ ಮಾಹಾತ್ಮ್ಯ ಜ್ಞಾನಮಾಡಿ ಕೊಂಡರೆ ಜನ್ಮಾಂತರದ ಸ್ಮರಣೆ ಬರುವದು. ೧೪

ततस्तीर्थं महापुण्यं चित्रगुप्ताख्यमुत्तमम् ।
चित्रनामा मुनि: प्राज्ञो राजर्षिर्बहुसंमत: ॥ १५ ॥

ಅದರ ಮುಂದೆ ಮಹಾ ಪುಣ್ಯಕರವಾದ ಚಿತ್ರಗುಪ್ತ ಎಂಬ ಉತ್ತಮವಾದ ತೀರ್ಥವಿದೆ. ಚಿತ್ರ ಎಂಬ ಹೆಸರಿನ ಪ್ರಾಜ್ಞನಾದ ಋಷಿಯು ರಾಜರ್ಷಿಗಳಿಗೆ ಬಹಳ ಸಮ್ಮತನಾದವನು. ೧೫

माकडियस्य शिष्योऽभूत्सर्वज्ञस्य तपोनिधे: ।
पप्रच्छ तं मुनिश्चित्रो भक्त्या सर्वोपकारणात् ॥ १६ ॥

ತಪೋನಿಧಿಯಾದ, ಸರ್ವಜ್ಞನಾದ, ಮಾರ್ಕಾಂಡೆಯರ ಶಿಷ್ಯನಾದ ಆ ಚಿತ್ರನೆಂಬ ಶಿಷ್ಯನು ಜನರ ಮೇಲೆ ಉಪಕಾರ ಮಾಡುವದಗೋಸ್ಕರ ಭಕ್ತಿಯಿಂದ ಪ್ರಶ್ನೆ ಮಾಡಿದನು. ೧೬

चित्र उवाच –

सर्वेषां प्राणिनां कर्म यथानुरूपमप्युत ।
शिक्षा कार्या विविच्यैवं तीर्थं मे वद तद्गुरो ॥ १७ ॥

ಎಲ್ಲ ಪ್ರಾಣಿಗಳ ಕರ್ಮಗಳು ಅವರವರ ಸಂಬಧಪಟ್ಟ ಪ್ರಾರಬ್ಧವಿದ್ದಮೇಲೆ ಅದರ

मार्कंडेय उवाच –

तीर्थानां प्रवरं तीर्थं कृष्णावेण्यां तु पावनम् ।
छायाक्षेत्रे महापुण्ये देवह्रदमनुत्तमम् ॥ १९ ॥

ಎಲ್ಲ ತೀರ್ಥಗಳಲ್ಲಿ ಶ್ರೇಷ್ಠವಾದ ತೀರ್ಥವು ಪರಮ ಪವಿತ್ರವಾದದ್ದು. ಕೃಷ್ಣವೇಣಿಯಲ್ಲಿ ಇರುವದು. ಅದು ಬಹಳ ಪುಣ್ಯಕರವಾದ ಛಾಯಾಕ್ಷೇತ್ರವು. ಅತಿಶಯ ಉತ್ತಮವಾದ ದೇವಾಲಯು ಅದು. ೧೯

इति तद्वाक्यमाकर्ण्य ततापं तप उत्तमम् ।
छायाक्षेत्रे ततो वाग्मी शतवर्षं सुदुःसहम् ॥ २० ॥

ಹೀಗೆ ಮಾರ್ಕಾಂಡೇಯ ಋಷಿಗಳ ಮಾತು ಕೇಳಿಕೊಂಡು ಉತ್ತಮವಾದ ತಪಃಸನ್ನು (೧೦೦) ನೂರುವರ್ಷ ಪರ್ಯಂತ ದುಃಸಹವಾಗಿ ಆ ಚಿತ್ರನೆಂಬವಾಗ್ಮಿಯು ಛಾಯಾಕ್ಷೇತ್ರದಲ್ಲಿ ಮಾಡಿದನು. ೨೦

ततो गंगा प्रसन्ना भूत्तापसं सुकृशं मुनिम् ।
प्रोवाच जगतां धात्री वरं वरय सुव्रत ॥ २१ ॥

ಆ ಕೃಶನಾದ ಚಿತ್ರ ಮುನಿಗೆ ಕೃಷ್ಣವೇಣಿಯು ಗಂಗೆ ಪ್ರಸನ್ನಳಾದಳು. ಜಗತ್ತನ್ನೇ ಪವಿತ್ರ ಮಾಡತಕ್ಕ ಕೃಷ್ಣವೇಣಿಯು, ಹೇ ವ್ರತಸ್ಥನೇ ! ವರಗಳನ್ನು ಕೇಳು. ೨೧

इति श्रुत्वा जगादोच्चैः गंगां भुवनपावनीम् ।
नमस्कृत्वा तु शिरसा प्रांजलिर्भक्तिनम्रधीः ॥ २२ ॥

ಹೀಗೆ ಕೃಷ್ಣವೇಣಿಯ ಮಾತುಗಳನ್ನು ಕೇಳಿ ಭುವನ ಪಾವನಳಾದ ಕೃಷ್ಣವೇಣಿಯನ್ನು ನಮಸ್ಕರಿಸಿ ಭಕ್ತಿಯಿಂದ ನಮ್ರವಾದ ಬುದ್ಧಿಯುಳ್ಳವನಾಗಿ ಶಿರಸಾಷ್ಟಾಂಗ ನಮಸ್ಕಾರಮಾಡಿ ದೊಡ್ಡ ಧ್ವನಿಯಿಂದ ಹೇಳಿದನು. ೨೨

यमधर्मासनार्धं मे सर्वदास्तु ममानघे ।

प्रहस्य चित्रवाक्यं सा श्रुत्वा भक्तानुकंपिनी ॥ २४ ॥

ಹೇ ಪರಮ ಪೂಜ್ಯಳೇ ! ಸರ್ವದಾ ನನಗೆ ಯಮಧರ್ಮರಾಜನ ಅರ್ಧ ಆಸನವು ಇರಬೇಕು. ಈ ಮಾತನ್ನು ಕೇಳಿ ಕೃಷ್ಣವೇಣಿಯು ಮಂದಹಾಸದಿಂದ ಭಕ್ತಾನು ಕಂಪಿನಿಯಾದ ಗಂಗೆಯು, ೨೪

तथैव भवतु क्षिप्रं त्वल्लेख्यं गुप्तमब्रवीत् ।

चित्रगुप्तेति नाम्ना च ख्यातिं यास्यसि चित्रगो ॥ २५ ॥

ಹಾಗೇ ಆಗಲಿ ತಥಾಸ್ತು, ಎಂದು ವರಪ್ರದಾನ ಮಾಡಿ ನಿನ್ನ ಲೇಖನವು ಗುಪ್ತವಾಗಿರಲಿ. ಆದ್ದರಿಂದ ನಿನ್ನ ಹೆಸರು ಚಿತ್ರಗುಪ್ತ ಎಂದು ಪ್ರಸಿದ್ಧವಾಗಲಿ. ೨೫

अंतर्धानं जगामाशु स्वर्गं प्राप तपोबलात् ।

एवमाकर्ण्य ऋषयः सिद्धाः स्कंदं तदोचिरे ॥ २६ ॥

ಈ ವರವನ್ನು ಪಡೆದು, ತತ್ ಕ್ಷಣದಲ್ಲಿ ಅಂತರ್ಧಾನನಾಗಿ ತನ್ನ ತಪೋಬಲದಿಂದ ಸ್ವರ್ಗಕ್ಕೆ ಹೋದನು. ಇದನ್ನು ಕೇಳಿ ಋಷಿಗಳೂ, ಸಿದ್ಧರೂ, ಸ್ಕಂದನಿಗೆ ಹೇಳಿದರು. ೨೬

केन जातिः स्मृतिः प्राप्ता छाया क्षेत्रे स्मयावहा ।

तद्वदस्व महाभाग कृपया नो महामते ॥ २७ ॥

ಈ ಛಾಯಾಕ್ಷೇತ್ರದಲ್ಲಿ ಆಶ್ಚರ್ಯವಾಗುವಂತೆ ಯಾರಿಗಾದರೂ ಜನ್ಮಾಂತರ ಸ್ಮರಣ ಉಂಟಾಯಿತೇನು ? ಭಾಗ್ಯವಂತರೇ ನಮ್ಮ ಮೇಲೆ ಕೃಪೆಮಾಡಿ ಹೇಳಿರಿ. ೨೭

स्कंद उवाच –

जातिस्मरात् द्विधा भिन्ना कृष्णा देवनदी शुभा ।

उत्तरे तु प्रभूतायामनघात्प्राविशत् ह्रदम् ॥ २८ ॥

ಜನ್ಮಾಂತರ ಸ್ಮರಣದಿಂದ ಶುಭಕರಳಾದ ದೇವನದಿ ಕೃಷ್ಣವೇಣಿಯು ಎರಡು ಪ್ರಕಾರ ಭಿನ್ನಳಾದಳು. ಉತ್ತರ ದಿಕ್ಕಿನ ಪ್ರವಾಹದಿಂದ ಹೊರಟು ಪಾಪವನ್ನು ನಾಶಮಾಡುತ್ತ ಸಮುದ್ರವನ್ನು ಪ್ರವೇಶ ಮಾಡಿದಳು. ೨೮

छायाक्षेत्रं मुनिर्यायान्मनसस्तुष्टिकारणात् ॥ ३० ॥

ಎಲ್ಲ ತೀರ್ಥಗಳನ್ನು ಅವಲೋಕನಮಾಡುತ್ತ ಛಾಯಾಕ್ಷೇತ್ರಕ್ಕೆ ಬಂದರು. ಅಲ್ಲಿ ಮನಃಸು ಸಮಾಧಾನವಾಯಿತು. ಆ ಛಾಯಾಕ್ಷೇತ್ರದಲ್ಲಿ ಮನಃಸು ಪ್ರಸನ್ನವೂ ಆಯಿತು. ೩೦

सुभृशं प्राप चाह्लादं मनः कालुष्यनाशनम्।
पद्मासनस्थः स मुनिर्बहुकालं तपश्चरन् ॥ ३१ ॥

ಮನಃಸಿನ ಕಾಲುಷ್ಯವನ್ನು ಕಳೆದುಕೊಂಡು ಅತಿಶಯವಾದ ಆಹ್ಲಾದವನ್ನು ಹೊಂದಿದರು. ಆ ಸಂತೋಷದಿಂದಲೇ ಪದ್ಮಾಸನಸ್ಥರಾಗಿ ಬಹುದಿವಸಗಳವರೆಗೆ ತಪಃಸನ್ನು ಆಚರಿಸಿದರು. ೩೧

कस्मिंश्चित्कालपर्याये भूत्वाश्वा कौशिकः स्वयम्।
मेनकायाः सुकामिन्याः पृष्टतो वेषमृत्सृजन् ॥ ३२ ॥

ಕೆಲವು ದಿವಸಗಳು ಕಳೆದ ಮೇಲೆ ಸ್ವತಃ ವಿಶ್ವಾಮಿತ್ರನು ತನ್ನ ಮೂಲರೂಪವನ್ನು ಬಿಟ್ಟು, ನಾಯಿಯ ರೂಪ ತೆಗೆದುಕೊಂಡು ಕಾಮಿನಿಯಾದ ಮೇನಕೆ ಹಿಂದೆ ಹೊರಟನು. ೩೨

छाया क्षेत्रपथागच्छन्मुनिना दृष्ट एव सः।
अर्धास्तमितदृष्ट्या तं जगाद प्रहसन्मुनिः ॥ ३३ ॥

ಛಾಯಾಕ್ಷೇತ್ರಕ್ಕೆ ಬಂದನು. ಅಲ್ಲಿ ವಸಿಷ್ಠ ಋಷಿಗಳು ನೋಡಿದರು. ವಿಶ್ವಾಮಿತ್ರನ ಅವಸ್ಥೆಯನ್ನು ನೋಡಿ ವಸಿಷ್ಠರು ಪ್ರಹಾಸಮಾಡಿ ಹೇಳಿದರು. ೩೩

किमिदं क्रियते निंद्यं स्वरूपं स्वं विहाय तु।
गृहीतं हि शुनोरूपं तपोनाशकरं परम् ॥ ३४ ॥

ನಿನ್ನ ಸ್ವರೂಪವನ್ನು ಕಳೆದುಕೊಂಡು ಈ ನಿಂದ್ಯವಾದ ಏನು ಕೆಲಸ ಮಾಡತಾ

खिन्नोऽनुतप्तः सहसा साधुदर्शनगौरवात् ॥ ३६ ॥

ಯಾವಾಗಲೂ ತಪಃಸಿನಿಂದ ಸಿದ್ಧಪುರುಷನಾಗಿ ಮನಃಸನ್ನು ನಿಗ್ರಹ ಮಾಡಿ ವಿಷಯದ ವಿಚಾರಬಿಡು. ಅಷ್ಟು ಹೇಳಿದ ಕೂಡಲೇ ಸಂಕಟ ಬಿಟ್ಟು ಖಿನ್ನನಾಗಿ ಅಕಸ್ಮಾತ್ ಸಾಧುಗಳ, ಜ್ಞಾನಿಗಳ, ದರ್ಶನದ ಗೌರವದಿಂದ. ೩೬

ज्ञानं प्राप्य ऋषेर्वाक्यं श्रुत्वा तं प्रणनाम च ।
विसृज्य रूपं सहसा सारमेयस्य निंदितम् ॥ ३७ ॥

ಆ ಋಷಿಗಳ ಮಾತು ಕೇಳಿಕೊಂಡು ಆ ವಸಿಷ್ಠರಿಗೆ ಪ್ರಣಾಮ ಮಾಡಿ, ನಿಂದಿತನಾದ ನಾಯಿಯ ರೂಪವನ್ನು ಬಿಟ್ಟು. ೩೭

दिव्यं रूपं समास्थाय योगिज्ञेयं स कौशिकः ।
त्राहीति शिरसा नम्य वसिष्ठं मुनिपुंगवम् ॥ ३८ ॥

ಆ ವಿಶ್ವಾಮಿತ್ರನು ಯೋಗಿಗಳಿಗೂ ತಿಳಿಯುವಂತೆ ದಿವ್ಯರೂಪವನ್ನು ತೆಗೆದು ಕೊಂಡು, ನನ್ನನ್ನು ರಕ್ಷಣಮಾಡಿರಿ, ಎಂದು ಮುನಿಶ್ರೇಷ್ಠರಾದ ವಸಿಷ್ಠ ಋಷಿಗಳನ್ನು ಶಿರಸಾಷ್ಟಾಂಗ ನಮಸ್ಕರಿಸಿದನು. ೩೮

जातिस्मरस्तदा चासीद्विश्वामित्रो मुनीश्वरः ।
तत्तीरे तपसा प्राप अत्युग्रं ज्ञानमुत्तमम् ॥ ३९ ॥

ಜನ್ಮಾಂತರ ಸ್ಮರಣ ಉಳ್ಳವರಾಗಿ ವಿಶ್ವಾಮಿತ್ರ ಮುನೀಶ್ವರರು, ಆ ಕೃಷ್ಣವೇಣಿ ತಟಾಕದಲ್ಲಿ ಛಾಯಾಕ್ಷೇತ್ರದಲ್ಲಿ ಅತ್ಯುಗ್ರವಾದ ತಪಃಸನ್ನು ಮಾಡಿ, ಉತ್ತಮೋತ್ತಮವಾದ ಜ್ಞಾನವನ್ನು ಪಡೆದರು. ೩೯

ब्रह्मर्षेर्ष्या वसिष्ठं तं जिघांसुः कालपर्ययात् ।
तपतोऽग्रे गृहीत्वा तं महांतमुपलं मुनिः ॥ ४० ॥

ततोऽनुतप्तः सहसा विश्वामित्रः प्रतापवान् ॥ ४१ ॥

ಇವನು ನಿಃಸಂಶಯವಾಗಿ ಮೃತ್ಯುವನ್ನು ಹೊಂದುವನು, ಅಂದಕೂಡಲೇ ಪ್ರತಾಪ ಶಾಲಿಯಾದ ವಿಶ್ವಾಮಿತ್ರನು ಸಹಸಾ ಸಂಕಟ ಬಟ್ಟವನಾದನು. ೪೧

तस्यांतःकरणं ज्ञात्वा ज्ञानदृष्ट्या ऋषीश्वरः ।
धन्यस्त्वं कृतकृत्योऽसि ब्रह्मर्षिरनुतापतः ॥ ४२ ॥

ಅವನ ಅಂತಃಕರಣವನ್ನು ತಿಳಿದುಕೊಂಡು ಜ್ಞಾನದೃಷ್ಟಿಯಿಂದ ಋಷಿಶ್ರೇಷ್ಠರಾದ ವಸಿಷ್ಠರು, ನೀನು ಧನ್ಯನು, ನೀನು ಕೃತಕೃತ್ಯನು, ನೀನು ಬ್ರಹ್ಮರ್ಷಿಯು, ತಪಃಸಿನಿಂದ ಸಿದ್ಧಿಯನ್ನು ಪಡೆದಿರುವಿ. ೪೨

जातोऽसीति वचः श्रुत्वा समाश्लिष्य परस्परम् ।
स्वाश्रमं कौशिको यायाद्वसिष्ठस्तत्र तस्थिवान् ॥ ४३ ॥

ಬ್ರಹ್ಮರ್ಷಿಯು ಆಗುವಿ ಎಂಬ ಮಾತನ್ನು ಕೇಳಿ, ಪರಸ್ಪರವಾಗಿ ಆಲಿಂಗನ ಮಾಡಿಕೊಂಡು ವಿಶ್ವಾಮಿತ್ರರು ತಮ್ಮ ಆಶ್ರಮಕ್ಕೆ ಬಂದರು. ವಸಿಷ್ಠ ಋಷಿಗಳು ಅಲ್ಲಿಯೇ ನಿಂತರು. ೪೩

उपास्य देवतामूर्तिं छायारूपेण संस्थिताम् ।
ऋषेर्ध्यानादिना तत्र प्राप्ता सा भक्तवत्सला ॥ ४४ ॥

ತಮ್ಮ ಉಪಾಸ್ಯ ದೇವತಾಮೂರ್ತಿ ಛಾಯಾರೂಪದಿಂದ ಇರುವಂಥವಳು, ಭಕ್ತವತ್ಸಲಳಾದ ಆ ಛಾಯಾದೇವಿಯು ಋಷಿಗಳ ಧ್ಯಾನಯೋಗಗಳಿಗೆ ಪ್ರಕಟಳಾದಳು. ೪೪

छाया भगवती देव्या गंगा मध्येनुकंपितः ।
वसिष्ठस्तन्मतं ज्ञात्वा तत्रैव निवसन्स्थिरः ॥ ४५ ॥

ಗಂಗೆಯ ಮಧ್ಯದಲ್ಲಿ ಛಾಯಾಭಗವತೀದೇವಿಯು ಅನುಕಂಪ ಉಳ್ಳವಳಾಗಿ,

ಅಲ್ಲಿಯೇ ಇದ್ದು ಬಿಟ್ಟರು. ಆ ಕೃಷ್ಣವೇಣೀ ನದಿಯಲ್ಲಿ ಯಾವ ಮನುಷ್ಯನು ಸ್ನಾನದಾನಾದಿಗಳನ್ನು ಆ ಗಂಗಾದ್ವಾರದಲ್ಲಿ ಮಾಡುವನೋ, ೪೬

सर्वपापविशुद्धात्मा विष्णुलोकं स गच्छति ।
तत्र कुंडानि बहुशः पीतनीलसितानि च ॥ ४७ ॥

ಅವನು ಸಕಲ ಪಾಪಗಳಿಂದ ಶುದ್ಧನಾಗಿ ವಿಷ್ಣುಲೋಕವನ್ನು ಕುರಿತು ಹೋಗುವನು. ಅಲ್ಲಿ ಹಳದಿ, ನೀಲೀ ಬಣ್ಣದ ಕುಂಡಗಳು ಇರುವವು. ೪೭

ह्रदाश्च पश्चिमे भागे सर्वपापहराणि च ।
पतंत्यश्च नदीधाराः शिरसा ता बिभर्ति यः ॥ ४८ ॥

ಆ ಮಡುವಿನ ಪಶ್ಚಿಮಭಾಗದಲ್ಲಿ ಸಕಲ ಪಾಪಗಳನ್ನೂ ಪರಿಹಾರಮಾಡತಕ್ಕ ನದಿಯ ಪ್ರವಾಹದಿಂದ ಬೀಳುವ ಧಾರಾಗಳನ್ನು ಯಾರು ಶಿರಸಾ ಧಾರಣ ಮಾಡುವರೋ. ೪೮

सर्वपापविनिर्मुक्तो ब्रह्मलोके महीयते ।
तत्रादावनघं तीर्थं ततः कन्याह्रदं ततः ॥ ४९ ॥

ಸಕಲ ಪಾಪಗಳಿಂದಲೂ ಮುಕ್ತರಾಗಿ ಬ್ರಹ್ಮಲೋಕದಲ್ಲಿ ವಿರಾಜಮಾನನಾಗುವನು. ಅಲ್ಲಿ ಮೊದಲು ಅನಘತೀರ್ಥವು, ಆಮೇಲೆ ಕನ್ಯಾಹ್ರದತೀರ್ಥವು. ೪೯

ततो देवह्रदं तीर्थं सोमह्रदमतः परम् ।
सूर्यह्रदं ततो ज्ञेयं कृष्णावेण्यांतिके द्विजाः ॥ ५० ॥

ಅಲ್ಲಿಂದ ಮುಂದೆ ದೇವಹ್ರದ ತೀರ್ಥವು, ಅದರ ಮುಂದೆ ಸೋಮಹ್ರದ ತೀರ್ಥವು, ಅದರ ಮುಂದೆ ಸೂರ್ಯಹ್ರದ ತೀರ್ಥವು, ಕೃಷ್ಣವೇಣಿಯಲ್ಲಿ ಇರುವವು. ಎಂದು ತಿಳಿಯಿರಿ. ಎಂದು ಬ್ರಾಹ್ಮಣರಿಗೆ ಹೇಳಿದರು. ೫೦

षष्ठिवर्षसहस्राणि वालखिल्याः सुमेधसः ।
बदर्याश्रममासाद्य तपश्चक्रर्मदान्विताः । ५१

ನೋಡಿರುವಿರೇನು ? ಎಂದು ಕೇಳಿದರು. ೫೨

ब्रह्मोवाच –

ಬ್ರಹ್ಮ ಉವಾಚ –

बदर्याश्राश्रमे पुण्ये विष्णोर्मम शिवस्य च ।
उषित्वा दशसाहस्रं वर्षाणां यत्कृतं तपः ॥ ५३ ॥

ಬದರಿಕಾಶ್ರಮ ಪುಣ್ಯಕ್ಷೇತ್ರದಲ್ಲಿ ವಿಷ್ಣುವಿನ, ನನ್ನ, ರುದ್ರದೇವರ ಉದ್ದೇಶ ಮಾಡಿಕೊಂಡು (೧೦,೦೦೦) ಹತ್ತುಸಹಸ್ರವರ್ಷ ಪರ್ಯಂತ ತಪಸ್ಸುಮಾಡಿದ್ದರ ಫಲವು, ೫೩

पुमान्तत्फलमाप्नोति दृष्ट्वा देवह्रदं नरः ।
प्रयागेथ सहस्राणि वर्षाणां फलमाप्नुयात् ॥ ५४ ॥

ಮನುಷ್ಯನು, ಆ ಛಾಯಾದ ದೇವಹ್ರದ ದರ್ಶನಮಾತ್ರದಿಂದ ಬರುವದು. ಪ್ರಯಾಗದಲ್ಲಿ ಸಾವಿರವರ್ಷಗಳವರೆಗೆ ಮಾಡಿದ ಫಲವೂ ಇಲ್ಲಿ ಬರುವದು. ೫೪

तदाप्नोति फलं साक्षाद् दृष्ट्वा देवह्रदं नरः ।
तीर्थान्यन्यानि शतशो दिवि भुव्यंतरिक्षके ॥ ५५ ॥

ದೇವಲೋಕದಲ್ಲಿ, ಭೂಲೋಕದಲ್ಲಿ, ಅಂತರಿಕ್ಷಲೋಕದಲ್ಲಿ, ಏನು ತೀರ್ಥಗಳು ಇರುವವೋ, ಆ ಎಲ್ಲ ತೀರ್ಥಗಳ ಫಲವು, ಮನುಷ್ಯನಿಗೆ, ಛಾಯಾದಲ್ಲಿನ ದೇವಹ್ರದ ದರ್ಶನದಿಂದಲೇ ಬರುವದು. ೫೫

तानि देवह्रदे यांति राहुग्रस्ते दिवाकरे ।
एकं वा ब्राह्मणं तत्र भोजयित्वा यथाविधि ॥ ५६ ॥

ಸೂರ್ಯಗ್ರಹಣ ಕಾಲದಲ್ಲಿ, ಆ ಎಲ್ಲ ತೀರ್ಥಾಭಿಮಾನಿ ದೇವತೆಗಳು ಈ ಛಾಯಾದಲ್ಲಿನ ದೇವಹ್ರದದಲ್ಲಿ ಸನ್ನಿಹಿತರಾಗಿರುವರು. ಆ ಸಮಯದಲ್ಲಿ ಯಥಾವಿಧಿ ಒಬ್ಬ ಬ್ರಾಹ್ಮಣನಿಗಾದರೂ ಭೋಜನಮಾಡಿಸಬೇಕು. ೫೬

अद्यापि श्रूयते यत्र तस्य पुण्य फलं श्रृणु ।
क्षणमात्रं स्थितस्तत्र स्नात्वा तीर्थे समाहितः ॥ ५८ ॥

ಇನ್ನೂವರೆಗೂ ಇಲ್ಲಿ ಕೇಳಿಸುವವು, ಅವರ ಪುಣ್ಯದ ಫಲವನ್ನು ಕೇಳಿರಿ. ಒಂದು ಕ್ಷಣಮಾತ್ರ ಅಲ್ಲೆ ನಿಂತು ಸಮಾಧಾನದಿಂದ ಆ ತೀರ್ಥದಲ್ಲಿ ಸ್ನಾನಮಾಡಿ, ೫೮

स्वनश्रवणमात्रेण कोटिजन्माघनाशनम् ।
पुत्रपौत्रप्रवृद्धिश्च योगिनां गतिमश्नुते ॥ ५९ ॥

ಆ ದೇವದುಂದುಭಿ(ನಗಾರಿ)ಗಳ ಧ್ವನಿ ಶ್ರವಣ ಮಾತ್ರದಿಂದ ಕೋಟಿ ಜನ್ಮದ ಪಾಪನಾಶವಾಗಿ ಪುತ್ರ-ಪೌತ್ರ ಸಂತತಿ ವೃದ್ಧಿಯಾಗಿ ಯೋಗಿಗಳಿಗೆ ಆಗುವ ಉತ್ತಮ ಗತಿಯು ಆಗುವದು. ೫೯

एतद्देवह्रदं नाम तत्र तीर्थानि कोटिशः ।
मायया वरदो वीरः संपतन्गिरिकंदरे ॥ ६० ॥

ಆದ್ದರಿಂದ ಅದಕ್ಕೆ ದೇವಹ್ರದ ಎಂಬ ಹೆಸರು ಪ್ರಸಿದ್ಧವಾಯಿತು. ಅದರಲ್ಲಿ ಕೋಟಿತೀರ್ಥಗಳ ಸನ್ನಿಧಾನವಿರುವದು. ಅಲ್ಲಿ ಆ ಪರ್ವತಗಳ ಗಿರಿಕಂದರ ಗುಹಾಗಳಲ್ಲಿ ಪರಮಾತ್ಮನು ತನ್ನ ಮಾಯೆಯಿಂದ ಇದ್ದು ವರಪ್ರದಾನ ಮಾಡುತ್ತಿರುವನು. ೬೦

तस्याद्यापि प्रतिच्छाया देवह्रदसमीपतः ।
(देशे) विषये चोत्तरे देव्या दृश्यते गिरिकंदरे ॥ ६१ ॥

ಆ ದೇವಹ್ರದವ ಸಮೀಪದಲ್ಲಿ ಇನ್ನೂವರೆಗೂ ಈ ಭಗವಂತನ ಛಾಯಾ (ನೆರಳು), ಆ ಗಿರಿಕಂದರಗಳಲ್ಲಿ, ಆ ಮೋಹಿನಿಯ ಛಾಯೆಯು ಉತ್ತರ ದಿಕ್ಕಿನಲ್ಲಿ ಕಂಡುಬರುವದು. ೬೧

पुरापहृत्य दैत्येभ्यो विष्णुः स्त्रीरूपधृक् सुधाम् ।
वंचयित्वा ह्रदे तस्मिन्सुरेभ्यस्तां ददौ हरिः ॥ ६२ ॥

ಪೂರ್ವದಲ್ಲಿ ಪರಮಾತ್ಮನು ಮೋಹಿನೀರೂಪವನ್ನು ಧಾರಣ ಮಾಡಿ ದೈತ್ಯರಕೈಯಲ್ಲಿನ ಅಮೃತ ಪಾತ್ರೆಯನ್ನು ಹರಣಮಾಡಿ ಈ ದೇವಹ್ರದದಲ್ಲಿ (ಬಾವಿಯಲ್ಲಿ) ದೈತ್ಯರನ್ನು ವಂಚಿಸಿ, ದೇವತೆಗಳಿಗೆ ಅಮೃತವನ್ನು ಕೊಟ್ಟನು. ೬೨

समीपे तु स्थिता दैत्या तस्मात्तत्र न दृश्यते ॥ ६४ ॥

ಅಲ್ಲಿಯೇ ಪುಂಡರೀಕಾಕ್ಷನನ್ನು ನೋಡತಕ್ಕದ್ದು. ಅಲ್ಲಲ್ಲಿಯೇ ಕಂಡುಬರುವನು. ಅಲ್ಲಿಯೇ ಸಮೀಪದಲ್ಲಿ ದೈತ್ಯರೂ ಇರುವರು. ಆದರೆ ಅಲ್ಲಿ ಕಾಣಿಸುವದಿಲ್ಲ. ೬೪

स्त्रीरूपधारिणं देवं सर्वपापप्रणाशनम् ।
देवाश्च ऋषयश्चैव तमुपास्यमुपासते ॥ ६५ ॥

ಮೋಹಿನೀರೂಪಧಾರಣಮಾಡಿದ ಆ ಸ್ತ್ರೀರೂಪವನ್ನು ನೋಡಿದರೆ ಸಕಲ ಪಾಪವೂ ನಾಶವಾಗುವದು. ದೇವತೆಗಳೂ, ಋಷಿಗಳೂ, ಆ ಮೋಹಿನೀ ರೂಪಧಾರಣಮಾಡಿದ ಭಗವಂತನನ್ನು ಉಪಾಸನೆಮಾಡುತ್ತಿದ್ದಾರೆ. ೬೫

एतत्क्षेत्रं कुरुक्षेत्रात् प्रयागान्नैमिषादपि ।
सर्वेभ्यस्तीर्थवर्येभ्यो ह्यधिकं तत्प्रचक्षते ॥ ६६ ॥

ಆದಕಾರಣ ಈ ಕ್ಷೇತ್ರವು, ಕುರುಕ್ಷೇತ್ರಕ್ಕಿಂತಲೂ, ಪ್ರಯಾಗಕ್ಕಿಂತಲೂ, ನೈಮಿಷಾರಣ್ಯಕ್ಕಿಂತಲೂ, ಸಕಲ ತೀರ್ಥಕ್ಕಿಂತಲೂ, ಅಧಿಕವಾದದ್ದು ಎಂದು ಹೇಳಲ್ಪಡುವದು. ೬೬

नारद उवाच –

तदेतद्ब्रम्हणा प्रोक्तं मार्कंडेयः पुराऽब्रवीत् ।
श्रोतव्यं च मुनिःश्रेष्ठास्तत्सर्वं वोमयोदितम् ॥ ६७ ॥

ಅದನ್ನೇ ಪೂರ್ವದಲ್ಲಿ ಬ್ರಹ್ಮದೇವರು ಹೇಳಿದ್ದನ್ನು ಮಾರ್ಕಾಂಡೇಯರು ಹೇಳಿದರು. ಹೇ ಋಷಿ ಶ್ರೇಷ್ಠರೇ ! ಅದನ್ನೇ ನಾನು ಹೇಳುತ್ತಿರುವೆನು. ಕೇಳತಕ್ಕದ್ದು. ೬೭

य इदं श्रृणुयान्नित्यं भक्त्या पीयूशसंभवम् ।
तत्पुण्यं स्नानजनितं प्राप्नोत्येव न संशयः ॥ ६८ ॥

ದೇವತೆಗಳಿಗೆ ಮೋಹಿನೀ ರೂಪದಿಂದ ಅಮೃತಪ್ರಾಶನ ಮಾಡಿಸಿದ ಭಗವಂತ, ಈ ಮಾಯಾರೂಪ, ಛಾಯಾ ಮಹಾತ್ಮ್ಯವು ಅಮೃತವೇ. ಇದನ್ನು ದಿನಾಲು ಶ್ರವಣ ಮಾಡಬೇಕು. ಅಷ್ಟರಿಂದಲೇ ಅಲ್ಲಿ ಸ್ನಾನಮಾಡಿದ ಪುಣ್ಯವು ಬಂದೇ ಬರುವದು. ಇದರಲ್ಲಿ ಏನೂ ಸಂಶಯವಿಲ್ಲ. ೬೮

ततः सप्तऋषीणां च तेपुर्यत्र महर्षयः ।
तपस्तत्संज्ञकं तीर्थं यत्र प्रज्ञां लभेन्नरः ॥ १ ॥

ಯಾವ ಸಪ್ತ ಋುಷಿಗಳು ತಪಃಸ್ಸು ಮಾಡಿರುವರೋ ಆ ತೀರ್ಥದ ಮಹಿಮೆಯಿಂದ, ಯಾವ ಮನುಷ್ಯನು ವಿಶಿಷ್ಟವಾದದ್ದನ್ನು ಪಡೆಯುವನೋ, ಅದು ಸಪ್ತಋುಷಿಗಳ ತೀರ್ಥ ಎಂದು ಪ್ರಸಿದ್ಧವಿದೆ. ೧

विश्वामित्रस्ततः प्राचीं ययौ तत्र तपोधनः ।
तापसैः पूजितस्तत्र मुक्त्यै तेपे महत्तपः ॥ २ ॥

ತಪೋಧನರಾದ ವಿಶ್ವಾಮಿತ್ರ ಋುಷಿಗಳು, ಅಲ್ಲಿಂದ ಹೊರಟು ತಪಸ್ವಿಗಳಿಂದ ಪೂಜಿತರಾಗಿ, ಮುಕ್ತಿಗೋಸ್ಕರ ಮಹತ್ತರ ತಪಃಸನ್ನು ಮಾಡಹತ್ತಿದರು. ೨

ततस्तस्य पुरः साक्षात् कृष्णा च निजरूपिणी ।
श्यामांगी विष्णुचिह्नाढ्या प्रीतास्मीत्यभ्यभाषत ॥ ३ ॥

ಆ ಮೇಲೆ ಆವರ ಮುಂದೆ ಸಾಕ್ಷಾತ್ ಕೃಷ್ಣವೇಣಿಯು ತನ್ನ ನಿಜ ರೂಪದಿಂದ , ನೀಲವರ್ಣ ವಿಶಿಷ್ಟಳಾಗಿ, ವಿಷ್ಣುಚಿಹ್ನಗಳಿಂದ, ಸುಶೋಭಿತಳಾಗಿ ಬಂದು ನಾನು ಪ್ರೀತಳಾಗಿರುವೆನು ಎಂದು ಹೇಳಿದಳು. ೩

तां दृष्ट्वा सहसोत्थाय प्रणम्य भगवत्तनुम् ।
विश्वामित्रोऽब्रवीद्वाक्यं हर्षगद्गदया गिरा ॥ ४ ॥

ವಿಶ್ವಾಮಿತ್ರ ಋುಷಿಗಳು, ಆ ವಿಷ್ಣುವಿನ ಚಿಹ್ನಗಳಿಂದ ಸುಶೋಭಿತಳಾದ, ಆ ಕೃಷ್ಣವೇಣಿಯನ್ನು ನೋಡಿ, ತತ್ ಕ್ಷಣ ಎದ್ದು ನಿಂತು, ಆನಂದ ಪರವಶರಾಗಿ ಗದ್ಗದವಾದ ಕಂಠದಿಂದ, ಈ ಮಾತನ್ನು ಹೇಳಿದರು. ೪

विश्वामित्र उवाच –

नमस्ते सर्वपापघ्नी संसारभयनाशिनि ।
नारायणी जगन्मातस्त्राहि मां शरणागतम् ॥ ५ ॥

ಉಳ್ಳದ್ದು. ನೀನು ಕ್ಷಮಿಸು. ೬

भूमिस्त्वं देवि भक्तानां तत्त्वानां त्वं मनोमयम्।
तापार्तिशमनात्तोयं पापानां दहनाच्छिखि ॥ ७ ॥

ಹೇ ದೇವೀ ! ನೀನು ಭಕ್ತರಿಗೆ ಭೂದೇವಿಯು. ತತ್ವಜ್ಞಾನಿಗಳಿಗೆ ಮನೋಮಯಳು. ಸಂಕಟ ಪಡತಕ್ಕವರಿಗೆ ಶಾಂತಿಯನ್ನು ಉಂಟುಮಾಡಿಕೊಡತಕ್ಕವಳು. ಪಾಪಗಳನ್ನು ಸುಡುವದರಲ್ಲಿ ಅಗ್ನಿಯಂತೆ ಇರುವವಳು. ೭

धूतपापा नृणां चैव सर्वसत्वाश्रया ह्यसि।
पंचभूतात्मिकैव त्वं भासि विष्णुमयी यतः ॥ ८ ॥

ಮನುಷ್ಯರ ಪಾಪಗಳನ್ನು ತೊಳೆದು ಎಲ್ಲ ಬಲಗಳಿಗೂ ಆಶ್ರಯಪ್ರದಳಾಗಿ, ಪಂಚಭೂತಾತ್ಮಗಳಂತೆ ನಿಯಾಮಕಳಾಗಿ ವಿಷ್ಣುಮಯಳಾಗಿ ತೋರುತ್ತಿರುವಿ. ೮

न केवलं पूरयसि जलधीं जलसंपदाम्।
प्रपूरयसि भक्तानां कामान्सर्वान् मनोगतान् ॥ ९ ॥

ನೀನು ಕೇವಲ ಜಲಸಂಪತ್ತಿನಿಂದ ಸಮುದ್ರವನ್ನು ಮಾತ್ರ ಪೂರ್ಣಮಾಡತಕ್ಕವಳಲ್ಲ. ಭಕ್ತರ ಮನೋಗತವಾದ ಸಕಲಕಾಮನೆಗಳನ್ನೂ ಪೂರ್ಣ ಮಾಡತಕ್ಕವಳು. ೯

त्वां प्राक् स्तोतुं समासाद्य पूर्यते इति वाग्मृषा।
त्वं वै प्रयाणपाथेयं विष्णुलोकप्रदा ह्यसि ॥ १० ॥

ನಿನ್ನನ್ನು ಸ್ತೋತ್ರಮಾಡಲಿಕ್ಕೆ ಸಿದ್ಧವಾದ ನನ್ನ ವಾಕ್ಯಗಳು ಪೂರ್ಣಮಾಡಲಿಕ್ಕೆ ಸಾಧ್ಯವಾಗಲಿಲ್ಲ. ಯಾಕೆಂದರೆ ನೀನು, ವಿಷ್ಣುಲೋಕಕ್ಕೆ ಹೋಗುವವರ (ಪ್ರಯಾಣದ ದಾರೀಗುಂಟ) ಬುತ್ತೀಗಂಟು. ಅದನ್ನು ಸ್ತೋತ್ರ ಮಾಡುವದು ನನ್ನ ವಾಕ್ಯಗಳಿಗೆ ಸಾಧ್ಯವಿಲ್ಲ. ೧೦

दूरात् स्मृता ह्यघौघघ्नी स्नानेनेष्टफलप्रदा।
मुक्तिस्त्वद्दर्शनाद्देवि न जाने स्नानजं फलम् ॥ ११ ॥

स्थावरश्चाधिक धन्याः स्वेच्छया स्नाति ये त्वयि ॥ १२ ॥

ಹೇ ತೀರ್ಥಸ್ವಾಮಿನೀ ! ನೀನೆ ಧನ್ಯಳು. ನಿನ್ನ ತೀರದಲ್ಲಿ ಇರುವ ಮೃಗಗಳು, ಸಕಲ ಪ್ರಾಣಿಗಳು, ಸ್ಥಾವರಗಳು, ಪರಮಧನ್ಯರು. ಯಾಕೆಂದರೆ ಅವರು ಸ್ವೇಚ್ಛೆಯಿಂದಲೇ ನಿನ್ನಲ್ಲಿ ಸ್ನಾನಮಾಡುವರು. ೧೨

त्वत्तीरवासिनः स्यामो मातर्जन्मनि जन्मनि ।
त्वत्तीरस्था वयं मातर्यत्किंचिदपराध्नुमः ॥ १३ ॥

ಹೇ ತಾಯಿ ! ಜನ್ಮ-ಜನ್ಮಾಂತರಗಳಲ್ಲಿ ನಿನ್ನ ತೀರದಲ್ಲಿ ವಾಸಮಾಡುವ ಭಾಗ್ಯಕೊಡು. ನಾವು ನಿನ್ನ ತೀರದಲ್ಲಿ ಇದ್ದರೆ, ಸಕಲ ಅಪರಾಧಗಳನ್ನು ತೊಳೆದುಕೊಳ್ಳುವೆವು. ೧೩

तत्क्षमस्वाशुचिः कायः सदा ह्येषः स्रवन्मलः ।

प्रसीद मे देवि सदा परेज्ये देवेन सृष्टा जगतां विमुक्तये.
स्नाने न यस्यामवधूतपापः प्राप्नोति विष्णोः पदमेव मर्त्यः ॥ १४ ॥

ಹೇ ದೇವಿ ! ನೀನು ಯಾವಾಗಲೂ ಶುಚಿಭೂತವಾದ ಸ್ವರೂಪ ಉಳ್ಳವಳು. ನಮ್ಮ ದೋಷಗಳನ್ನೆಲ್ಲ ನಿನ್ನಲ್ಲಿ ಬಿಟ್ಟು ಬಿಡುವೆವು. ಆದ್ದರಿಂದ ನಮ್ಮ ಅಪರಾಧವನ್ನು ಕ್ಷಮಾ ಮಾಡು. ಯಾವ ನಿನ್ನ ನೀರಿನಲ್ಲಿ ಸ್ನಾನಮಾಡಿ, ಎಲ್ಲ ಪಾಪಗಳನ್ನು ಕಳೆದುಕೊಂಡು ಮನುಷ್ಯನು ವಿಷ್ಣುಲೋಕವನ್ನು ಕುರಿತು ಹೋಗುವನು. ೧೪

नारद उवाच –

एवं संस्तुवतस्तस्य तुष्टा देवी वरं ददौ ।
वव्रे सोऽपीच्छया मुक्तिं तथास्त्विति च साऽब्रवीत् ॥ १५ ॥

ಹೀಗೆ ಸ್ತೋತ್ರ ಮಾಡುವ ವಿಶ್ವಾಮಿತ್ರ ಋಷಿಗಳಿಗೆ ಸಂತುಷ್ಟಳಾಗಿ ವರವನ್ನು ಕೊಟ್ಟಳು. ಆ ವಿಶ್ವಾಮಿತ್ರ ಋಷಿಗಳು ಮುಕ್ತಿಯನ್ನು ಬೇಡಿದರು. ಹಾಗೇ ಆಗಲಿ ಎಂದು ವಚನ ಕೊಟ್ಟಳು. ೧೫

तदेतत्परमं तीर्थं विश्वामित्राख्यमद्भुतम् ॥ १७ ॥

ಆಮೇಲೆ ವಿಶ್ವಾಮಿತ್ರ ಋಷಿಗಳು ಅಲ್ಲಿ ಬಹಳ ದಿವಸಗಳ ಪರ್ಯಂತರ ವಾಸಮಾಡಿದರು. ಆದ್ದರಿಂದ ಆದು ವಿಶ್ವಾಮಿತ್ರ ಎಂಬ ಹೆಸರಿನಿಂದಲೆ ಅದ್ಭುತವಾದ ಪರಮ ತೀರ್ಥವೆಂದು ಪ್ರಸಿದ್ಧವಾಯಿತು. ೧೭

ततः प्राक् प्रवरं तीर्थं ऋष्यश्रृंगाश्रमे शुभे ।
ततः कर्कटिकास्थानं तत्र स्नात्वा विमुच्यते ॥ १८ ॥

ಅದರ ಮುಂದೆ ಶ್ರೇಷ್ಠವಾದತೀರ್ಥವು, ಶುಭಕರವಾದ ಋಷ್ಯಶೃಂಗ ಋಷಿಗಳ ಅಶ್ರಮದಲ್ಲಿ ಇರುವದು. ಅದರ ಮುಂದೆ ಕರ್ಕಟಿಕಾ ಸ್ಥಾನವಿದೆ. ಅಲ್ಲಿ ಸ್ನಾನಮಾಡಿದರೆ ಮೋಕ್ಷವಾಗುವದು. ೧೮

लवणाख्यं ततस्तीर्थं ततो लिंगं तटं शुभम् ।
तत्र स्नात्वा शिवं दृष्ट्वा रुद्रलोके महीयते ॥ १९ ॥

ಆದರ ಮುಂದೆ ಲವಣತೀರ್ಥವಿರುವದು. ಶುಭಕರವಾದ ರುದ್ರದೇವರ ಲಿಂಗವದು. ಅಲ್ಲಿ ಸ್ನಾನಮಾಡಿ ರುದ್ರದೇವರ ದರ್ಶನ ಪಡೆದರೆ ರುದ್ರಲೋಕದಲ್ಲಿ ವಿರಾಜಮಾನರಾಗುವರು. ೧೯

ततो भीमरथी याता कृष्णायोगाभिकांक्षिणी ।
यत्र शंभुः स्वयंभूतः संगमेशेति कीर्त्यते ॥ २० ॥

ಅಲ್ಲಿಂದ ಮುಂದೆ ಭೀಮರಥಿಯು, ಕೃಷ್ಣವೇಣಿಯ ಯೋಗದ ಆಕಾಂಕ್ಷೆಯುಳ್ಳವಳಾಗಿ ಬರುವಳು. ಅಲ್ಲಿ ಸಂಗಮೇಶ ಎಂದು ಕರೆಯಿಸಿಗೂಳಲ್ಪಡುವ, ಸ್ವಯಂಭೂ ಶಂಕರರು ಇರುವರು.. ೨೦

तत्संगमे महातीर्थे स्नात्वा दृष्ट्वा च देवताः ।
सर्वजन्मकृतं पापं त्यक्त्वा मुक्तिमवाप्नुयात् ॥ २१ ॥

ಆ ಸಂಗಮದಲ್ಲಿ ಮಹಾತೀರ್ಥದಲ್ಲಿ, ಸ್ನಾನಮಾಡಿ ದೇವತೆಗಳ ದರ್ಶನ ಪಡೆದರೆ, ಸರ್ವಜನ್ಮಗಳಲ್ಲಿ ಮಾಡಿದ ಪಾಪಗಳನ್ನು ಕಳೆದು ಕೊಂಡು, ಮುಕ್ತಿಯನ್ನು ಪಡೆಯುವರು. ೨೧

देवीं विशुद्धामायातो गच्छंतीं पापमुक्तये ॥ २३ ॥

ಆ ಗಿರಿತ್ರಯದ ಮಗ್ಗಲಲ್ಲಿ ಲವಣನೆಂಬ ನಿಶಾಚರನು (ರಾಕ್ಷಸನು) ಪರ್ವತನಾಗಿ ಇರುವನು. ಪಾಪದಿಂದ ಬಿಡುಗಡೆ ಮಾಡುತ್ತ ಹೊರಟಿರುವ, ವಿಶುದ್ಧಳಾದ ಕೃಷ್ಣವೇಣಿಯನ್ನು ಕುರಿತು ಬಂದನು. ೨೩

गर्जंतं तमथासाद्य कृष्णावेण्यांभसा तदा ।
दृष्ट्वा विष्णुश्च तरसा विभेद समहासुरम् ॥ २४ ॥

ಕೃಷ್ಣವೇಣಿ ನದಿಯ ನೀರಿನಲ್ಲಿ ಗರ್ಜಿಸುತ್ತ ಬರುವ ಆ ಲವಣಾಸುರನನ್ನು ನೋಡಿ, ಕೂಡಲೇ ಸಾಕ್ಷಾತ್ ವಿಷ್ಣುವು ಆ ಲವಣಾಸುರನನ್ನು ಸೀಳಿ ಒಗೆದನು. ೨೪

सोऽपि तत्तोयसंस्पर्शान्नष्टाघौघो दिवं ययौ ।
कृतार्थस्तु ततो देवीं स्तुत्वा लेभे सरोवरम् ॥ २५ ॥

ಆ ಲವಣಾಸುರನು, ಆ ಕೃಷ್ಣವೇಣಿಯ ಸಂಸ್ಪರ್ಶದಿಂದ ಸಕಲ ಪಾಪಗಳನ್ನೂ ಕಳೆದು ಕೊಂಡು, ಕೃತಾರ್ಥನಾಗಿ ಕೃಷ್ಣವೇಣಿಯನ್ನು ಸ್ತೋತ್ರ ಮಾಡುತ್ತ, ವರವನ್ನು ಪಡೆದುಕೊಂಡು ದೇವಲೋಕಕ್ಕೆ ಹೊರಟುಹೋದನು. ೨೫

अतः स्नानेन विख्यातं तीर्थमेतन्महाफलम् ।
स्नायाल्लवणभेदे यः कृष्णं कृष्णां च संस्मरन् ॥ २६ ॥

ಆದ್ದರಿಂದ ಈ ಲವಣ ತೀರ್ಥವು ಕೇವಲ ಸ್ನಾನದಿಂದಲೇ ಪ್ರಸಿದ್ಧವಾಗಿರುವದು. ಇದು ಮಹಾಫಲಪ್ರದವೂ, ಆಗಿರುವದು. ಈ ಲವಣತೀರ್ಥದಲ್ಲಿ ಯಾರು ಸ್ನಾನಮಾಡಿ ಶ್ರೀಕೃಷ್ಣಪರಮಾತ್ಮನನ್ನೂ, ಕೃಷ್ಣವೇಣಿಯನ್ನೂ, ಸ್ಮರಣ ಮಾಡುವರೋ, ೨೬

सर्वकामानवाप्नोति विष्णुलोकं स गच्छति ।
ततःपरं यत्र कृष्णां तुंगभद्रासमागमः ॥ २७ ॥

ಅವರು ಸಕಲ ಕಾಮನೆಗಳನ್ನೂ, ಪಡೆಯುವರು. ಆಮೇಲೆ ವಿಷ್ಣುಲೋಕವನ್ನು ಕುರಿತು ಹೋಗುವರು. ಆದರ ಮುಂದೆ ಕೃಷ್ಣ-ತುಂಗಭದ್ರಾ ಸಂಗಮವಿರುವದು. ೨೭

सप्तजन्मकृतं पापं तत्क्षणादेव नश्यति ।
तत्र ब्रह्मेश्वरः साक्षाद्ब्रह्मणा निर्मितः पुरा ॥ २९ ॥

ಏಳೇಳು ಜನ್ಮದ ಪಾಪಗಳೆಲ್ಲವೂ, ತಕ್ಷಣ ನಾಶವಾಗುವವು. ಆ ಸಂಗಮದಲ್ಲಿ ಬ್ರಹ್ಮದೇವರು ಸಾಕ್ಷಾತ್ ಸ್ವತಃ ಬ್ರಹ್ಮೇಶ್ವರನನ್ನು ನಿರ್ಮಾಣ ಮಾಡಿ ಸ್ಥಾಪಿಸಿರುವರು. ೨೯

संगे स्नात्वा तमभ्यर्च्य प्राप्नोति परमां गतिम् ।
तत्र स्नानान्निवर्तन्ते ह्यघौघाः संस्मृतेरपि ॥ ३० ॥

ಆ ಸಂಗಮದಲ್ಲಿ ಸ್ನಾನಮಾಡಿ, ಆ ಬ್ರಹ್ಮೇಶ್ವರನನ್ನು ಪೂಜೆಮಾಡಿದರೆ, ಪರಮ ಶ್ರೇಷ್ಠವಾದ ಗತಿಯನ್ನು ಪಡೆಯುವರು. ಅಲ್ಲಿಯ ಸ್ನಾನದಿಂದ ಪಾಪಗಳ ಸಮೂಹಗಳೂ, ಅವುಗಳ ಸ್ಮರಣವೂ ಕೂಡ ನಿವೃತ್ತಿಯಾಗುವವು. ೩೦

सा निवृत्तिं ततः प्राप्ता तत्कृष्णातीरमुत्तमम् ।
तत्संगमे नरः स्नात्वा गायत्रीं च त्र्यहं जपन् ॥ ३१ ॥

ಅಲ್ಲಿಂದ ಹೊರಟು ಕೃಷ್ಣವೇಣಿಯು, ಮುಂದೆ ಬಂದರೆ ನಿವೃತ್ತಿಸಂಗಮ ಬರುವದು. ಆ ಸಂಗಮದಲ್ಲಿ ತ್ರಿಕಾಲ ಸ್ನಾನಮಾಡಿ ಮೂರೂ ಹೊತ್ತು ಗಾಯತ್ರೀ ಜಪವನ್ನು ಮಾಡಬೇಕು. ೩೧

ब्रह्मलोकं व्रजेन्मुक्तो विशेषेण रविग्रहे ।
ततो लिंगतटं नाम तीर्थं स्नानाद्विमुक्तिदम् ॥ ३२ ॥

ಸ್ನಾನಮಾಡಿದವರು ಬ್ರಹ್ಮಲೋಕಕ್ಕೆ ಹೋಗುವರು. ವಿಶೇಷತಃ ಸೂರ್ಯಗ್ರಹಣ ಕಾಲದಲ್ಲಿ ವಿಶಿಷ್ಟ ಫಲಪ್ರಾಪ್ತಿ. ಅದರ ಮುಂದೆ ಲಿಂಗತಟವೆಂಬತೀರ್ಥವಿರುವದು. ಅಲ್ಲಿ ಸ್ನಾನಮಾಡಿದರೆ ಮೋಕ್ಷವಾಗುವದು. ೩೨

भीमेश्वरस्ततो मध्ये यस्यादौ पूजनं भवेत् ।

ऋषय उचुः –

निवृत्तिसंगमः कस्मात् ख्यातः कृष्णातटे गुह।

स्कंद उवाच –

श्रृणुध्वं मुनयः सर्वे विचित्रं सुमनोहरम् ॥ ३४ ॥

ಹೇ ಷಣ್ಮುಖರೆ ! ಕೃಷ್ಣಾತಟಾಕದಲ್ಲಿ ನಿವೃತ್ತಿ ಸಂಗಮ ಎಂಬುವುದು ಯಾವ ಕಾರಣದಿಂದ ಪ್ರಸಿದ್ಧವಾಗಿದೆ ?

ಸ್ಕಂದನು ಅಂದನು –

ಋಷಿಗಳೇ ! ಕೇಳಿರಿ. ವಿಚಿತ್ರವಾದ ಮನೋಹರವಾದ ಇತಿಹಾಸ ಉಂಟು. ೩೪

श्रवणाज्जायते नित्यं निर्वृत्तिस्तु पदे पदे ।
द्वापरे वासुदेवस्तु पांडवैः सह आययौ ॥ ३५ ॥

ಆ ಚರಿತ್ರೆ ಕೇಳಿದರೆ ಹೆಜ್ಜೆ ಹೆಜ್ಜೆಗೆ ವೈರಾಗ್ಯ ಹುಟ್ಟುವದು. ದ್ವಾಪರಯುಗದಲ್ಲಿ ಶ್ರೀಕೃಷ್ಣಪರಮಾತ್ಮನು, ಪಾಂಡವರಿಂದ ಕೂಡಿಕೊಂಡು ಬಂದನು. ೩೫

कृष्णातटं समासाद्य रम्यं भुवनपावनम् ।
मनसोपशमो यत्र तत्र निर्वृतिरप्यभूत् ॥ ३६ ॥

ಯಾವ ಸ್ಥಳದಲ್ಲಿ ಮನಃಸಿಗೆ ಪರಮಶಾಂತಿ ಸಿಗುವದೋ, ಚತುರ್ದಶ ಭುವನಗಳಲ್ಲಿಯೇ ಪರಮ ಪವಿತ್ರವಾದ, ರಮಣೀಯವಾದ, ಕೃಷ್ಣಾತಟಾಕವನ್ನು ಕುರಿತು ಬಂದರೆ ಅಲ್ಲಿಯೇ ವೈರಾಗ್ಯ ಹುಟ್ಟುವುದು. ಆದ್ದರಿಂದಲೇ ಅದಕ್ಕೆ ನಿವೃತ್ತಿ ಸಂಗಮವೆಂದು ಹೆಸರು. ೩೬

उवाचोच्चैः सकृष्णस्तु धर्मराजं युधिष्ठिरम् ।
तीर्थं ज्ञानप्रदं साक्षाद्वैराग्यैकनिधिः प्रभो ॥ ३७ ॥

ಶ್ರೀಕೃಷ್ಣಪರಮಾತ್ಮನು ಉಚ್ಚ ಧ್ವನಿಯಿಂದ ಧರ್ಮರಾಜನಿಗೆ ಹೇಳಿದನು. ಆ ತೀರ್ಥವು ಜ್ಞಾನಪ್ರದವೂ ಆಗಿದೆ. ಸಾಕ್ಷಾತ್ ಹೇ ಪ್ರಭೋ ! ಅದು ವೈರಾಗ್ಯದ ಮುಖ್ಯವಾದ ಖಣಿಯಾಗಿರುವುದು. ೩೭

श्रुत्वा कृष्णस्य वचनं प्रहसन्स युधिष्ठिरः।
त्वमेव सर्ववेत्तासि यथा योग्यं तथा कुरु ॥ ३९ ॥

ಈ ಕೃಷ್ಣನ ಮಾತನ್ನು ಕೇಳಿ ಧರ್ಮರಾಜನು ಮಂದಹಾಸದಿಂದ ಸರ್ವಜ್ಞನೇ! ನೀನು ಎಲ್ಲವನ್ನೂ ತಿಳಿದವನಿರುವಿ. ನಿನಗೆ ಯೋಗ್ಯವಾದದ್ದನ್ನೇ ಮಾಡು. ೩೯

एतादृशः पुमान्कोऽत्र सिद्धलिंगं सबीजकम्।
स्थापयिष्यति वै यत्नाद्विना काशीं च केशव ॥ ४० ॥

ಹೇ ಕೇಶವನೇ! ಸಬೀಜಾತ್ಮಕವಾದ, ಈ ಸಿದ್ಧಲಿಂಗವನ್ನು ಅಂತಹ ಯಾವ ಬಲಿಷ್ಠನಾದ ಪುರುಷನು ಸ್ಥಾಪನೆ ಮಾಡಿರುವನು. ಕಾಶಿಯ ಹೊರತಾಗಿ ಬೇರೆ ಕಡೆಗೆ ಪ್ರಯತ್ನ ಮಾಡಿದವರು ಯಾರು. ೪೦

इति धर्मवचः श्रुत्वा भीमो धर्मं च केशवम्।
अब्रवीदानयिष्यामि मूहूर्ते द्वादशेऽह्निके ॥ ४१ ॥

ಹೀಗೆ ಧರ್ಮರಾಜನ ಮಾತುಗಳನ್ನು ಕೇಳಿ ಭಿಮಸೇನ ದೇವರು ಧರ್ಮರಾಜನಿಗೂ ಶ್ರೀಕೃಷ್ಣಪರಮಾತ್ಮನಿಗೂ ಹೇಳಿದರು. ೧೨ ನೇ (ಹನ್ನೆರಡನೇ ದಿವಸ) ಮಧ್ಯಾಹ್ನ ಮುಹೂರ್ತಕ್ಕೇನೇ ತಗೊಂಡು ಬರುವೆನು. ೪೧

ते तुष्टमनसः सर्वे साधु साध्विति तं ब्रुवन्।
गच्छ शीघ्रमितो भीम देवस्थापितमत्र तु ॥ ४२ ॥

ಎಲ್ಲರೂ ಬಹಳ ಸಂತೋಷದಿಂದ ಪರಿತುಷ್ಟರಾಗಿ ಸಾಧು-ಸಾಧು ಎಂದು ಹೇಳುತ್ತ, ಈಗಲೇ ಹೊರಡು. ಬೇಗನೇ ಹೋಗು. ಇಲ್ಲಿಯೇ ನಿಜವಾಗಿಯೂ ಲಿಂಗವನ್ನು ಸ್ಥಾಪಿಸುವದು. ೪೨

वाराणस्यां तु जीर्णं यत्पूजार्हं सर्वकामदम्।
स्वसामर्थ्यानरूपं त शीघ्रमानेतमर्हसि ॥ ४३ ॥

ಹೇಳಿ. ೪೪

इत्युक्त्वा स जगामाशु काशीं त्रिनयनात्मिकाम् ।
लिंगं महत्तदा गृह्य स्कंधे धृत्वा ह्युदारधीः ॥ ४५ ॥

ಕಾಶೀಕ್ಷೇತ್ರಕ್ಕೆ ಬೇಗನೇ ಹೋದರು. ಉದಾರವಿಶಿಷ್ಟವಾದ ಗುಣಗಳುಳ್ಳ ಬುದ್ಧಿವಂತರಾದ ಭೀಮಸೇನದೇವರು, ಮಹತ್ತರವಾದ ಆ ಮಹಾದೇವರ ಲಿಂಗವನ್ನು ತೆಗೆದುಕೊಂಡು ಹೆಗಲಮೇಲೆ ಇಟಗೊಂಡು. ೪೫

सत्वरं पंचपंचाशद्योजनानि चचार ह ।
द्वादशे दिवसे प्राप्ते मुहूर्तद्वादशे तदा ॥ ४६ ॥

ಬಹಳ ಗಡಿಬಿಡಿಯಿಂದ (೫೫) ಐವತ್ತೈದು ಯೋಜನೆಗಳನ್ನು ನಡೆಯುತ್ತ ಬರುತ್ತಿದ್ದರು. ಅಷ್ಟರಲ್ಲಿ ೧೨ನೇ ದಿವಸ ಮಧ್ಯಾಹ್ನ ೧೨ ಗಂಟೆ ಆಯಿತು. ೪೬

व्यग्राः पार्था न ददृशुर्भीमं परनिषूदनम् ।
मुहूर्तातिक्रमः कृष्ण किं कर्तव्यं तु तापसैः ॥ ४७ ॥

ವೈರಿಗಳನ್ನು ಸೀಳತಕ್ಕ ಭೀಮಸೇನನು ಸರಿಯಾದ ಮುಹೂರ್ತಕ್ಕೆ ಬರದೇ ಇದ್ದದ್ದನ್ನು ನೋಡಿ, ಎಲ್ಲ ಪಾಂಡವರು ಚಿಂತಸಹತ್ತಿದರು. ಶ್ರೀಕೃಷ್ಣನೇ ! ಮುಹೂರ್ತಮೀರಿ ಹೋಗುವದು. ಮುಂದೇನು ಮಾಡುವುದು ಎಂದು ಎಲ್ಲ ತಪಸ್ವಿಗಳು ಕೇಳಿದರು. ೪೭

तावत्कृष्णो जगादोच्चैरुपायं चिंत्यतामिति ।
शुष्कं तु तित्तिडीवृक्षमूलं तत्तीरसंश्रितम् ॥ ४८ ॥

ಅಷ್ಟರಲ್ಲಿ ಶ್ರೀಕೃಷ್ಣಪರಮಾತ್ಮನು ವಿಚಾರಮಾಡಿ ಉಪಾಯಗಳನ್ನು ಹೇಳಿದನು. ಒಣಗಿದ ತಿತ್ತಿಡೀವೃಕ್ಷದ ಬುಡವನ್ನು, ಕೃಷ್ಣಾತೀರವನ್ನು ಆಶ್ರಯಿಸಿಕೊಂಡು ಇರುವ ಲಿಂಗವನ್ನು. ೪೮

तावद्भीमोऽपि तल्लिगं गृहीत्वा कृच्छ्रतोऽभ्यगात् ॥ ५० ॥

ಪೂಜ್ಯರಾದ ಆ ಋಷಿಗಳು ತಮ್ಮ ತಪಃಸಿನ ಬಲದಿಂದ, ಪೂಜೆಗೆ ಅರ್ಹನಾದ ಆ ರುದ್ರದೇವರ ದಾರುಮಯ ಲಿಂಗವನ್ನು ಪ್ರತಿಷ್ಠಿಸಿ ಪೂಜೆಮಾಡಿದರು. ಅಷ್ಟರಲ್ಲಿ ಭೀಮಸೇನ ದೇವರು ಆ ಲಿಂಗವನ್ನು ತೆಗೆದುಕೊಂಡು ಬಂದರು. ೫೦

दृष्ट्वा भीमोऽपि संक्रुद्धः प्रोक्तवान् किं कृतं हि भो ।
तल्लिगं प्राक्षिपद्भीमो नद्यां बलसमुच्छ्रयात् ॥ ५१ ॥

ಭೀಮಸೇನದೇವರು ಅದನ್ನು ನೋಡಿ ಸಿಟ್ಟಿನಿಂದ ಹೇ ಭೋ ಋಷಿ ! ಇದನ್ನು ಏನು ಮಾಡತಕ್ಕದ್ದು. ಎಂದು ಕೇಳಿ ಆ ಲಿಂಗವನ್ನು ತಮ್ಮ ಎಲ್ಲ ಬಲಪ್ರಯೋಗದಿಂದ ಭೀಮಸೇನ ದೇವರು ನದಿಯಲ್ಲಿ ಚೆಲ್ಲಿದರು. ೫೧

तत्साहसं भीमकृतमवलोक्य तदा हरिः ।
प्रोवाच ऋषिसंघानां श्रुण्वतां भीममित्यनु ॥ ५२ ॥

ಭೀಮಸೇನ ದೇವರ ಸಾಹಸವನ್ನು ನೋಡಿ ಶ್ರೀ ಹರಿಯು, ಎಲ್ಲ ಋಷಿಗಳಿಗೂ ಕೇಳುವಂತೆ ಇದು ಭೀಮಲಿಂಗ ಎಂದು ಹೇಳಿದನು. ೫೨

त्वतः कालातिक्रमेऽपि जाते किं साहसं कृतम् ।
तथापि श्रुणु कौंतेय भीमलिंगं भवेदिदम् ॥ ५३ ॥

ಕುಂತೀಸುತನಾದ ಭೀಮನೇ, ಕಾಲಮೀರಿ ಹೋದದ್ದರಿಂದ ಬೇರೆ ಲಿಂಗ ಪ್ರತಿಷ್ಠೆ ಆಯಿತು. ಯಾಕೆ ಈ ಸಾಹಸ, ಆದರೂ ಕೇಳು, ನೀನು ತಂದ ಲಿಂಗ ಭೀಮಲಿಂಗ ಎಂದು ಪ್ರಸಿದ್ಧವಾಗಲಿ. ೫೩

पूजयेत्प्रथमं चैतत्पश्चान्मत्स्थापितं नरः ।
सफलं पूजनं तस्य नोचेद्व्यर्थं भविष्यति ॥ ५४ ॥

ಮೊದಲು ನೀನು ತಂದ ಲಿಂಗ ಪೂಜೆ ಆಗಲಿ. ಆಮೇಲೆ ನಾನು ಸ್ಥಾಪಿಸಿದ ಲಿಂಗ

श्रुत्वाऽध्यायमिमं सम्यक्श्रावयेद्वा समाहितः ।
निवृत्तिसंगमस्नानजनितं फलमाप्नुयात् ॥ ५६ ॥

ಯಾರು ಸಮಾಧಾನಮನಃಸಿನಿಂದ ಈ ಅಧ್ಯಾಯವನ್ನು ಶ್ರವಣ ಮಾಡುವರೋ ಅವರಿಗೆ ನಿವೃತ್ತಿ ಸಂಗಮದ ಸ್ನಾನದ ಫಲವು ಬರುವುದು. ೫೬.

॥ इति श्रीस्कंदपुराणे कृष्णामाहात्म्ये निवृत्तिसंगमक्षेत्रमाहात्म्यवर्णनं नाम सप्तपंचाशत्तमोऽध्यायः ॥

❀ ❀ ❀

## ॥ अथ अष्टपंचाशत्तमोऽध्यायः ॥

स्कंद उवाच –

निवृत्तिसंगमादग्रे बाणयुग्मांतरेण हि ।
कृष्णातीर्थमिति ख्यातं कृष्णपादाब्जवंदनात् ॥ १ ॥

ನಿವೃತ್ತಿ ಸಂಗಮದ ಮುಂದೆ ಎರಡು ಬಾಣಗಳ ಅಂತರದಲ್ಲಿ ಕೃಷ್ಣತೀರ್ಥ ಎಂಬ ಪ್ರಸಿದ್ಧವಾದ ತೀರ್ಥವಿದೆ. ಕೃಷ್ಣಪರಮಾತ್ಮನ ಪಾದಾರವಿಂದಗಳಲ್ಲಿ ನಮಸ್ಕಾರ ಮಾಡೋಣ ದರಿಂದ ಕೃಷ್ಣತೀರ್ಥವೆಂದು ಪ್ರಸಿದ್ಧವಾಗಿದೆ. ೧

तत्तीर्थदर्शनान्नित्यं महापातकनाशनम् ।
कृष्णातीर्थे नरः स्नात्वा विष्णुलोकं स गच्छति ॥ २ ॥

ದಿನಾಲೂ ಕೃಷ್ಣತೀರ್ಥದ ದರ್ಶನದಿಂದ ಮಹಾಪಾತಕಗಳು ನಾಶವಾಗುವವು. ಆ ಕೃಷ್ಣ ತೀರ್ಥದಲ್ಲಿ ಸ್ನಾನ ಮಾಡುವವರು ವಿಷ್ಣು ಲೋಕವನ್ನು ಕುರಿತು ಹೋಗುವರು.

सदा सन्निहितो रुद्रो देव्या सर्वगुणैः सह ॥ ४ ॥

ಅನೇಕ ವಿಧವಾಗಿ ಆಶ್ಚರ್ಯಕರವಾದ, ಸಿದ್ಧಗಂಧರ್ವರಿಂದ ಸೇವಿತವಾದ ಪಾರ್ವತೀ ದೇವಿಯಿಂದಲೂ, ಸಕಲ ಗಣಗಳಿಂದಲೂ, ಕೂಡಿಕೊಂಡು ರುದ್ರದೇವರು ಯಾವಾಗಲೂ ಸನ್ನಿಹಿತರಾಗಿರುವರು. ೪

तं दृष्ट्वा श्रीगिरिं देवी सर्वदेवाश्रयं शुभम्।
त्रायंती नाममात्रेण गंगा कृष्णाघहारिणी ॥ ५ ॥

ಕೃಷ್ಣವೇಣಿದೇವಿಯು ಸರ್ವದೇವತೆಗಳಿಗೂ ಆಶ್ರಯ ದಾಯಕವಾದ, ಶುಭಕರವಾದ, ಶ್ರೀ ಗಿರಿಯನ್ನು ನೋಡಿ ಪಾಪಪರಿಹಾರಕಳಾದ ಕೃಷ್ಣವೇಣಿ, ಗಂಗಾ ದೇವಿಯ ನಾಮಸ್ಮರಣದಿಂದ ರಕ್ಷಣ ಮಾಡತಕ್ಕವಳು. ೫

विनयादिव गच्छंतीं प्रीत्या त्वाहूय तां सुराः।
आगच्छ वरदे गंगे सर्वलोकैकपावनि ॥ ६ ॥

ವಿನಯದಿಂದ ಪ್ರವಾಹರೂಪಳಾಗಿ ಹೊರಡುವ ಆ ಕೃಷ್ಣವೇಣಿಯನ್ನು ನೋಡಿ, ದೇವತೆಗಳೆಲ್ಲರೂ ಪರಮಪ್ರೀತಿಯಿಂದ, ಹೇ ಗಂಗೇ ! ಸರ್ವ ಲೋಕವನ್ನೂ ಪವಿತ್ರ ಮಾಡುವವಳು. ವರಪ್ರದಳಾಗಿ ಬರುವವಳಾಗು. ೬

सर्वगे त्वं जटोद्भूते कृष्णवेणि महापथि।
गिरिं दृष्ट्वा महारौद्रं सिद्धयोगीनिषेवितम् ॥ ७ ॥

ಸರ್ವದೇಶದ ಸಂಚಾರಿಣೀ, ಜಟೋದ್ಭೂತಳೇ, ಕೃಷ್ಣವೇಣೀ, ಮಹಾಪಥಿಗಳೇ, ಪರಮ ಭಯಂಕರವಾದ ಸಿದ್ಧರಿಂದಲೂ, ಯೋಗಿಯಿಂದಲೂ, ಸೇವಿಸಲ್ಪಡುವ ಈ ಪರ್ವತವನ್ನು ನೋಡಿ. ೭

दुर्भेद्यं मंत्रतश्चैवं दर्शनादघनाशनम्।
प्रादक्षिण्येन गंतव्यमिमं देशं विहाय च ॥ ८ ॥

ಎಲ್ಲ ಸಾಧನಗಳಿಂದಲೂ, ದುರ್ಭೇದ್ಯವಾದ ದರ್ಶನಮಾತ್ರದಿಂದ ಪಾಪಪರಿಹಾರ

ಶ್ರೀಗಿರಿಯನ್ನೇ ಭೇದಿಸಿಕೊಂಡು ಎರಡು ಪರ್ವತಗಳ ಮಧ್ಯ ದಾರಿ ಮಾಡಬಹುದು. ೯

एतदाकर्ण्य सहसा कृष्णवेणी चुकोप ह ।
ततो बिभेद तं शैलं दुर्भेद्यं जललीलया ॥ १० ॥

ಈ ಮಾತನ್ನು ಕೇಳಿ ಒಮ್ಮೆಲೇ ಕೃಷ್ಣವೇಣಿಯು ಸಿಟ್ಟಿಗೆ ಬಂದು ದುರ್ಭೇಧ್ಯವಾದ ಈ ಪರ್ವತವನ್ನು ಜಲಕ್ರೀಡೆಯಿಂದ ಭೇದಿಸಿಕೊಂಡು ಹೊರಟಳು. ೧೦

पातालगंगेत्यभिधां लेभे गह्वरगामिनी ।
ततस्तुष्टास्तु ते देवा सर्वे देवीं वरान्ददुः ॥ ११ ॥

ಭಯಂಕರವಾದ ಗಹ್ವರ, ಗುಹಾಗಾಮಿನಿಯಾಗಿ ಹೊರಟಳು. ಆದ್ದರಿಂದ ಅವಳಿಗೆ ಪಾತಾಳ-ಗಂಗೆ ಎಂದು ಎಲ್ಲ ದೇವತೆಗಳೂ ಸ್ತೋತ್ರಮಾಡಿ ವರಗಳನ್ನು ಕೊಟ್ಟರು. ೧೧

सान्निध्यं ते सदा चास्तु तथेत्युक्त्वा जगाम ह ।
गंगा त्रिपथगा यत्र जलकल्लोलराशिभिः ॥ १२ ॥

ನಿನ್ನ ಸಾನ್ನಿಧ್ಯವು ಇಲ್ಲೆ ಸರ್ವದಾ ಇರಲಿ. ತಥಾಸ್ತು ಎಂದು ಕೃಷ್ಣವೇಣಿಯು ತ್ರಿಪಥಗಾ ಆಗಿ ಜಲತರಂಗಗಳ ಸಮೂಹದಿಂದ ಹೊರಟಳು. ೧೨

भोगावती समुल्लासादिति तत् पर्वतान्तिके ।
रवेः किरणजा देवी यमुना चापि संगता ॥ १३ ॥

ಆ ಪರ್ವತದ ಸಮೀಪದಲ್ಲಿ ಪರಮ ಉತ್ಸಾಹದಿಂದ ಬರತಕ್ಕವಳು ಭೋಗಾವತೀಯು, ಸೂರ್ಯನ ಕಿರಣಗಳಿಂದ ಹುಟ್ಟಿದವಳು. ಯಮುನಾದೇವಿಯಿಂದ ಕೂಡಿಕೊಂಡು ಬರತಕ್ಕವಳು. ೧೩

नीलगंगेति ऋषयो नाम चक्रुर्मुदान्विताः ।
गंगा च यमुना चैव ह्यंतर्गुप्ता सरस्वती ॥ १४ ॥

ಋಷಿಗಳು ಅವಳಿಗೆ ಸಂತೋಷದಿಂದ ನೀಲಗಂಗಾ, ಎಂದು ನಾಮಕರಣ

सर्वाभिः शुशुभे गंगा संगताभिर्विचित्रता ।
पातालगंगां नीलां च कल्लोल मिति चोचिरे ॥ १६ ॥

ಕೃಷ್ಣವೇಣಿ ಗಂಗಾದೇವಿಯು ಎಲ್ಲ ಸಂಗಡಿಗರಿಂದ ವಿಚಿತ್ರಳಾಗಿ ಶೋಭಿಸುತ್ತಿರುವಳು. ಆ ನೀಲವರ್ಣ ವಿಶಿಷ್ಟಳಾದ ಪಾತಾಳಗಂಗೆಯು, ತರಂಗಿಣಿ ಎಂದು ಕರೆಯಿಸಿಗೊಂಡಳು. ೧೭

देवाश्च सिद्धसंगाश्च ऋषयश्च तथापरे ।
तुष्टुवुर्भक्तिनम्राश्च कृष्णवेणीं तपोनुदाम् ॥ १७ ॥

ದೇವತೆಗಳೂ, ಸಿದ್ಧರೂ, ಋಷಿಗಳೂ ಇನ್ನೂ ಎಷ್ಟೋ ಜನರ ಸಮೂಹವೇ ಭಕ್ತಿಯಿಂದ ನಮ್ರರಾಗಿ ಅಜ್ಞಾನವೆಂಬ ಕತ್ತಲೆಯನ್ನು ಪರಿಹಾರ ಮಾಡತಕ್ಕ ಕೃಷ್ಣವೇಣಿಯನ್ನು ಸ್ತೋತ್ರ ಮಾಡಿದರು. ೧೭

सर्वे ऊचुः –

नमाम त्वां कृष्णवेणीं सर्वपापौघनाशिनीम् ।
जटाजूटसमुद्भूते ब्रह्मण्ये ब्रह्मवादिनी ॥ १८ ॥

ಜಟಾಜೂಟಗಳಿಂದ ಉದ್ಭವಿಸಿದ ಬ್ರಹ್ಮಜ್ಞಾನವಾದಿನಿಯಾದ, ಬ್ರಹ್ಮಣೀ ಸಕಲ ಪಾಪಗಳ ಸಮೂಹವನ್ನೇ ನಾಶಮಾಡುವ ಕೃಷ್ಣವೇಣೀ, ನಿನ್ನನ್ನು ನಾವೆಲ್ಲರೂ ನಮಸ್ಕರಿಸುವೆವು. ೧೮

पावनी पतितानां च तमोघ्नीं स्नानमात्रतः ।
देववंद्ये महाभागे दर्पघ्ने गिरिकंदरे ॥ १९ ॥

ಪತಿತರನ್ನು ಪಾವನಮಾಡತಕ್ಕವಳೇ ! ಸ್ನಾನ ಮಾತ್ರದಿಂದ ಅಜ್ಞಾನವನ್ನು ನಾಶಮಾಡತಕ್ಕವಳೇ, ದೇವತೆಗಳಿಂದ ಪೂಜ್ಯಳಾದವಳೇ, ಮಹಾಭಾಗ್ಯವಂತಳೇ, ದರ್ಪವನ್ನು ನಾಶಮಾಡುವವಳೇ, ಗಿರಿಕಂದರಗಳಲ್ಲಿ ಪ್ರವಹಿಸುವವಳೇ. ೧೯

पंचरूपासि तन्मात्रे द्योतनी वरदे शुभे ।

ज्ञानविज्ञानरूपा त्वं श्रीगिरौ दृष्टवत्यसि ॥ २१ ॥

ನಿನ್ನ ಸಾಮರ್ಥ್ಯವನ್ನು ತೋರಿಸುವವಳೇ, ಎಲ್ಲರಿಗೂ ಹಿತವನ್ನು ಉಂಟುಮಾಡಿ ಕೊಡತಕ್ಕವಳು. ನೀನು ಜ್ಞಾನ-ವಿಜ್ಞಾನ ರೂಪಳು. ಶ್ರೀಶೈಲಪರ್ವತದಲ್ಲಿ ದೃಷ್ಟಿಗೆ ತೋರತಕ್ಕವಳು. ೨೧

नमो नमस्ते देवेशि नमस्ते पापकर्षिणि ।
नमोस्तु कृष्णावेणी ते भक्त्या तुभ्यं नमो नमः ॥ २२ ॥

ಹೇ ದೇವೇಶಿ! ನಿನಗೆ ನಮೋನಮಃ. ಹೇ ಪಾಪ ಪರಿಹಾರಕಳೇ! ನಿನಗೆ ನಮೋನಮಃ. ಹೇ ಕೃಷ್ಣವೇಣೀ !ನಿನಗೆ ಭಕ್ತಿಪುರಃಸರವಾಗಿ ಅನಂತಾನಂತ ನಮೋನಮಃ. ೨೨

स्तुतिमेतां समाकर्ण्य गिरिदर्पविदारिणी ।
प्रोवाच तान्प्रहस्यैवं सर्वान्देवादिकान्मुदा ॥ २३ ॥

ಎಲ್ಲ ದೇವತೆಗಳೂ ಮಾಡುವ ಈ ಸ್ತೋತ್ರಗಳನ್ನು ಕೇಳಿ ಪರ್ವತದ ದರ್ಪವನ್ನು ವಿದಾರಣ (ಶಿಳುವ) ಮಾಡುವವಳು ಕೃಷ್ಣವೇಣಿಯು. ಆ ದೇವತೆಗಳನ್ನು ಉದ್ದೇಶಿಸಿ ಸಂತೋಷದಿಂದ ಮಂದಹಾಸಪೂರ್ವಕವಾಗಿ ಈ ಮಾತನ್ನು ಹೇಳಿದಳು. ೨೩

कृष्णा उवाच -

गिरिं भेदितुमायान्तीं मां न मन्यन्त भो सुराः ।
श्रृणुध्वं सर्व एवैते हेतुं गिरिविदारणे ॥ २४ ॥

ಹೇ ದೇವತೆಗಳೇ! ಕೇಳಿರಿ, ನಾನು ಪರ್ವತವನ್ನು ಭೇದಿಸುವುದರ ಸಲುವಾಗಿ ಬಂದಿರುವೆನು ಎಂದು ತಿಳಿಯಬೇಡಿರಿ. ಈ ಪರ್ವತವನ್ನು ಭೇದಿಸುವ ಕಾರಣವನ್ನು ಹೇಳುವೆನು, ಕೇಳಿರಿ. ೨೪

मार्कण्डेयो ऋषिः सिद्धो दिव्यवर्षसहस्रकम् ।

ध्याननिष्ठं महायोगकारिणं च तपस्विनम् ॥ २६ ॥

ಭಗವಂತನ ಪಾದಾರವಿಂದದಲ್ಲಿ ಧ್ಯಾನನಿಷ್ಠರಾದ, ಮಹಾಯೋಗಿಗಳಾದ, ತಪಸ್ವಿಗಳಾದ ಆ ಮಾರ್ಕಾಂಡೇಯ ಋಷಿಗಳ ದರ್ಶನಕ್ಕೆ ಬಂದವಳು. ೨೬

पातालविवरे देवास्तिष्ठन्त बहुमानितम् ।
श्रीशैले दिव्यलिंगं च तीर्थवर्यं विना कथम् ॥ २७ ॥

ದೇವತೆಗಳು ಪಾತಾಳದ ವಿವರಗಳಲ್ಲಿ ಬಹಳ ಸನ್ಮಾನಿತರಾದ ಶ್ರೀಶೈಲದಲ್ಲಿ ಇರುವ ದಿವ್ಯಲಿಂಗವು, ತೀರ್ಥವಿಲ್ಲದೇ ನಾವು ಹೇಗೆ ಪವಿತ್ರರಾಗುವೆವು. ೨೭

पूता स्युः कथमेवं हि सद्गतिं यांति मानवाः ।
इत्याक्षिपद्धै मनसा परोपकृतये मुनिः ॥ २८ ॥

ತೀರ್ಥಗಳ ಸನ್ನಿಧಾನವಿಲ್ಲದೇ ಮಾನವರು ಹೇಗೆ ಪವಿತ್ರರಾಗ ಬೇಕು ? ಸದ್ಗತಿಯನ್ನು ಹೇಗೆ ಪಡೆಯಬೇಕು ? ಹೀಗೆ ಮನಃಸಿನಲ್ಲಿ ಆಕ್ಷೇಪಮಾಡಿಕೊಂಡು, ಪರೋಪಕಾರದ ಸಲುವಾಗಿ ಆ ಋಷಿಗಳು. ೨೮

एतादृशानां सिद्धानां योगिनां ध्याननिष्ठया ।
तदंघ्रिरजसा जुष्टपावनी ह्यघहारिणी ॥ २९ ॥

ಇಂತಹ ಸಿದ್ಧಪುರುಷರ, ಯೋಗಿಗಳ, ಧ್ಯಾನದಿಂದ ನಿಷ್ಠಾವಂತರಾದವರ ಪಾದಕಮಲಗಳ ಧೂಳಿಯಿಂದ, ಪವಿತ್ರಳಾಗಿ ಪಾಪ ಪರಿಹಾರಕಳಾಗಿ. ೨೯

वंदितुं योगिचरणौ समायाता गिरिं सुराः ।
तेषां पादरजोभिश्च सामर्थ्यो फलहारिणी ॥ ३० ॥

ದೇವತೆಗಳೇ ! ಆ ಯೋಗಿಗಳ ಚರಣಾರವಿಂದಗಳಿಗೆ ನಮಸ್ಕಾರ ಮಾಡುವದರ ಗೋಸ್ಕರ ಈ ಪರ್ವತಕ್ಕೆ ಬಂದು, ಅವರ ಪಾದಧೂಳಿಯ ಸಾಮರ್ಥ್ಯದಿಂದಲೇ ಈ ಪರ್ವತವು ಭೇದಿಸಿತು. ೩೦

तद्दर्शनमहोत्पातहारिणी [illegible] ।

दिव्यं लिंगं सदा शांतं भक्तानुग्रहकारकम् ।
यद्दर्शनान्महापाप गजसंघसमुन्नतिम् ॥ ३२ ॥

ಭಕ್ತರ ಮೇಲೆ ಅನುಗ್ರಹ ಮಾಡುವದಕ್ಕೆ, ಅತ್ಯಂತ ಉತ್ಸಾಹವುಳ್ಳ, ಸದಾಶಾಂತರಾದ, ಆನೆಗಳ ಸಮೂಹದಷ್ಟು ಮಹಾಮಹಾಪಗಳು, ಯಾರ ದರ್ಶನದಿಂದ ಪರಿಹಾರವಾಗುವವ್ರೋ, ಆ ದಿವ್ಯವಾದ ಲಿಂಗವನ್ನು ನೋಡಲಿಕ್ಕೆ ಬಂದವಳು. ೩೨

नाशयत्येश सुप्रीतः पंचाननमहाध्वनिः ।
इति तद्वाक्यमाकर्ण्य त्राहि त्राहीति वादिनः ॥ ३३ ॥

ಆ ಮಹತ್ತರವಾದ ಪಾಪವನ್ನು ಸಿಂಹದಂತೆ ಗರ್ಜನೆ ಮಾಡಿ, ನಾಶಮಾಡತಕ್ಕವಳಾಗಿ ಪ್ರೀತಿಯಿಂದ ನಾನು ಬಂದವಳು ಎಂದು, ಕೃಷ್ಣವೇಣೆಯ ಮಾತನ್ನು ಕೇಳಿ ಎಲ್ಲ ದೇವತೆಗಳೂ ರಕ್ಷಿಸು, ರಕ್ಷಿಸು, ಎಂದು, ೩೩

सर्वे प्रांजलयस्तस्थुः कृष्णवेणीं सुभक्तितः ।
ततो जगाद सुप्रीता मत्तीरे ये वसंति ते ॥ ३४ ॥

ಎಲ್ಲ ದೇವತೆಗಳೂ, ಆ ಕೃಷ್ಣವೇಣೆಗೆ ಭಕ್ತಿಪುರಃಸರವಾಗಿ ಅಂಜಲಿಬದ್ಧರಾಗಿ (ಕೈಮುಗಿದುಕೊಂಡು) ನಿಂತರು. ಆ ಮೇಲೆ ಕೃಷ್ಣವೇಣೆಯು ಪರಮ ಪ್ರೀತಳಾಗಿ ಹೇಳಿದಳು. ನನ್ನ ತೀರದಲ್ಲಿ ಯಾರು ವಾಸಮಾಡುವರೋ, ೩೪

पुण्यमासाद्य वै देवा मत्पदं प्राप्नुवंति वै ।
धन्यास्त एव मनुजाः श्रीगिरौ शिवदर्शनात् ॥ ३५ ॥

ಹೇ ದೇವತೆಗಳೇ! ಅವರು ಪುಣ್ಯವಂತರು. ಆ ಮಾನವರು ಧನ್ಯರು. ಶ್ರೀಶೈಲ ಪರ್ವತದಲ್ಲಿ ಮಹಾದೇವರ ದರ್ಶನದಿಂದ ಅವರೆಲ್ಲರೂ ನನ್ನ ಸ್ಥಾನಕ್ಕೆ ಬರುವರು. ೩೫

इत्युक्त्वा प्रययौ कृष्णा गर्जंती समतीत्यगाम् ।
श्रीशैले यः पुमान्गत्वा भक्त्या संतुष्टमानसः ॥ ३६ ॥

ಕೃಷ್ಣವೇಣಿಯು ಹೀಗೆ ಗರ್ಜನೆಮಾಡುತ್ತ ಮುಂದೆ ಹೊರಟಳು. ಈ ಶ್ರೀಶೈಲದಲ್ಲಿ ಯಾವ ಪುರುಷರು ಹೋಗಿ, ಭಕ್ತಿಯಿಂದ ಸಂತುಷ್ಟವಾದ ಮನಃಸುಉಳ್ಳವರಾಗಿ, ೩೬

तत्रापि दुर्लभतरा नीलगंगा सितासिता ॥ ३८ ॥

ಕೃಷ್ಣವೇಣಿಯು ಎಲ್ಲ ಕಡೆಗೆ ಬಹಳ ಸುಲಭಳಾಗಿದ್ದರೂ, ಈ ನಾಲ್ಕು ಸ್ಥಾನಗಳಲ್ಲಿ ಪರಮ ದುರ್ಲಭಳು. ಅದರಲ್ಲಿಯೂ ಪರಮ ದುರ್ಲಭಳು ನೀಲಗಂಗೆಯು. ೩೮

सर्वक्षेत्रमयः सोऽद्रिः सर्वदेवमयः शिवः ।
सर्वतीर्थमयी कृष्णा सर्वे ब्रह्मसमा द्विजाः ॥ ३९ ॥

ಈ ಶ್ರೀಶೈಲಪರ್ವತವು ಸಕಲ ಕ್ಷೇತ್ರ ಮಯವು. ಈ ರುದ್ರದೇವರು ಎಲ್ಲ ದೇವಮಯರು. ಈ ಕೃಷ್ಣವೇಣಿಯು ಸರ್ವತೀರ್ಥಮಯಳು. ಎಲ್ಲ ಬ್ರಾಹ್ಮಣರು ಬ್ರಹ್ಮದೇವರ ಸಮಾನರು. ೩೯

ततः स्वमंडलाद्भानुः कृष्णां दृष्ट्वा ह्यवातरत् ।
सतां स्तुत्वा च नत्वा च वरं लेभे ततो हरिः ॥ ४० ॥

ಆಮೇಲೆ, ಸೂರ್ಯನು ಆ ಕೃಷ್ಣವೇಣಿಯನ್ನು ನೋಡಿ ತನ್ನ ಮಂಡಲದಿಂದ ಇಳಿದನು . ಆ ಸೂರ್ಯನು ಅವಳನ್ನು ಸ್ತೋತ್ರಮಾಡಿ, ನಮಸ್ಕಾರಮಾಡಿ, ವರಗಳನ್ನು ಪಡೆದನು. ಆ ಮೇಲೆ ಶ್ರೀಹರಿಯೂ ಕೂಡ. ೪೦

ततश्चंद्रो ह्यमृतवान् द्रष्टुमाश्चर्यगामिनीम् ।
स्तुत्वा तां च वरं लेभे कृष्णांतिकमिति द्विजाः ॥ ४१ ॥

ಆಮೇಲೆ, ಅಮೃತ ಕಲಾತ್ಮಕನಾದ ಚಂದ್ರನು, ಆಶ್ಚರ್ಯರೀತಿಯಿಂದ ಪ್ರವಹಿಸುವ ಕೃಷ್ಣವೇಣಿಯನ್ನು ನೋಡಿ, ಸ್ತೋತ್ರಮಾಡಿ ವರವನ್ನು ಪಡೆದನು. ಆಮೇಲೆ ಎಲ್ಲ ಬ್ರಾಹ್ಮಣರು, ೪೧

स्नात्वा पातालगंगायां सूर्यचंद्रमसेश्वरौ ।
पूजयित्वा लभेन्मर्त्यः सर्वकामनिवृत्तिता ॥ ४२ ॥

ಪಾತಾಳಗಂಗೆಯಲ್ಲಿ ಸ್ನಾನಮಾಡಿ, ಮನುಷ್ಯರೆಲ್ಲರೂ ಸೂರ್ಯ ಚಂದ್ರರಿಬ್ಬ

ततः सप्त नदीयोगात्पुनस्तीर्थानि तान्ब्रुवन् ।
केदारे चोदकं पीत्वा काश्यां तु मरणाद्ध्रुवम् ॥ ४४ ॥

ಆಮೇಲೆ, ಆ ಸಪ್ತನದೀಯೋಗದಿಂದ ಮುಂದೆ ಮತ್ತೆ ತೀರ್ಥಗಳನ್ನು ಹೇಳಿದರು. ಕೇದಾರದಲ್ಲಿ ನೀರು ಕುಡಿಯಬೇಕು. ಕಾಶಿಯಲ್ಲಿ ಮರಣಹೊಂದಬೇಕು. ೪೪

श्रीशैलशिखरं दृष्ट्वा पुनर्जन्म न विद्यते ।
स्नात्वा पातालगंगायां दृष्ट्वा तं मल्लिकार्जुनम् ॥ ४५ ॥

ಶ್ರೀಶೈಲಪರ್ವತದ ಶಿಖರದ ದರ್ಶನಮಾತ್ರದಿಂದ ಪುನರ್ಜನ್ಮ ಬರುವದಿಲ್ಲ. ಪಾತಾಲಗಂಗೆಯಲ್ಲಿ ಸ್ನಾನಮಾಡಿ ಮಲ್ಲಿಕಾರ್ಜುನನನ್ನು ನೋಡಿದರೆ, ೪೫

सर्वपापविनिर्मुक्तो मुक्तिं प्राप्नोति मानवः ।
इति तद्वाक्यमाश्रुत्य ऋषयश्च तपोधनाः ॥ ४६ ॥

ಸಕಲ ಪಾಪಗಳಿಂದ ಬಿಡುಗಡೆಹೊಂದಿ ಮನುಷ್ಯರು ಮುಕ್ತರಾಗುವರು. ಹೀಗೆ ಋಷಿಗಳೂ, ತಪಸ್ವಿಗಳೂ ಆ ಮಾತನ್ನು ಕೇಳಿ, ೪೬

विस्मयात् परिपप्रच्छुः स्कंद सर्वज्ञमुत्तमम् ।

ऋषयः ऊचुः –

के मुक्ताः श्रीगिरेः श्रृंगं दृष्ट्वा तद्वदनो गुह ॥ ४७ ॥

ಆಶ್ಚರ್ಯದಿಂದ, ಸರ್ವಜ್ಞರಾದ ಸ್ಕಂದನನ್ನು ಕೇಳಿದರು. ಋಷಿಗಳ ಹೇಳುತ್ತಾರೆ– ಯಾರು ಆ ಶ್ರೀಶೈಲ ಪರ್ವತದ ಶಿಖರವನ್ನು ನೋಡಿ ಮುಕ್ತರಾದವರು ? ಹೇಳಿರಿ. ೪೭

प्रतीतिस्तत्र कैर्दृष्टा वदनो प्रीतितत्परान् ।

स्कंद उवाच –

कान्यकुब्जे द्विजाः सप्त दुर्वृताः पापलोलुपाः ॥ ४८ ॥

चौरा व्यसनिनश्चापि जन्ममात्रेण वै द्विजाः ॥ ४९ ॥

ಪರರ ದ್ರವ್ಯಹರಣ ಮಾಡುತ್ತ ದಿನಾಲು ಲೋಭಿಗಳಾಗಿ ಉನ್ಮತ್ತರಾಗಿ ಕಳ್ಳತನಮಾಡಿ ದುರ್ವ್ಯಸನಿಗಳಾಗಿದ್ದರು. ಜನ್ಮಮಾತ್ರದಿಂದ ಬ್ರಾಹ್ಮಣರು. ೪೯

बहिष्कृता द्विजैः सर्वैः पापकार्येषु तत्पराः ।
तदा शरणमायाता ब्राह्मणान् संशितव्रतान् ॥ ५० ॥

ಪಾಪಕಾರ್ಯದಲ್ಲಿ ತತ್ಪರರಾದ ಅವರನ್ನು ಎಲ್ಲ ಬ್ರಾಹ್ಮಣರು ಬಹಿಷ್ಕರಿಸಿದರು. ಆಗ ಅವರು ವ್ರತಸ್ಥರಾದ ಬ್ರಾಹ್ಮಣರಿಗೆ ಶರಣ ಬಂದರು. ೫೦

ब्रूत तीर्थं क्षेत्रमनु सर्वपापापहं च नः ।
तद्वाक्यश्रवणाद्विप्राः श्रीशैलं मुक्तिदायकम् ॥ ५१ ॥

ನಮ್ಮ ಸಕಲ ಪಾಪಗಳನ್ನು ಪರಿಹರಿಸುವ ತೀರ್ಥಗಳೂ, ಕ್ಷೇತ್ರಗಳೂ, ಯಾವವು ? ಹೇಳಿರಿ. ಅವರ ಮಾತನ್ನು ಕೇಳಿ ಬ್ರಾಹ್ಮಣರು ಶ್ರೀಶೈಲ ಕ್ಷೇತ್ರವೇ ನಿಮಗೆ ಮುಕ್ತಿದಾಯಕವಾಗಿರುವದು. ೫೧

गच्छंतुमाचिरं सर्वे पापनिष्कृतये पुनः ।
सर्वतीर्थानि ते विप्राः पर्यटन्तोऽपि सर्वतः ॥ ५२ ॥

ಬಹಿಷ್ಕೃತ ಬ್ರಾಹ್ಮಣರೇ !ನೀವು ಪಾಪ ಕಳೆದುಕೊಳ್ಳಲಿಕ್ಕೆ ತಡಮಾಡದೇ ಎಲ್ಲರೂ ಹೋರಡಿರಿ. ಆ ಬ್ರಾಹ್ಮಣರು ಸಂಚಾರಮಾಡುತ್ತ ಎಲ್ಲ ತೀರ್ಥಗಳಲ್ಲಿಯೂ ಪರ್ಯಟನ ಮಾಡಿದರು. ೫೨

तथापि न सुखं चित्ते ह्यावृता राक्षसैर्दृढाः ।
गंतुमिच्छुर्यदा विप्राः श्रीशैलं भक्तितत्पराः ॥ ५३ ॥

ಎಲ್ಲಿಗೆ ಹೋದರೂ ರಾಕ್ಷಸರು ದೃಢವಾಗಿ ಬಂಧನ ಮಾಡತಾ ಇದ್ದರು. ಮನಃಸಿಗೆ ಸಮಾಧಾನವೇ ಇರಲಿಲ್ಲ. ಯಾವಾಗ ಆ ಬ್ರಾಹ್ಮಣರು ಭಕ್ತಿಪರವಶರಾಗಿ ಶ್ರೀಶೈಲಕ್ಕೆ ಹೋಗ ಬೇಕಂತ ಇಚ್ಛೆ ಉಳ್ಳವರಾದರು. ೫೩

राक्षसा भीतिमापन्ना मतिमापस्तदा पथि ।

पापानि रूपतस्तत्र निर्गतानीह तत्क्षणात् ।
भस्मीभूतानि दृष्ट्वैव विद्वांसो ज्ञानतत्पराः ॥ ५५ ॥

ಪಾಪರೂಪಗಳು ತಕ್ಷಣದಲ್ಲಿ ಹೋಗುವವು. ಜ್ಞಾನಿಗಳಾದ ವಿದ್ವಾಂಸರನ್ನು ನೋಡಿದ ಕೂಡಲೇ ಭಸ್ಮೀಭೂತವಾಗುವವು. ೫೫

धन्यामिमां योगिगम्यां गतिमास्थाय निर्वृताः ।
नीलगंगां समाजग्मुः स्नात्वा भक्त्यैकमानसाः ॥ ५६ ॥

ಯೋಗಿಗಳಿಗೂ ಗಮ್ಯವಾದ, ಗತಿಪ್ರದವಾದ, ಧನ್ಯವಾದ, ಈ ನೀಲಗಂಗೆಯನ್ನು ಕುರಿತು ಬಂದರು. ಭಕ್ತಿಯಿಂದ ಪುಳಕಿತರಾಗಿ ಸ್ನಾನಮಾಡಿದರು. ೫೬

संपूज्य देवं वरदं श्रीशैले मल्लिकार्जुनम् ।
तत्रस्था ब्राह्मणाः प्रोचुर्निःपापा यूयमत्र तु ॥ ५७ ॥

ಶ್ರೀಶೈಲದಲ್ಲಿ ವರಪ್ರದನಾದ ದೇವ ದೇವನಾದ ಮಲ್ಲಿಕಾರ್ಜುನನನ್ನು ಪೂಜಿಸಿದರು. ಅಲ್ಲಿಯ ಬ್ರಾಹ್ಮಣರು ಹೇಳಿದರು. ನೀವೆಲ್ಲರೂ ಪಾಪಕಳೆದು ಕೊಂಡಿರಿ. ೫೭

तदा संशयमापन्नाः कथं नो ब्रूत पापतः ।

ब्राह्मणा ऊचुः –

गच्छंतु नंदिसान्निध्यमस्माभिः शंकरानुगम् ॥ ५८ ॥

ಆಗ್ಗೆ ಸಂಶಯ ಗ್ರಸ್ತರಾಗಿ ಬ್ರಾಹ್ಮಣರು ಕೇಳಿದರು. ಪಾಪವು ನಮ್ಮನ್ನು ಹೇಗೆ ಬಿಟ್ಟುಹೋಯಿತು ? ಬ್ರಾಹ್ಮಣರು ಹೇಳಿದರು. ರುದ್ರದೇವರ ಸನ್ನಿಧಾನದಲ್ಲಿ ಇರುವ ನಂದಿಯ ಸಾನ್ನಿಧ್ಯಕ್ಕೆ ಹೋಗಿರಿ. ೫೮

स भक्षयेद्यदा किंचिद्धान्यं वा तृणमेव च ।
तदा प्रतीतिं विदंतु ह्यस्मद्वाक्यान्न संशयः ॥ ५९ ॥

ಅದು ಆ ನಂದಿಯು ಶಿಲಾಮಯ ಜಡ. ಆದರೆ ಬ್ರಾಹ್ಮಣರು ಹೇಳಿದ್ದು ಯಥಾರ್ಥವು.
೬೦

अभक्षयत्तदा ध्यानं सर्वेषां पश्यतां सताम् ।
सदाशिवस्तदा दृष्ट्वा अपश्यन्नंदिनं द्विजाः ॥ ६१ ॥

ಎಲ್ಲರೂ ನೋಡುತ್ತಿರುವ ಸಮಯದಲ್ಲಿಯೇ, ಆ ನಂದಿಯು ಧಾನ್ಯವನ್ನು ಭಕ್ಷಣ ಮಾಡಿತು. ಸದಾಶಿವನು ಅದನ್ನು ನೋಡಿ, ಬ್ರಾಹ್ಮಣರೂ ಆ ನಂದಿಯನ್ನು ನೋಡಿದರು. ೬೧

पर्याप्तमेतत्कार्यं च यत्र पापनिदर्शनात् ।
शिखरीश्वरे महद्दिव्यं मल्लिकार्जुनमेव च ॥ ६२ ॥

ಶ್ರೀಶೈಲಪರ್ವತದ ಶಿಖರದಲ್ಲಿ ಇರುವ ಮಹದ್ದಿವ್ಯವಾದ ಮಲ್ಲಿಕಾರ್ಜನ ನನ್ನು ನೋಡಿದ ಕೂಡಲೇ, ಪಾಪ ಪರಿಹಾರದ ನಿದರ್ಶನವಾಗಿ ಇಲ್ಲಿಗೆ ಪಾಪಗಳು ಮುಗಿದವು.
೬೨

तदेव भवतु क्षिप्रमिति सर्वेऽनुमेनिरे ॥ ६३ ॥

ಅದೇ ನಿಜವಾಗಲಿ ಎಂದು ಎಲ್ಲರೂ ಸಮ್ಮತಿಸಿದರು. ೬೩

॥ इति श्रीस्कंदपुराणे कृष्णामाहात्म्ये श्रीशैलक्षेत्र मल्लिकार्जुनवर्णनं नाम अष्टपञ्चाशत्तमोऽध्यायः ॥

❀ ❀ ❀

## ॥ अथ एकोनषष्ठितमोऽध्यायः ॥

ऋषय उचुः –

एतादृशं दिव्यलिंगं दर्शनान्मुक्तिदायकम् ।
न दृष्टं स्कंद चास्माभिर्मनःशांतिकरं तथा ॥ १ ॥

श्रृणुध्वं मुनयः सर्वे कथां चित्तोपबृंहिकाम् ॥ २ ॥

ಗುರುಗಳೇ ಈ ಲೋಕದಲ್ಲಿ, ಈ ತರಹದ ಶ್ರೇಷ್ಠವಾದ ಕ್ಷೇತ್ರವು ಹೇಗೆ ?

**ಸ್ಕಂದಉವಾಚ –**

ಋಷಿಗಳೇ ! ಮನಃಶಿನ ತುಂಬ ತೃಪ್ತಿಯನ್ನು ಉಂಟು ಮಾಡತಕ್ಕ ಕಥೆಯನ್ನು ಹೇಳುವೆನು. ಕೇಳಿರಿ. ೨

यत्क्षेत्रदर्शनाद्विप्रो ह्यगस्त्यः सुखमाप्तवान् ।
त्रयाणामपि लोकानामुपकारकृते मुनिः ॥ ३ ॥

ತ್ರಿಲೋಕಗಳನ್ನು ಪವಿತ್ರ ಮಾಡುವ, ಅಗಸ್ತ್ಯ ಋಷಿಗಳು ಯಾವ ಕ್ಷೇತ್ರ ದರ್ಶನ ಮಾತ್ರದಿಂದಲೇ ಸುಖವನ್ನು ಪಡೆದರು. ೩

विंध्यस्य दमनं विद्वानसाध्यममरैरपि ।
काशीवियोगजं दुःखं प्रमृजन्श्रद्धयान्वितः ॥ ४ ॥

ಜ್ಞಾನಿಗಳೇ ! ದೇವತೆಗಳಿಗೂ ಅಸಾಧ್ಯವಾದ ವಿಂಧ್ಯಪರ್ವತವನ್ನು ದಮನ ಮಾಡಿದವರು. ಆದರೆ ಕಾಶೀ ವಿಯೋಗದಿಂದ ಆದ ದುಃಖವನ್ನು ಕಳೆದುಕೊಳ್ಳಲಿಕ್ಕೆ ಶ್ರದ್ಧಾಪೂರ್ವಕವಾಗಿ, ೪

आलोक्य सर्वतीर्थानि न लेभे शर्म कुत्रचित् ।
श्रीशैलमन्वगाद्दुःखात् पातालगंगया युतम् ॥ ५ ॥

ಸಕಲ ತೀರ್ಥಗಳನ್ನು ನೋಡುತ್ತಾ ಬಂದರು. ಎಲ್ಲಿಯೂ ಸಮಾಧಾನವಾಗಲಿಲ್ಲ. ಪಾತಾಲಗಂಗೆಯಿಂದ ಕೂಡಿಕೊಂಡು ಇರುವ ಶ್ರೀಶೈಲವನ್ನು ನೋಡಿದ ಕೂಡಲೇ ದುಃಖ ದೂರವಾಗಿ, ೫

तस्य वै शिखरं दृष्ट्वा मुनिः संतोषमाप सः ।
शंकरं च नमस्कृत्य श्रीशैले मल्लिकार्जुनम् ॥ ६ ॥

त्वया पीतः समुद्रो वै हतौ दैत्यौ महामुने।
वातापील्वलनामानौ विंध्याद्रिर्दमितस्त्वया ॥ ८ ॥

ನೀವು ಸಮುದ್ರವನ್ನು ಆಪೋಷನ ಮಾಡಿದಿರಿ. ವಾತಾಪಿ, ಇಲ್ವಲ ಎಂಬ ಇಬ್ಬರು ದೈತ್ಯರನ್ನು ಸಂಹಾರಮಾಡಿದಿರಿ. ೮

परोपकारणार्थं हि यो जीवेत्स हि जीवति।
श्वसन्मृतः स विज्ञेयो यः स्वार्थमुपजीवति ॥ ९ ॥

ಪರೋಪಕಾರದ ಸಲುವಾಗಿ ಯಾರು ಬದುಕುವರೋ ಅವರು ಬದುಕಿದಂತೆ. ಯಾರು ಸ್ವಾರ್ಥದ ಸಲುವಾಗಿ ಉಪಜೀವನ ಮಾಡುವರೋ, ಅವರು ಜೀವಂತವಿದ್ದರೂ ಸತ್ತಂತೆ. ಎಂದು ತಿಳಿಯಬೇಕು. ೯

परोपकारणं येषां जागर्ति हृदये सदा।
सर्वतीर्थानि तत्रैव वसंति ऋषिसत्तम ॥ १० ॥

ಪರೋಪಕಾರದ ಸಲುವಾಗಿ ಯಾರ ಅಂತಃಕರಣವು ಯಾವಾಗಲೂ ಜಾಗ್ರತಿಯಾಗಿರುವದೋ, ಅಲ್ಲಿಯೇ ಹೇ ಋಷಿಶ್ರೇಷ್ಠರೇ !ಎಲ್ಲ ತೀರ್ಥಗಳೂ ತೀರ್ಥಾಭಿಮಾನಿ ದೇವತೆಗಳೂ ವಾಸ ಮಾಡುವರು. ೧೦

परोपकारणं येषां हृदये संवसेच्चिरम्।
पश्यंति विपदस्तेषां संपदस्तु पदे पदे ॥ ११ ॥

ಯಾರ ಅಂತಃಕರಣವು ಪರೋಪಕಾರದ ಸಲುವಾಗಿ ಜಾಗ್ರತವಾಗುವುದೋ, ಅವರಿಗೆ ಆಪತ್ತುಗಳು ಬರುವುದಿಲ್ಲ. ಬಂದರೂ ಅಲ್ಲಿಯೇ ಪರಿಹಾರವಾಗುವದು. ಆದರೆ ಸಂಪತ್ತುಗಳು ಮಾತ್ರ ಹೆಜ್ಜೆ ಹೆಜ್ಜೆಗೂ ಬರುವುವು. ೧೧

करिकर्णाग्रचपलं जीवितं ऋषिसत्तम।
परोपकारो यदि चेदजरामरसंभृतः ॥ १२ ॥

ಹೇ ಋಷಿಶ್ರೇಷ್ಠರೇ ! ಜೀವನವು ಆನೆಯ ಕಿವಿಯ ಅಗ್ರಭಾಗದಂತೆ ಚಂಚಲ

ಇಷ್ಟಾರ್ಥವು ಪೂರ್ಣವಾಗಿ ಮಹತ್ತರವಾದ ಸುಕೃತವು ಉಂಟಾಗುವದು. ೧೩

इति देववचः श्रुत्वा ऋषिः पीयूषसन्निभम्।
तदा जगाम सुप्रीतः स्कंददर्शनलालसः ॥ १४ ॥

ಅಗಸ್ತ್ಯ ಋಷಿಗಳು ಅಮೃತಸಮಾನವಾದ ಈ ದೇವವಾಣಿಯನ್ನು ಕೇಳಿ, ಬಹಳ ಸುಪ್ರೀತರಾಗಿ ಷಣ್ಮುಖನ ದರ್ಶನದ ಲಾಲಸೆ ಉಳ್ಳವರಾಗಿ ಹೊರಟರು. ೧೪

कृष्णां द्रष्टुं यदागस्त्यस्तीरे तीरे सतीर्थकाम्।
पदे पदे वंदयन्स तीर्थानि विचचारह ॥ १५ ॥

ಅಗಸ್ತ್ಯ ಋಷಿಗಳು ಕೃಷ್ಣವೇಣಿಯನ್ನು ನೋಡುವುದಕ್ಕೆ ಯಾವಾಗ ಹೊರಟರೋ ಪ್ರತಿ ಒಂದು ತೀರ್ಥದೇವತೆಗಳನ್ನೂ, ಪ್ರತಿತೀರದಲ್ಲಿ ನೋಡುತ್ತ, ಹೆಜ್ಜೆ ಹೆಜ್ಜೆಗೆ ನಮಸ್ಕರಿಸುತ್ತ ತೀರ್ಥಗಳನ್ನು ಸಂಚಾರಮಾಡಿದರು. ೧೫

दुर्गां ददर्श सहसा सपत्नीको मुदान्वितः।
कनकाख्यां महाभागां दर्शनामृतवर्षिणीम् ॥ १६ ॥

ಲೋಪಾಮುದ್ರಾ ದೇವಿಯಿಂದ ಕೂಡಿಕೊಂಡು ಸಪತ್ನೀಕರಾದ ಅಗಸ್ತ್ಯ ಋಷಿಗಳು, ಸಂತೋಷಭರಿತರಾಗಿ ಆಕಸ್ಮಾತ್ತಾಗಿ ದರ್ಶನ ಮಾತ್ರದಿಂದ ಅಮೃತವೃಷ್ಟಿ ಮಾಡತಕ್ಕ ಮಹಾಭಾಗ್ಯವಂತಳಾದ ಕನಕಾ ಎಂದು ಪ್ರಸಿದ್ಧಳಾದ ದುರ್ಗಾದೇವಿಯನ್ನು ನೋಡಿದರು. ೧೬

लोपामुद्रा तदोवाच आख्यानं ब्रूहि मे मुने।
तत्र स्थित्वा मुनिः प्राह लोपामुद्रां पतिव्रताम् ॥ १७ ॥

ಆಗ ಲೋಪಾಮುದ್ರೆಯು, ಋಷಿಗಳೇ! ಆಖ್ಯಾನವನ್ನು ಹೇಳಿರಿ. ಎಂದು ಕೇಳಿದಳು. ಅಗಸ್ತ್ಯ ಋಷಿಗಳು ಅಲ್ಲಿಯೇ ನಿಂತು ಪತಿವ್ರತೆಯಾದ ಲೋಪಾಮುದ್ರೆಯನ್ನು ಕುರಿತು, ೧೭

भगवत्याश्च माहात्म्यं वक्तुमारभतादृतः।

नारसिंहो यदा लक्ष्म्या प्रल्हादं तु ररक्ष ह ॥ १९ ॥

ಪ್ರಹ್ಲಾದರಾಜನಿಗೆ ವರ ಪ್ರದಾನಮಾಡಿದ ತನ್ನ ಭಕ್ತರಿಗೆ, ಈಶನಾದ ಶ್ರೀನರಸಿಂಹ ದೇವರ ಮಹಾತ್ಮ್ಯವನ್ನು ಕೇಳು. ಲಕ್ಷ್ಮೀದೇವಿಯಿಂದ ಕೂಡಿಕೊಂಡು ನರಸಿಂಹ ದೇವರು ಯಾವಾಗ ಪ್ರಹ್ಲಾದರಾಜನನ್ನು ರಕ್ಷಣೆಮಾಡಿದರೋ, ೧೯

भित्वा हिरण्यकशिपुं दैत्यं त्रिभुवनापहम् ।
श्रांतो नृसिंहः सहसा प्रह्लादस्तु तदा हरिम् ॥ २० ॥

ಮತ್ತು ತ್ರೈಲೋಕ್ಯವನ್ನೇ ಭಯಬಡಿಸುವಂತಹ ದೈತ್ಯನಾದ ಹಿರಣ್ಯಕಶಿಪುವನ್ನು ಸೀಳಿ ಶ್ರಾಂತನಾದನೃಸಿಂಹ ದೇವರನ್ನೂ ಪ್ರಹ್ಲಾದರಾಜನು. ೨೦

प्रांजलिः परिपप्रच्छ किं चोपशमनं वद ।
नृसिंहोवाच संप्रीत्या माधवे शांतवानहम् ॥ २१ ॥

ಅಂಜಲಿಬದ್ಧರಾಗಿ, ನಿಮಗೆ ಉಪಶಮನವು ಹೇಗೆ ಆಗುವದು ಹೇಳಿರಿ ಎಂದು ಕೇಳಿದನು. ಆಗ ನೃಸಿಂಹ ದೇವರು ಪ್ರೀತಿಯಿಂದ ಹೇಳಿದರು. ನಾನು ಮಾಧವಮಾಸದಲ್ಲಿ (ವೈಶಾಖ ಮಾಸ) ಶಾಂತನಾಗುವೆನು. ೨೧

पानकं चोत्तमं दैत्यवंशपावनकारय ।
प्रल्हादः प्रीतमनसा पानकं गुडजं तदा ॥ २२ ॥

ಪ್ರಹ್ಲಾದರಾಜನೇ ! ಉತ್ತಮವಾದ ಪಾನಕವು ಸಾಕು. ವಂಶವೂ ಪವಿತ್ರ ವಾಗುವುದು. ನಾನೂ ಶಾಂತನಾಗುವೆನು. ಆಗ ಪ್ರಹ್ಲಾದರಾಜನು ಪ್ರೀತಿಯುಕ್ತವಾದ ಮನಃಸಿನಿಂದ ಬೆಲ್ಲದಿಂದ ಸಿದ್ಧವಾದ ಪಾನಕವನ್ನು, ೨೨

कृत्वा समर्पयद्देवं सोऽपिबद्भक्तदापितम् ।
सहस्रकलशारूढं पीत्वा तृप्तिमुपागमत् ॥ २३ ॥

ಮಾಡಿ, ನರಸಿಂಹ ದೇವರಿಗೆ ಸಮರ್ಪಣೆ ಮಾಡಿದನು. ಆ ನರಸಿಂಹ ದೇವರು

ಪ್ರಹ್ಲಾದರಾಜರು ಪ್ರಾರ್ಥನೆ ಮಾಡಿದರು. ಪರಮ ಪೂಜ್ಯರೇ !ಅವಶಿಷ್ಟ ಭಾಗವು ಪ್ರಸಾದವಾಗಿ ತ್ರೈಲೋಕ್ಯವನ್ನೂ ಪವಿತ್ರ ಮಾಡಲಿ. ೨೪

अट्टहासात्ततो देवः साधु साध्विति तं ब्रवीत्।
यस्य यो विहितः कामः पानकं कर्तुमुद्यतः ॥ २५ ॥

ಅಟ್ಟಹಾಸದಿಂದ ನರಸಿಂಹ ದೇವರು, ಸಾಧು-ಸಾಧು ಎಂದು ಹೇಳಿ, ಯಾರು ವಿಹಿತವಾದ ಕಾಮನೆಯುಳ್ಳವರಾಗಿ ಪಾನಕ ಮಾಡಿ ಪೂಜೆ ಮಾಡುವರೋ, ೨೫

तावदर्धं गृहीष्यामि भक्तानुग्रहतोऽसुर।
इत्याकर्ण्य तदा देवी लक्ष्मी कनकसुप्रभा ॥ २६ ॥

ಪ್ರಹ್ಲಾದರಾಜರೇ ! ಭಕ್ತರಮೇಲೆ ಅನುಗ್ರಹ ಮಾಡುವದರಗೋಸ್ಕರ ಅವರು ಕೊಟ್ಟದ್ದರಲ್ಲಿ ಅರ್ಧಮಾತ್ರ ಸ್ವೀಕರಿಸುವೆನು. ಈ ಮಾತನ್ನು ಕೇಳಿ ಬಂಗಾರದಂತೆ ಪ್ರಕಾಶಮಾನಳಾದ ಲಕ್ಷ್ಮೀದೇವಿಯು, ೨೬

तुतोषासुरवाक्येन भक्तानुग्रहकारिणी।
सुवर्णवृष्टिरभवत्तत्काले भक्तितः श्रृणु ॥ २७ ॥

ಭಕ್ತಾನುಗ್ರಹಕಾರಿಣಿಯಾದ ಲಕ್ಷ್ಮೀದೇವಿಯು, ಆ ಪ್ರಹ್ಲಾದರಾಜರ ಮಾತಿನಿಂದ ಪರಮ ಸಂತೋಷ ಪಟ್ಟಳು. ಹಾಗೂ ಅದೇ ಕ್ಷಣದಲ್ಲಿ ಸುವರ್ಣವೃಷ್ಟಿಯನ್ನು ಮಾಡಿದಳು. ಭಕ್ತಿಯಿಂದ ಕೇಳು. ೨೭

तावज्जगाम तं द्रष्टुं नृसिंहं भक्तवत्सलम्।
महापर्वतसंदर्पं भित्वा मध्येन सा ययौ ॥ २८ ॥

ಆ ಲಕ್ಷ್ಮೀದೇವಿಯು ಭಕ್ತವತ್ಸಲನಾದ ಶ್ರೀನೃಸಿಂಹದೇವರನ್ನು ನೋಡುವುದಕ್ಕೆ ಹೊರಟಳು. ಮಹಾಪರ್ವತದ ದರ್ಪವನ್ನು ಭೇದಿಸಿ ಮಧ್ಯಭಾಗದಿಂದ ಹೊರಟಳು. ೨೮

एकतो दिशि दुर्गासाऽपरतो पानकाधिपः।

ದೇವತೆಗಳು ಸಂತೋಷಭರಿತರಾಗಿ, ಮನಃಪೂರಕವಾಗಿ, ಯಥಾರೀತಿಯಾಗಿ, ಭಗವಂತನನ್ನು ಸ್ತೋತ್ರಮಾಡಿದರು. ದೈತ್ಯ ದರ್ಪವನ್ನು ನಾಶಮಾಡುವ ತ್ರೈಲೋಕ್ಯ ಸ್ವಾಮಿಯೇ ! ನಿನಗೆ ನಮಸ್ಕಾರಗಳು. ೩೦

नमस्ते वरदेशाय नृसिंहाय नमो नमः ।
निष्किचनजनैर्वंद्य निष्किचनजनप्रिय ॥ ३१ ॥

ನಿಷ್ಕಿಂಚನ ಜನರಿಂದ ವಂದನೀಯನೂ, ನಿಷ್ಕಿಂಚನ ಜನರಿಗೆ ಬಹಳ ಪ್ರೀತ್ಯಾಸ್ಪದನೂ, ವರ ಕೊಡುವದರಲ್ಲಿ ಈಶನೂ ಆದ, ನರಸಿಂಹ ದೇವರಿಗೆ ನಮೋ ನಮಃ. ೩೧

वित्तमत्तघ्नदेवेश नारसिंह नमोऽस्तु ते ।
सर्वे देवाः समाजग्मुर्नृसिंहं पानकैस्तदा ॥ ३२ ॥

ಐಶ್ವರ್ಯಮದದಿಂದ ಉನ್ಮತ್ತರಾದವರನ್ನು ನಾಶಮಾಡು. ನಾರಸಿಂಹನೇ ! ನಿನಗೆ ನಮಸ್ಕಾರಗಳು. ಎಲ್ಲ ದೇವತೆಗಳೂ ಪಾನಕಗಳಿಂದ ನರಸಿಂಹ ದೇವರನ್ನು ಕುರಿತು ಬಂದು ಸ್ತೋತ್ರಮಾಡಿದರು. ೩೨

कोटिलक्षसहस्रैश्च शतसंख्यैर्दशावरैः ।
यथा भक्त्यानुरूपैश्च पूजां चक्रुर्मुदान्विताः ॥ ३३ ॥

ಕೋಟಿ, ಲಕ್ಷ, ಸಹಸ್ರ, ನೂರು, ಕೊನೆಗೆ ಹತ್ತು ಸಂಖ್ಯಾಕವಾಗಿ ತಮ್ಮ ತಮ್ಮ ಭಕ್ತಿಗೆ ಅನುರೂಪವಾಗಿ ಸಂತೋಷದಿಂದ ಆ ನರಸಿಂಹ ದೇವರನ್ನು ಪೂಜಿಸಿದರು. ೩೩

तद्भक्त्या तु पपौ देवो नारसिंहोऽर्धमेव च ।
याहि याहीति जल्पंतः कृष्णां दृष्ट्वा पुनर्ययुः ॥ ३४ ॥

ಭಕ್ತವತ್ಸಲನಾಗಿ ನಾರಸಿಂಹನು ಅರ್ಧಮಾತ್ರ ಕುಡಿಯುತ್ತಿದ್ದನು. ರಕ್ಷಿಸು, ರಕ್ಷಿಸು, ಎಂದು ಹೇಳುತ್ತಾ ಕೃಷ್ಣವೇಣಿಯನ್ನು ನೋಡಿ ಮತ್ತೆ ಹೊರಟು ಹೋದರು. ೩೪

इति श्रुत्वा मुनेर्वाक्यं अगस्त्यस्य सधर्मिणी ।
लोपामुद्रा नरहरिं पूजयामास सादरम् ॥ ३५ ॥

ಅಗಸ್ತ್ಯ ಋಷಿಗಳ ಸಹಧರ್ಮಿಣಿಯಾದ ಲೋಪಮುದ್ರಾದೇವಿಯು,

ಬೇಗನೇ ಮುಂದೆ ಹೊರಟಳು. ೩೬

समुद्रं द्रष्टुमापेदे तरंगोल्लसती जलैः ।
पावयामास देशांश्च ज्ञानहीनान्नरान्मुदा ।
तस्यां तीर्थान्यनेकानि पापघ्नानि ततो द्विजाः ॥ ३७ ॥

ಜಲಪ್ರವಾಹಗಳ ತರಂಗಗಳ ಉತ್ಸಾಹದಿಂದ, ಸಮುದ್ರರಾಜನನ್ನು ನೋಡು ವುದಕ್ಕೆ (ಕೂಡಿಕೊಳ್ಳಲು) ದೇಶಗಳನ್ನು ಪವಿತ್ರ ಮಾಡುತ್ತಾ, ಅಜ್ಞಾನಿಗಳನ್ನು ಕೂಡ ಪವಿತ್ರ ಮಾಡುತ್ತಾ ಹೊರಟಳು. ಬ್ರಾಹ್ಮಣರೇ! ಆ ಕೃಷ್ಣವೇಣೀ ತಟಾಕದಲ್ಲಿ ಪಾಪಪರಿಹಾರಕವಾದ ಅನೇಕ ತೀರ್ಥಗಳು ಇರುವವು. ೩೭

वक्तुं शक्नोम्यहं नैव विशेषांश्च वदाम्यहम् ।
तीर्थवर्यान्महादेशे श्रृणुध्वं ऋषिसत्तमाः ॥ ३८ ॥

ಅವೆಲ್ಲವನ್ನೂ ಹೇಳಲು ನಾನು ಸಮರ್ಥನಲ್ಲ. ಋಷಿಶ್ರೇಷ್ಠರೇ! ವಿಶಿಷ್ಟಗಳಾದ ಮಹಾ ಮಹಾತೀರ್ಥಗಳು ಮಾತ್ರ ಮಹಾದೇಶದಲ್ಲಿ ಇರುವವು. ಹೇಳುವೆನು ಕೇಳಿರಿ. ೩೮

ऋषय ऊचुः –

ಋಷಿಗಳು ಹೇಳಿದರು –

तानि तीर्थानि वै स्कंद ब्रूहि सर्वज्ञ सुव्रत ।
त्वन्मुखोद्गतपीयूषसेवनात्तृप्तिमाप्नुमः ॥ ३९ ॥

ಷಣ್ಮುಖರೇ! ಸರ್ವಜ್ಞರಾದ ತಾವು ನಮಗೆ ಆ ವಿಶಿಷ್ಟಗಳಾದ ತೀರ್ಥಗಳನ್ನು ಹೇಳಿರಿ. ನಿಮ್ಮ ಮುಖಕಮಲದಿಂದ ಹೊರಟ ಅಮೃತ ಸೇವನವೇ ನಮಗೆ ತೃಪ್ತಿ ದಾಯಕವು. ೩೯

अतो देवेश कृष्णायाः सागरावधितो वद ।

ಎಲ್ಲ ತೀರ್ಥಗಳಲ್ಲಿಯೂ ಅತ್ಯುತ್ತಮವಾದ ಬೇರೆ ತೀರ್ಥವನ್ನು ಹೇಳುವೆನು.

विख्यातं तारकं तीर्थं योजनांतरसंवृतम् ।
याज्ञवल्क्यादयः सर्वे तीर्थान्यालोक्य यत्नतः ॥ ४

ಒಂದು ಯೋಜನದ ಅಂತರದಲ್ಲಿ ಪ್ರಸಿದ್ಧವಾದ ತಾರಕತೀರ್ಥವಿರುವ
ಯಾಜ್ಞವಲ್ಕ್ಯರೇ ಮೊದಲಾದ ಎಲ್ಲ ಋಷಿಗಳೂ ಪ್ರಯತ್ನ ಪೂರಕವಾಗಿ ತೀಥ
ದರ್ಶನ ಮಾಡುತ್ತಾ. ೪೧

तारकं च समाजग्मुः गंगातीरे विशेषतः ।
तावत्ते ददृशुर्वृक्षं राक्षसैर्जुष्टमंततः ॥ ४

ಕೃಷ್ಣವೇಣಿ ತಟಾಕದಲ್ಲಿ ವಿಶೇಷವಾದ ತಾರಕತೀರ್ಥಕ್ಕೆ ಬಂದರು. ಅಲ್ಲಿ ಒ
ಗಿಡವನ್ನು ನೋಡಿದರು. ಅದು ರಾಕ್ಷಸರಿಂದ ತುಂಬಿತ್ತು. ೪೨

तेषां दर्शनतो मुक्तास्त्राहीति शरणं ययुः ।
याज्ञवल्क्यादयः सर्वे विस्मयं प्रापुरंजसा ॥ ४

ಆ ಯಾಜ್ಞವಲ್ಕ್ಯರು ಮುಂತಾದ ಋಷಿಗಳ ದರ್ಶನದಿಂದ ರಾಕ್ಷಸಜನ್ಮ
ಮುಕ್ತರಾಗಿ, ರಕ್ಷಣೆ ಮಾಡಿರಿ. ಎಂದು ಶರಣು ಬಂದರು. ಯಾಜ್ಞವಲ್ಕ್ಯಾದಿ ಋಷಿ
ಪರಮಾಶ್ಚರ್ಯವಾಯಿತು. ೪೩

अश्वत्थवृक्षादुत्तीर्य स्ववृत्तांतं निवेद्य च ।
वयं ब्राह्मणदायादा रूपविद्याजनैर्वृताः ॥ ४

ಅಶ್ವತ್ಥ ವೃಕ್ಷದಿಂದ ಕೆಳಗೆ ಬಂದು ತಮ್ಮ ಇತಿಹಾಸವನ್ನು ಹೇಳಿಕೊಂಡರು. ನ
ರೂಪದಿಂದಲೂ ವಿದ್ಯಾದಿಂದಲೂ ಉನ್ಮತ್ತರಾಗಿ ಜನರಿಂದ ಕೂಡಿಕೊ
ಬ್ರಾಹ್ಮಣರನ್ನು ಅಪಮಾನ ಮಾಡುತ್ತಿದ್ದೆವು. ೪೪

एकदा वामदेवं तु दृष्ट्वा च तपसा कृशम् ।
गंगातीरे ध्याननिष्ठं हास्यं चक्ररनादताः । ४

ಉಳ್ಳವರಾಗಿ ಏನೂ ಮಾತನಾಡಲಿಲ್ಲ. ಅಷ್ಟರಿಂದಲೇ ನಾವು ನಮ್ಮ ಕರ್ಮದಗತಿಯಿಂದ ವಿಷಯಾತುರರಾಗಿ ಈ ಅವಸ್ಥೆಯನ್ನು ಪಡೆದಿರುವೆವು. ೪೬

अवस्थां प्राप्तुवंतश्च वृक्षमूलमुपाश्रिताः ।
भवतां दर्शनार्थं तु समायाता ह्यरण्यतः ॥ ४७ ॥

ಈ ಅವಸ್ಥೆಯನ್ನು ಪಡೆದು, ಈ ಗಿಡದ ಬೊಡ್ಡೆಯನ್ನು ಆಶ್ರಯಿಸಿರುವೆವು. ನಿಮ್ಮ ದರ್ಶನಾರ್ಥಿಯಾಗಿ ಅರಣ್ಯದಿಂದ ಬಂದಿರುವೆವು. ೪೭

साधूनां दर्शनादेव महापातकसंक्षयः ।
जायते तत्क्षणादेव सर्वदा करुणात्मनाम् ॥ ४८ ॥

ಯಾವಾಗಲೂ ಕರುಣಾಶಾಲಿಗಳಾದ ಸಾಧುಗಳ ದರ್ಶನದಿಂದಲೇ, ಮಹಾ ಪಾತಕಗಳೆಲ್ಲವೂ ಒಂದೇ ಕ್ಷಣದಲ್ಲಿ ಕ್ಷಯವಾಗುವುವು. ೪೮

इति वाक्यं समाकर्ण्य कृपाविष्टा मनस्विनः ।
कृष्णाजलैः सिषिंचुस्ते करुणावृतचेतसः ॥ ४९ ॥

ದಯಾಳುಗಳಾದ ಯಾಜ್ಞವಲ್ಕ್ಯ ಋಷಿಗಳು ಈ ಮಾತನ್ನು ಕೇಳಿ ಅಂತಃಕರಣ ಪೂರಿತರಾಗಿ ಕೃಷ್ಣವೇಣೀ ಜಲಗಳನ್ನು ಪ್ರೋಕ್ಷಿಸಿದರು. ೪೯

दिव्यदेहान्समासाद्य ज्ञानमापुर्यथा पुनः ।
नमस्कृत्य ऋषीन्सर्वान्स्नानं चक्रुस्तदाज्ञया ॥ ५० ॥

ದಿವ್ಯದೇಹಗಳನ್ನು ತೆಗೆದುಕೊಂಡು ಜ್ಞಾನಿಗಳಾದ ಎಲ್ಲ ಋಷಿಗಳಿಗೂ ನಮಸ್ಕಾರ ಮಾಡಿ, ಅವರ ಆಜ್ಞೆಯಿಂದ ಕೃಷ್ಣವೇಣಿಯಲ್ಲಿ ಸ್ನಾನ ಮಾಡಿದರು. ೫೦

विमलां मतिमास्थाय तत्रैव निवसन्द्विजाः ।
तारिता यत्र ऋषिभिर्ब्राह्मणास्तीर्थमुत्तमम् ॥ ५१ ॥

ನಿರ್ಮಲವಾದ ಬುದ್ಧಿಯುಳ್ಳವರಾಗಿ ಆ ಕೃಷ್ಣವೇಣೀ ತಟಾಕದಲ್ಲಿಯೇ ಅವರೆಲ್ಲರೂ ವಾಸಮಾಡಿದರು. ಆ ಬ್ರಾಹ್ಮಣರೂ, ಯಾವ ಋಷಿಗಳಿಂದ ರಾಕ್ಷಸ ಜನ್ಮದಿಂದ ರಕ್ಷಿತರಾದರೋ, ಆ ಉತ್ತಮವಾದ ತೀರ್ಥವು, ೫೧

याज्ञवल्क्यादयः सर्वे स्नानं चक्रुस्तपस्विनः ॥ ५

ಆ ತಾರಕತೀರ್ಥದ ಮುಂದೆ ಪರಮ ಶ್ರೇಷ್ಠವಾದ, ಅತಿಶಯ ಉತ್ತಮವ
ಋಷಿ ತೀರ್ಥವು ಇರುವದು. ಯಾಜ್ಞವಾಲ್ಕ್ಯ ಋಷಿಗಳೇ ಮೊದಲಾದ ತಪಸ್ವಿಗಳು
ಸ್ನಾನ ಮಾಡಿದರು. ೫೩

ऋषितीर्थमिति ख्यातं सर्वकामैकसाधनम् ।
ऋषितीर्थे नरः स्नात्वा ब्रह्मत्वं प्राप्नुयात् ध्रुवम् ॥ ५

ಸಕಲ ಕಾಮನೆಗಳಿಗೂ ಸಾಧನ ಭೂತವಾದ್ದರಿಂದ ಋಷಿ ತೀರ್
ಪ್ರಸಿದ್ಧವಾಗಿರುವದು. ಆ ಋಷಿ ತೀರ್ಥದಲ್ಲಿ ಸ್ನಾನ ಮಾಡಿದವರು ಬ್ರಹ್ಮಜ್ಞಾನ
ಪಡೆಯುವರು. ೫೪

॥ इति श्रीस्कंदपुराणे कृष्णामाहात्म्ये तारकतीर्थ वर्णनं नाम
एकोनषष्ठितमोऽध्यायः ॥

❀ ❀ ❀

## ॥ अथ षष्ठितमोऽध्यायः ॥

स्कंद उवाच –

पुरः पुरस्तदा कृष्णा पावनी जनरंजनी ।
सागरं द्रष्टुमन्वेष्टुमाययौ सा त्वरान्विता ॥

ಆ ಕೃಷ್ಣವೇಣಿಯು ಜನರನ್ನು ರಂಜನಬಡಿಸುತ್ತ ಮುಂದೆ ಮುಂದೆ ಬರುತ್ತ
ಬೇಗನೇ ಸಮುದ್ರರಾಜನನ್ನು ನೋಡಿ ಕೂಡಿಕೊಳ್ಳಲಿಕ್ಕೆ ಬಂದಳು. ೧

सागरोऽपि तदा दृष्ट्वा कृष्णां सर्वाघहारिणीम् ।
तत्र चोत्प्लुत्य वरुणः समुद्राच्च समुत्थितः ॥

ಆ ಸಮಯದಲ್ಲಿ ಸಮುದ್ರರಾಜನು (ವರುಣನು), ಸಕಲಪಾಪಪರಿಹಾರಕ

ಆಧಿಪತಿ ಯಾಗಿರುವದು. ಎಲ್ಲ ನದಿಗಳಿಗೂ ಆದಿಯಾದ ಈ ಕೃಷ್ಣವೇಣೀ ನದಿಗೆ, ಮಾನಕೊಡುವದರ ಗೋಸ್ಕರ ಅಭಿನಂದನ ಮಾಡಿದರು. ಲಕ್ಷ್ಮೀದೇವಿಯಿಂದ ಕೂಡಿಕೊಂಡು. ೩

तत्र नारायणो देवः शंखचक्रगदाधरः।
आविर्बभूव भगवान्जलात्स पुरुषोत्तमः ॥ ४ ॥

ಶಂಖ-ಚಕ್ರ-ಗದಾಧಾರಿಯಾದ ನಾರಾಯಣನು ಸಾಕ್ಷಾತ್ ಭಗವಂತನು. ಪುರುಷೋತ್ತಮನು. ಜಲದೊಳಗಿಂದ ಪ್ರಕಟನಾಗಿ ಬಂದನು. ೪

महेश्वरश्च स्वगणैः सुरैः सर्वैः पितामहः।
द्रष्टुं कृष्णाब्धिसंयोगं ऋषयश्च समाययुः ॥ ५ ॥

ರುದ್ರದೇವರು ತಮ್ಮ ಗಣಗಳಿಂದ ಕೂಡಿಕೂಂಡು, ಎಲ್ಲ ದೇವತೆಗಳಿಂದ ಕೂಡಿಕೊಂಡು, ಬ್ರಹ್ಮದೇವರು ಎಲ್ಲ ಋಷಿಗಳೂ ಕೂಡ, ಕೃಷ್ಣವೇಣೀ ಸಮುದ್ರ ಸಂಗಮವನ್ನು ನೋಡಲಿಕ್ಕೆ ಬಂದರು. ೫

अथ सर्वेषु श्रृण्वत्सु कृष्णास्नेहाज्जगद्गुरुः।
सादरं सागरं वाक्यमित्याह स जनार्दनः ॥ ६ ॥

ಅನಂತರದಲ್ಲಿ ಎಲ್ಲರಿಗೂ ಕೇಳಿಸುವಂತೆ ಜಗದ್ಗುರುನಾದ ಶ್ರೀನಾರಾಯಣನು, ಕೃಷ್ಣವೇಣಿಯ ಮೇಲಿನ ಸ್ನೇಹದಿಂದ ಸಮುದ್ರರಾಜನನ್ನು ಕುರಿತು ಈ ಮಾತನ್ನು ಹೇಳಿದನು. ೬

इयं सुधामयी देवी निर्मिता वै मया पुरा।
जगद्धितार्थमायाता माननीया त्वयाम्बुधे ॥ ७ ॥

ನಮಸ್ಕರಿಸಿ, ಆ ಕೃಷ್ಣವೇಣಿಯನ್ನು ಸ್ವೀಕರಿಸಿದನು. ಎಲ್ಲರಿಂದಲೂ ಪೂಜಾರ್ಹನಾದನು. ೮

ततो जय जयेत्युच्चैः स्तुवत्सु परमर्षिषु ।
नदत्सुदेवतूर्येषु कृष्णावेणीं समाश्लिषत् ॥ ९ ॥

ಎಲ್ಲ ಪರಮಋಷಿಗಳು ಉಚ್ಚಧ್ವನಿಯಿಂದ ಸ್ತೋತ್ರಮಾಡುತ್ತ ಜಯ ಜಯ ಕಾರಮಾಡಿದರು. ದೇವಲೋಕದಲ್ಲಿ ನಗಾರಿಗಳನ್ನು ಬಾರಿಸಿದರು. ಆ ಸಂಭ್ರಮದಲ್ಲಿ ವರುಣದೇವರು ಕೃಷ್ಣವೇಣಿಯನ್ನು ಆಲಿಂಗನ ಮಾಡಿದರು. ೯

प्रवृत्तिरूपा कृष्णा सा मुखेनैकेन चांबुधिम् ।
निवृत्तिवदना देवी जाता भीमा स्वयं पृथक् ॥ १० ॥

ಪ್ರವೃತ್ತಿರೂಪಳಾಗಿ ಕೃಷ್ಣವೇಣಿಯು ಒಂದೇ ಮುಖದಿಂದ ಸಮುದ್ರವನ್ನು ಪ್ರವೇಶಿಸಿದಳು. ಆಗ ಭಾಗೀರಥೀದೇವಿಯು ನಿವೃತ್ತಿವದನಳಾಗಿ ಭಿನ್ನಪ್ರವಾಹದಿಂದ ಸ್ವತಂತ್ರವಾಗಿ ಸಮುದ್ರವನ್ನು ಕೂಡಿಕೊಂಡಳು. ೧೦

कृष्णां तु गर्वितां दृष्ट्वा ममाधारेण गच्छसि ।
इति तस्या वचः श्रुत्वा पृथक् भीमा व्यवस्थिता ॥ ११ ॥

ಗರ್ವಿಷ್ಠಳಾದ ಕೃಷ್ಣವೇಣಿಯನ್ನು ನೋಡಿ, ನನ್ನ ಆಧಾರದಿಂದಲೇ ಸಮುದ್ರ ರಾಜನ ಹತ್ತರ ಹೋಗುತ್ತಿರುವಿ, ಎಂಬ ಅವಳ ಮಾತನ್ನು ಕೇಳಿ ಭೀಮರಥಿಯು ಪ್ರತ್ಯೇಕವಾಗಿ ಸಮುದ್ರರಾಜನನ್ನು ಕೂಡಿಕೊಂಡಳು. ೧೧

तन्मुखाख्या च वै वेणा सर्वसंकल्पनाशिनी ।
कृष्णावेणी च पापघ्नी त्रैलोक्ये सुंदरी द्विजाः ॥ १२ ॥

ಎಲ್ಲರ ಸಂಕಲ್ಪವನ್ನು ದೂರಮಾಡಿ ಪಾಪಪರಿಹಾರಕಳಾದ ತ್ರಿಲೋಕಸುಂದರಿ ಯಾದ ಕೃಷ್ಣೆಯು ಎಂದು, ವೇಣಿಯು ಕೃಷ್ಣೆಯ ಮುಖದಿಂದಲೇ ಸಮುದ್ರರಾಜನನ್ನು ಕೂಡಿಕೊಂಡಳು. ೧೨

पुष्पाणि ववृषुः सिद्धाः जगुर्गन्धर्वकिन्नराः ॥ १३ ॥

ಆಗ ಕೃಷ್ಣವೇಣಿಯು ಎರಡು ಪ್ರವಾಹಗಳ ಮುಖದಿಂದ ಸಮುದ್ರರಾಜನನ್ನು ಆಲಿಂಗನ ಮಾಡಿಕೊಂಡಳು. ಸಿದ್ಧರು, ಪುಷ್ಪವೃಷ್ಟಿ ಮಾಡಿದರು. ಗಂಧರ್ವರು, ಕಿನ್ನರರು, ಗಾಯನಮಾಡಿದರು. ೧೩

ननृतुश्चाप्सरः संघा गंगासागरसंगमे ।
अद्यापि शिवमुख्यास्ते सर्वे देवाः सहर्षिभिः ॥ १४ ॥

ಕೃಷ್ಣವೇಣೀ ಸಮುದ್ರಸಂಗಮ ಕಾಲದಲ್ಲಿ ಅಪ್ಸರೆಯರ ಗಣವೇ ನರ್ತನಮಾಡಿತು. ಇನ್ನೂವರೆಗೂ ರುದ್ರದೇವರೇ ಮೊದಲು ಮಾಡಿಕೊಂಡು ಎಲ್ಲದೇವತೆಗಳೂ, ಋಷಿಗಳೂ. ೧೪

तत्र सन्निहिता देवाः कृष्णायाः प्रियकाम्यया ।
वरांश्च प्रददुः सर्वे सर्वतीर्थाभिवंदिते ॥ १५ ॥

ಕೃಷ್ಣವೇಣಿಯ ಪ್ರೀತಿಗೋಸ್ಕರ ಎಲ್ಲ ದೇವತೆಗಳೂ ಅಲ್ಲಿಯೇ ಸನ್ನಿಹಿತರಾದರು. ಎಲ್ಲ ತೀರ್ಥಗಳಿಂದ ಅಭಿವಂದಿತಳಾದ ಕೃಷ್ಣವೇಣಿಗೆ ಎಲ್ಲರೂ ವರಗಳನ್ನು ಕೊಟ್ಟರು. ೧೫

तीर्थे जन्मत्रयाघघ्ने हरेः स्मरणमात्रतः ।
पश्चात्तु वारुणं तीर्थं वरुणो यत्र संगतः ॥ १६ ॥

ಈ ತೀರ್ಥದಲ್ಲಿ ಶ್ರೀಹರಿಯ ಸ್ಮರಣಮಾತ್ರದಿಂದ ಜನ್ಮತ್ರಯಗಳ ಪಾಪ ಪರಿಹಾರ ಮಾಡತಕ್ಕವಳಾಗು. ಅದರ ಮುಂದೆ ಕೃಷ್ಣವೇಣೀ ಸಮುದ್ರ ಸಂಗಮವು ವರುಣತೀರ್ಥವು. ೧೬

ततः संगममत्यर्थं सर्वतीर्थोत्तमोत्तमम् ।
कृष्णाब्धिसंगमे स्नानं कोटिजन्माघनाशनम् ॥ १७ ॥

ಅದರ ಮುಂದೆ ಎಲ್ಲ ತೀರ್ಥಗಳಲ್ಲಿಯೂ, ಉತ್ತಮೋತ್ತಮವಾದ ಸಂಗಮ

अत्र तीर्थान्यसंख्यानि वक्तुं न गुरुरप्यलम् ॥ १९ ॥

ಸಹ್ಯಾದ್ರಿಯಿಂದ ಆರಂಭ ಮಾಡಿ ಸಮುದ್ರ ಪರಿಯಂತರವಾಗಿ, ಅಸಂಖ್ಯವಾದ ತೀರ್ಥಗಳು ಇರುವವು. ಹೇಳಲಿಕ್ಕೆ ನನ್ನ ಗುರುಗಳೂ ಸಮರ್ಥರಲ್ಲ. ೧೯

साकल्येन च माहात्म्यमनंतं को नु संवदेत्।
एतान्यहरहर्विप्राः संस्मृतान्यपि भक्तितः ॥ २० ॥

ಈ ಅನಂತ ಮಾಹಾತ್ಮ್ಯವನ್ನು ಸಂಪೂರ್ಣವಾಗಿ ಹೇಳುವದು ಯಾರಿಗೆ ಸಾಧ್ಯವು ? ಈಗ ಹೇಳಿದಷ್ಟನ್ನು ಬ್ರಾಹ್ಮಣರೇ, ಪ್ರತಿದಿನ ಭಕ್ತಿಯಿಂದ ಸ್ಮರಣ ಮಾಡಿದರೆ ಸಾಕು. ೨೦

तत्र स्नानफलं दद्युस्ततोक्तानि मयाधुना।
कृष्णा सर्वाद्य संघघ्नी सर्वपुण्यरसाधिका ॥ २१ ॥

ಅಲ್ಲಿ ಎಲ್ಲ ತೀರ್ಥಸ್ನಾನಮಾಡಿದ ಫಲಗಳನ್ನು ಕೃಷ್ಣವೇಣಿಯು ಕೊಡುವಳು. ಸಕಲ ಪಾಪ ಪರಿಹಾರಕಳಾದ ಸರ್ವಪುಣ್ಯ ರಸಮೂರ್ತಿಮಂತಳಾದ ಕೃಷ್ಣವೇಣಿಯು ಕೊಡುವಳು ಅಂತ ನಾನು ನಿಮಗೆ ಹೇಳಿರುವೆನು. ೨೧

जलमूर्तिर्जगन्मूर्तिस्तीर्थभेदे द्विधापि हि।
नैषा क्षेत्रबलात्तीर्थं नैषा दैवतसन्निधेः ॥ २२ ॥

ಜಲಮೂರ್ತಿ, ಜಗನ್ಮೂರ್ತಿ ಎಂಬ ತೀರ್ಥಗಳು ಎರಡು ಪ್ರಕಾರಗಳಾಗಿರುವವು. ಈ ಕ್ಷೇತ್ರದ ಸಮಾನವಾದ ಬಲಿಷ್ಠವಾದ ತೀರ್ಥವು ಮತ್ತೊಂದು ಇಲ್ಲ. ಇದು ಎಷ್ಟು ದೇವತಾ ಸನ್ನಿಧಾನ ಉಳ್ಳದ್ದೋ, ಅಷ್ಟು ಮತ್ತೊಂದು ದೇವತಾ ಸನ್ನಿಧಾನ ಉಳ್ಳದ್ದಲ್ಲ. ೨೨

नैशा तीर्थबलात्तीर्थं पुण्या सर्वैरसर्वदा।
आदौ मध्ये तथा चान्ते स्पृष्टा ज्वाला तृणं दहेत् ॥ २३ ॥

ಇದರಷ್ಟು ಬಲಿಷ್ಠವಾದ ತೀರ್ಥ ಮತ್ತೊಂದು ಇಲ್ಲ. ಯಾವಾಗಲೂ ಎಲ್ಲ ಪುಣ್ಯ ಕೊಡುವವಳು. ಆರಂಭದಲ್ಲಿ, ಮಧ್ಯದಲ್ಲಿ, ಕೊನೆಯಲ್ಲಿಯೂ ತೀರ್ಥಸ್ನಾನಮಾಡಿದರೆ

ನಾಶ ಮಾಡುವಳು. ಹೇಗೆ ಬೆಲ್ಲದ ಕರಣಿಯು ಎಲ್ಲ ಕಡೆಗೆ ಮಧುರವಾಗಿರುವದೋ ಹಾಗೇ. ೨೪

एवं विष्णुमयी कृष्णा सर्वत्र सकलेष्टदा ।
कृष्णावेणोभयतटं योजनांतरसंस्थितम् ॥ २५ ॥

ಹೀಗೆ ಕೃಷ್ಣೆಯು ವಿಷ್ಣುಮಯಳಾಗಿ ಸರ್ವತ್ರದಲ್ಲಿ ಸಕಲ ಇಷ್ಟಾರ್ಥಗಳನ್ನು ಕೊಡುವವಳು. ಕೃಷ್ಣವೇಣಿಯ ಎರಡೂ ತಟಗಳು ಒಂದು ಯೋಜನದ ಅಂತರದವರೆಗೂ ಸನ್ನಿಧಾನ ಉಳ್ಳದ್ದಾಗಿರುವದು. ೨೫

क्षेत्रं विमुक्तिदं प्राहुरंतरासह्य सागरम् ।
मासं त्वहरहः स्नात्वा त्रिपराकफलं लभेत् ॥ २६ ॥

ಸಹ್ಯಾದ್ರಿಯಿಂದ ಸಮುದ್ರಪರ್ಯಂತರ ಇರುವ ಎಲ್ಲ ತೀರ್ಥಗಳೂ ಮುಕ್ತಿ ಪ್ರದವಾದ ಕ್ಷೇತ್ರಗಳು. ಪ್ರತಿದಿನದಂತೆ ೧ ತಿಂಗಳ ಪರಿಯಂತರ ಸ್ನಾನಮಾಡಿದವರು, ಮೂರು ಪರಾರ್ಧ ಫಲವನ್ನು ಪಡೆಯುವರು. ೨೬

माघे मासि तु यः स्नायाद्भक्त्या प्रागुदयाद्रवेः ।
द्विपराकफलं तस्य स्यात्तथैव च कार्तिके ॥ २७ ॥

ಮಾಘಮಾಸದಲ್ಲಿ ಸೂರ್ಯೋದಯಕ್ಕಿಂತಲೂ ಮೊದಲು ಯಾರು ಸ್ನಾನ ಮಾಡುವರೋ ಅವರಿಗೆ ೨ ಪರಾರ್ಧ ಫಲಬರುವದು. ಹಾಗೇ ಕಾರ್ತೀಕ ಮಾಸದಲ್ಲಿಯೂ ಅಷ್ಟೇ ಬರುವದು. ೨೭

संवत्सरं तु यः स्नायात् सर्वदा नियतेंद्रियः ।
सर्वान्कामानिह प्राप्य मृते मुक्तिमवाप्नुयात् ॥ २८ ॥

ಒಂದು ವರ್ಷ ಪರ್ಯಂತರವಾಗಿ ಇಂದ್ರಿಯನಿಗ್ರಹ ಮಾಡಿಕೊಂಡು ಯಾರು ಸ್ನಾನಮಾಡುವರೋ ಅವರು ಇಹದಲ್ಲಿ ಸಕಲ ಕಾಮನೆಗಳನ್ನು ಪಡೆದು ಕೊನೆಗೆ ಮುಕ್ತಿಯನ್ನು ಪಡೆಯುವರು. ೨೮

जगद्धितार्थमायातां शरण्यां शरणं व्रजेत् ॥ ३० ॥

ಸೌಭಾಗ್ಯವನ್ನು ಉಂಟು ಮಾಡಿಕೊಡತಕ್ಕ ಶಾಂತಿದಾಯಕವಾದ ಸಕಲ ಉಪದ್ರವ ನಾಶಕಳಾಗಿ ಶರಣು ಬಂದವರಿಗೆ ಶರಣಾಗತರಕ್ಷಕಳಾಗಿ ಜಗತ್ತಿನ ಹಿತದ ಸಲುವಾಗಿ ಬರುವಂಥವಳು ಕೃಷ್ಣವೇಣಿಯು. ೩೦

लब्ध्वापि भारते जन्म कृष्णवेणीं तु ये नराः ।
न मज्जंति न पश्यंति शोच्यास्ते बत पापिनः ॥ ३१ ॥

ಭಾರತ ಭೂಮಿಯಲ್ಲಿ ಜನ್ಮಪಡೆದು ಯಾವ ಮನುಷ್ಯರು ಕೃಷ್ಣವೇಣಿ ನದಿಯಲ್ಲಿ ಅವಗಾಹನ ಸ್ನಾನಮಾಡುವದಿಲ್ಲವೋ, ಕೃಷ್ಣವೇಣಿಯನ್ನು ನೋಡುವದಿಲ್ಲವೋ, ಅವರೇ ಶೋಚನೀಯರು, ಮಹಾ ಪಾಪಿಗಳು. ೩೧

पराशरोपि भगवान्नदीनां मातरं वदन् ।
सह्यपादप्रसूतानां सर्वाधिक्यं जगाविति ॥ ३२ ॥

ಪರಾಶರ ಋಷಿಗಳೂ ಕೂಡ, ಭಗವಂತನೂ ಕೂಡ, ಈ ಕೃಷ್ಣವೇಣಿಯನ್ನು ಎಲ್ಲ ನದಿಗಳಿಗೂ ತಾಯಿ ಎಂದು ಹೇಳಿರುವರು. ಸಹ್ಯಾದ್ರಿಯಿಂದ ಹುಟ್ಟಿದ ಎಲ್ಲ ನದಿಗಳಕ್ಕಿಂತಲೂ ಸರ್ವಾಧಿಕವಾಗಿರುವದು ಎಂದು ಗಾಯನಮಾಡಿದರು. ೩೨

त्रिभिः सारस्वतं तोयं सप्ताहे न तु यामुनम् ।
सद्यः पुनाति गांगेयं दर्शनादेव नर्मद-म् ॥ ३३ ॥

ಸರಸ್ವತೀ ನದಿಯ ನೀರು ಮೂರು ದಿನಗಳಲ್ಲಿ ಫಲ ಪ್ರದವಾಗಿರುವದು. ಯಮುನಾ ನದಿಯು ಏಳು ದಿನಗಳಲ್ಲಿ ಫಲ ಪ್ರದವು. ನರ್ಮದಾನದಿಯು ದರ್ಶನ ಮಾತ್ರದಿಂದ ಫಲಪ್ರದವು. ಗಂಗಾನದಿಯು ತಕ್ಷಣದಲ್ಲಿ ಪವಿತ್ರ ಮಾಡುವದು. ೩೩

गोदावरी भीमरथी कृष्णवेणोत्तमोत्तमा ।
ख्यातिं तस्याः पुरा विष्णुर्मायया स समावृणोत् ॥ ३४ ॥

ಗೋದಾವರೀ, ಭೀಮರಥಿ, ಎಲ್ಲ ನದಿಗಳಕಿಂತಲೂ ಕೃಷ್ಣವೇಣಿಯು ಉತ್ತಮೋ

ಎಲ್ಲ ತೀರ್ಥಾಭಿಮಾನಿಗಳು ಪ್ರಾರ್ಥನೆ ಮಾಡಿದ್ದಾಗ್ಗೆ, ಬ್ರಹ್ಮದೇವರು ಹೇಳಿದರು. ವ್ರತನಿಯಮವಿಲ್ಲದವರೂ, ಅಧ್ಯಯನಮಾಡದೇ ಇರುವವರೂ, ಯಜ್ಞಯಾಗಾದಿಗಳನ್ನು ಮಾಡದೇ ಇರುವವರೂ. ೩೫

कृष्णाया: स्नानमात्रेण यास्यंति परमां गतिम्।

नारद उवाच –

इत्यर्थितो जगत्स्थित्यै तस्मान्माहात्म्यमावृणोत् ॥ ३६ ॥

ಕೃಷ್ಣವೇಣೀಸ್ನಾನಮಾತ್ರದಿಂದ ಸದ್ಗತಿಯನ್ನು ಪಡೆಯುವರು.

**ನಾರದರು ಹೇಳಿದರು –**

ಜಗತ್ತಿನ ಸಂರಕ್ಷಣದಗೋಸ್ಕರ ಪ್ರಾರ್ಥನೆ ಮಾಡಿದ್ದರಿಂದ ಈ ಮಾಹಾತ್ಮ್ಯವನ್ನು ಹೇಳಿದರು. ೩೬

पुनर्जनानां कारुण्यात् वर्षे द्वादशके हरिः।
प्रकाशमकरोत्पश्चाद्गुरौ कन्यागते हरिः ॥ ३७ ॥

ಮತ್ತೆ ಜನರ ಮೇಲಿನ ಅಂತಃಕರಣದಿಂದ ಪ್ರತಿ ಹನ್ನೆರಡು ವರ್ಷಕ್ಕೆ ಒಂದುಸಲದಂತೆ (ಕನ್ಯಾರಾಶಿಗೆ ಗುರುಬಂದಕಾಲಕ್ಕೆ) (ಗಂಗಾದೇವಿ) ಭಾಗೀರಥಿಯಿಂದ ಸನ್ನಿಹಿತಳಾಗಿರುವಳು. ೩೭

तदा सर्वाणि तीर्थानि कृष्णायामागतानि वै।
अघनाशनसामर्थ्यं प्राप्नुवंति पुनः पुनः ॥ ३८ ॥

ಆ ಕನ್ಯಾಗತ ಕಾಲದಲ್ಲಿ ಎಲ್ಲ ತೀರ್ಥಗಳೂ, ಕೃಷ್ಣವೇಣಿಯಲ್ಲಿ ಸನ್ನಿಹಿತ ರಾಗಿರುವರು. ಮತ್ತೇ ಮತ್ತೇ ಪಾಪವನ್ನು ಪರಿಹಾರಮಾಡುವ ಸಾಮರ್ಥ್ಯ ಉಳ್ಳವರಾಗಿರುವರು. ೩೮

तदा मोहस्यापगमात्सर्वे श्रद्धासमन्विताः।
ये मज्जंति जनाः कृष्णां कृतार्थाश्च भवंति ते ॥ ३९ ॥

ಅವರನ್ನು ನರಕಕ್ಕೆ ಕಳಿಸುವೆನು. ನಿಜವಾಗಿಯೂ ಇದು ನನ್ನ ಮಹಿಮೆಯು. ೪೦

महापातकजान्दोषान्नाशयित्वा च मोक्षदा ।
स्नानमात्रेण तेनेयं कृष्णवेणी महानदी ॥ ४१ ॥

ಮಹಾಪಾತಕಗಳಿಂದ ಹುಟ್ಟಿದ ಏನೇನು ದೋಷಗಳಿದ್ದರೂ, ಮಹಾನದಿ ಕೃಷ್ಣವೇಣಿಯು ಸ್ನಾನಮಾತ್ರದಿಂದ ಆ ಎಲ್ಲ ದೋಷಗಳನ್ನೂ ನಾಶಮಾಡಿ ಮೋಕ್ಷ ಕೊಡುವಳು. ೪೧

तस्मादाजन्ममरणात् कृष्णायामेव संवसेत् ।
तस्यास्तु दर्शनात्स्पर्शात् स्नानादपि विमुच्यते ॥ ४२ ॥

ಆದಕಾರಣ ಜನ್ಮದಾರಭ್ಯ ಮರಣ ಪರ್ಯಂತ, ಕೃಷ್ಣವೇಣಿಯಲ್ಲಿ (ತೀರದಲ್ಲಿ)ಯೇ ವಾಸಮಾಡಬೇಕು. ಆ ಕೃಷ್ಣವೇಣಿಯ ದರ್ಶನದಿಂದ, ಸ್ಪರ್ಶದಿಂದಲೂ, ಸ್ನಾನದಿಂದಲೂ, ಮುಕ್ತರಾಗುವರು. . ೪೨

नियतेनैव वक्तव्यं विरक्तेन च धीमता ।
पुण्यवृद्धिरिहात्यर्थं पापहानिः पदे पदे ॥ ४३ ॥

ಬುದ್ಧಿವಂತರಾಗಿ ವೈರಾಗ್ಯದಿಂದ ನಿಯಮದಿಂದ, ಕೃಷ್ಣವೇಣಿಯಲ್ಲಿ ವಾಸ ಮಾಡತಕ್ಕದ್ದು. ಪುಣ್ಯವೃದ್ಧಿಯಾಗುವುದು. ಹೆಜ್ಜೆ-ಹೆಜ್ಜೆಗೆ ಪಾಪಗಳೆಲ್ಲವೂ ನಾಶ ವಾಗುವವು. ೪೩

अशक्तत्वादिनोपेतो देवीं नित्यं क्षमापयेत् ।
सायंप्रातःशुचिर्नद्यां नैव पापमवाप्नुयात् ॥ ४४ ॥

ಅಶಕ್ತರಾದವರು ನಿತ್ಯದಲ್ಲಿಯೂ ಕೃಷ್ಣವೇಣಿ ದೇವಿಯನ್ನು ಕ್ಷಮೆ ಕೇಳಿ ಕೊಳ್ಳಬೇಕು. ಸಾಯಂಕಾಲದಲ್ಲಿ, ಪ್ರಾತಃಕಾಲದಲ್ಲಿ ಶುಚಿರ್ಭೂತರಾಗಿ ಕ್ಷಮೆ ಕೇಳಿಕೊಂಡರೆ ಯಾವ ಪಾಪವೂ ಲೇಪವಾಗುವುದಿಲ್ಲ. ೪೪

ಸ್ನಾನಕಾಲದಲ್ಲಿ ಸತತವಾಗಿ ಕೃಷ್ಣವೇಣೀ ದೇವಿಯನ್ನು ಈ ಪ್ರಕಾರ ಪ್ರಾರ್ಥಿಸಬೇಕು. ಸಹ್ಯಾದ್ರಿಯಿಂದ ಆವಿರ್ಭೂತಳಾದ ಶ್ರೀಶೈಲಪರ್ಯಂತರವಾಗಿ ಸಂಚರಿಸುವಂತಹ ದೇವೀ. ೪೬

कृष्णावेणीति विख्याते सर्वपापप्रणाशिनि।
सर्वपापविशुध्यर्थं स्नास्ये देवि तवांभसि ॥ ४७ ॥

ಸಕಲ ಪಾಪಪರಿಹಾರಕಳಾದ ಕೃಷ್ಣವೇಣಿಯೆಂದು ಪ್ರಸಿದ್ಧಳಾದ ದೇವೀ, ಸಕಲ ಪಾಪಗಳನ್ನು ಕಳೆದುಕೊಳ್ಳಲಿಕ್ಕೆ ನಿನ್ನ ತೀರ್ಥದಲ್ಲಿ ಸ್ನಾನ ಮಾಡುವೆನು. ೪೭

प्रसीद मे देवि सदाऽमरेज्ये पूर्वं तु सृष्टा जगतां विमुक्तये।
स्नानेन यस्यामवधूतपापः प्राप्नोति विष्णोः पदमेव मर्त्यः ॥ ४८ ॥

ಅಮರಳಾದ, ಜ್ಯೇಷ್ಠಳಾದ, ಕೃಷ್ಣವೇಣೀ ದೇವೀ! ನನ್ನ ಮೇಲೆ ಪ್ರಸನ್ನಳಾಗು. ಜಗತ್ತಿನಿಂದ ಮುಕ್ತಿ ಪಡೆಯುವುದಕ್ಕೋಸ್ಕರ ಮೊದಲು ನಿನ್ನನ್ನು ಸೃಷ್ಟಿ ಮಾಡಿದರು. ಆ ನಿನ್ನ ಹೆಸರಿನ ಕೃಷ್ಣವೇಣಿಯ ನದಿಯಲ್ಲಿ ಸ್ನಾನ ಮಾಡುವುದರಿಂದ, ಸಕಲಪಾಪವನ್ನು ಕಳೆದುಕೊಂಡು ಮನುಷ್ಯನಾದವನು ವಿಷ್ಣುಲೋಕವನ್ನು ಪಡೆಯುವನು. ೪೮

ब्रम्हामृतानंदरसेन पूर्णां जलेन पूर्णामिति मेनिरे जनाः।
तां त्वावगाहामि पिबामि कृष्णोदेवान् ऋषीनतर्पयिष्ये पितृंश्च ॥ ४९ ॥

ಬ್ರಹ್ಮ ಜ್ಞಾನದ ಅಮೃತಮಯವಾದ ಆನಂದದ ರಸದಿಂದ ಪೂರ್ಣವಾದ ನೀರಿನಿಂದ ತುಂಬಿ ಹರಿಯುವಳು ಕೃಷ್ಣವೇಣಿಯು. ಎಂದು ಜನರು ತಿಳಿದಿರುವರು. ಆ ಬ್ರಹ್ಮಾನಂದರ ರಸದಿಂದ ಪೂರ್ಣವಾದ ನೀರಿನ ಪ್ರವಾಹರೂಪ ಕೃಷ್ಣವೇಣಿಯಲ್ಲಿ ಅವಗಾಹಸ್ನಾನ ಮಾಡುವೆನು. ನೀರು ಕುಡಿಯುವೆನು. ದೇವತೆಗಳಿಗೆ ಋಷಿಗಳಿಗೆ ತರ್ಪಣ ಕೊಡುವೆನು. ಹಾಗೂ ಪಿತೃಗಳಿಗೆ ತರ್ಪಣಕೊಡುವೆನು. ೪೯

दृष्ट्वा जन्मशतं पापं स्पृष्ट्वा जन्मशतत्रयम्।
स्नात्वा जन्मसहस्त्राणि हंति कृष्णा कलौ युगे ॥ ५० ॥

ಈ ಕಲಿಯುಗದಲ್ಲಿ. ಕೃಷ್ಣವೇಣೀ ದರ್ಶನ ಮಾತ್ರದಿಂದ, ಒಂದು ನೂರು ಜನ್ಮದ

निपात: कृष्णवेण्यां ब्रह्मभूयाय कल्पते ॥ ५१ ॥

ಈ ಮಹಾಮಹಿಮೋಪೇತವಾದ ಕೃಷ್ಣವೇಣೀ ತೀರದಲ್ಲಿ ಯಾವ ಮನುಷ್ಯನು ವಾಸಮಾಡುವನೋ, ಆ ಬ್ರಾಹ್ಮಣನು ನಿಜವಾಗಿಯೂ ಧನ್ಯನು, ಪುಣ್ಯವಂತನು. ಕೃಷ್ಣವೇಣೀ ತೀರದಲ್ಲಿ ದೇಹ ಬಿಟ್ಟರೆ ಬ್ರಹ್ಮ ಲೋಕದಲ್ಲಿ ವಿರಾಜಮಾನನಾಗುವನು. ೫೧

तत्रस्थं तीर्थमालोक्य पूजनं प्रणतिं तथा ।
कृत्वा ययौ मुनिर्यत्र गुहस्तत्र समादरात् ॥ ५२ ॥

ಆ ಕೃಷ್ಣವೇಣೀ ತೀರದಲ್ಲಿರುವ ತೀರ್ಥಗಳನ್ನು ಯಾರು ಪೂಜಿಸುವರೋ, ನಮಸ್ಕಾರ ಮಾಡುವರೋ, ಅವರು ಸಾಕ್ಷಾತ್ ಋಷಿಗಳು. ಅವರು ಇರುವ ಸ್ಥಳದಲ್ಲಿ ಸಾಕ್ಷಾತ್ ಸುಬ್ರಹ್ಮಣ್ಯರು(ಷಣ್ಮುಖರು) ಬರುವರು. ೫೨

गुहः सत्कृत्य च मुनिं पप्रच्छागमकारणम् ।
संसारे हि महान्लाभो वैराग्यं परमुच्यते ॥ ५३ ॥

ಷಣ್ಮುಖನು ಆ ಋಷಿಗಳನ್ನು ಸತ್ಕರಿಸಿ ನೀವು ಬಂದ ಕಾರಣಗಳು ಯಾವುವು ? ಎಂದು ಪ್ರಶ್ನೆ ಮಾಡಿರುವರು. ಆಗ ಋಷಿಗಳು ಹೇಳಿದರು. ಸಂಸಾರದಲ್ಲಿ ಪರಮ ಲಾಭ ಯಾವುದು ? ಎಂದರೆ ವೈರಾಗ್ಯವೇ ಪರಮ ಲಾಭವು. ೫೩

परोपकारदक्षोऽसीत्युक्त्वा चांतर्दधे गुहः ।
मद्वाक्यश्रवणात् स्वामिन्परां सिद्धिमवाप्स्यसि ॥ ५४ ॥

ನೀವು ಪರೋಪಕಾರ ಮಾಡುವುದರಲ್ಲಿ ಪರಮ ದಕ್ಷರು ಎಂದು ಹೇಳಿ, ಷಣ್ಮುಖರು ಅಂತರ್ಧಾನರಾದರು. ಈ ನನ್ನ ಕೃಷ್ಣವೇಣಿಯ ಕಥಾ ಶ್ರವಣದಿಂದ ಪೂಜ್ಯರೇ ಸಿದ್ಧಿಯನ್ನು ಪಡೆಯುವಿರಿ. ೫೪

इदमेव हि मांगल्यं इदमेव धनार्जनम् ।
जीवितस्य फलं चैतत् श्रवणं सर्वसिद्धिदम् ॥ ५५ ॥

ಇದೇ ಪರಮ ಮಂಗಳಪ್ರದವು. ಇದುವೇ ಪರಮಐಶ್ವರ್ಯ ಸಂಪಾದನೆಯು.

ಅರ್ಥವಿಲ್ಲ. ಕೇಶವನ ಹೊರತಾಗಿ ಬೇರೆ ಕಾಮನೆಗಳಿಲ್ಲ. ಶ್ರೀ ಹರಿಯ ಹೊರತಾಗಿ ಬೇರೆ ಮೋಕ್ಷವಿಲ್ಲ. ೫೬

इत्यादिमाहात्म्यमनंतशक्ति-
र्द्विजान्गुहोऽप्याह स वै ऋषिभ्यः ।
मया भवद्भ्यः कथितं मुनीन्द्रा-
स्तथा भवंतोऽपि वदंतु सद्भ्यः ॥ ५७ ॥

ಇತ್ಯಾದಿ ಮಹಾ ಮಹಿಮೋಪೇತವಾದ ಅನಂತ ಶಕ್ತಿವುಳ್ಳ ಈ ಮಹಾತ್ಮ್ಯವನ್ನು ಷಣ್ಮುಖರು ಬ್ರಾಹ್ಮಣರಿಗೆ ಹೇಳಿದರು. ಅವರು ಋಷಿಗಳಿಗೆ ಹೇಳಿದರು. ನಾನು ನಿಮಗೆ ಹೇಳಿದೆನು. ಹಾಗೇ ನೀವು ಸಜ್ಜನರಿಗೆ ಹೇಳಿರಿ. ೫೭

आख्यानमेतत्परमं पवित्रं यः श्रावयेद्भक्तियुतो द्विजेभ्यः ।
स सर्वपापानि विधूय विष्णोः प्राप्नोति सत्यं पदमेव भास्वत् ॥ ५८ ॥

ಈ ಪರಮ ಪವಿತ್ರವಾದ ಆಖ್ಯಾನವನ್ನು ಭಕ್ತಿ ಪುರಃಸರವಾಗಿ ಯಾರು ಬ್ರಾಹ್ಮಣರಿಗೆ ಶ್ರವಣ ಮಾಡಿಸುವರೋ, ಅವರ ಎಲ್ಲ ಪಾಪಗಳೂ ಕಳೆದುಹೋಗಿ, ಪರಮಾತ್ಮನ ಸತ್ಯಲೋಕವನ್ನು ಪಡೆದು ವಿರಾಜಮಾನರಾಗುವರು. ೫೮

पुत्रार्थी लभते पुत्रं धनार्थी धनमाप्नुयात् ।
विद्यार्थी लभते विद्यां जयार्थी लभते जयम् ॥ ५९ ॥

ಮಕ್ಕಳನ್ನು ಬಯಸುವವರು ಪುತ್ರವಂತರಾಗುವರು. ಧನವನ್ನು ಬಯಸುವವರು ಐಶ್ವರ್ಯವಂತರಾಗುವರು. ವಿದ್ಯೆಯನ್ನು ಬಯಸುವವರು ವಿದ್ಯಾವಂತರಾಗುವರು. ಜಯವನ್ನು ಬಯಸುವವರು ಜಯಶೀಲರಾಗುವರು. ೫೯

ज्ञानार्थी लभते ज्ञानं मोक्षार्थी मोक्षमाप्नुयात् ।
[illegible] ॥ ६० ॥

|| इति श्री स्कंदपुराणे कृष्णामाहात्म्ये स्कंदनारदसंवादे
उभयतोमुखी कृष्णासमुद्रप्रवेशो नाम
षष्ठितमोऽध्यायः ||

|| शुभं भवतु ||

❀ ❀ ❀

यथामत्यनुसारेण सावधानतया पुनः ।
कृष्णामाहात्म्यमेतत्तु शोधितं मे तथापि च || १ ||

दृष्टिभ्रमात्प्रमादाद्वा स्वरव्यंजनमात्रकाः ।
न्यूनाधिका भवेयुश्चेत्क्षाम्यंतु सुधियो मयि || २ ||

ನನ್ನ ಯಥಾಶಕ್ತಿ, ಯಥಾಮತಿ, ಅನುಸರಿಸಿ ಸಮಾಧಾನದಿಂದ ಈ ಕೃಷ್ಣಾಮಹಾತ್ಮ್ಯವು ನನ್ನಿಂದ ಕನ್ನಡ (ಮಾತೃಭಾಷೆಯಲ್ಲಿ) ಪ್ರಾಕೃತ ಭಾಷೆಯಲ್ಲಿ ಶೋಧನೆ ಮಾಡಲ್ಪಟ್ಟಿದೆ. ದೃಷ್ಟಿಭ್ರಮದಿಂದ ಪ್ರಮಾದದಿಂದ ಸ್ವರಗಳು ವ್ಯಂಜನಗಳು ಮಾತ್ರಾಗಳು ಹೆಚ್ಚು ಕಡಿಮೆ ಆಗಿದ್ದರೆ ಬುದ್ಧಿವಂತರಾದ ತಾವು ನನ್ನನ್ನು ಕ್ಷಮಿಸಬೇಕು. ೧-೨

|| इति श्री लक्ष्मीनृसिंहार्पणमस्तु ||

सूतसूत महाभाग सर्वशास्त्र विशारद।
क्षेत्राणामुत्तमं क्षेत्रं कथयस्व महामते ॥ १ ॥

**ಶೌನಕ ಉವಾಚ –**

ಸಕಲಶಾಸ್ತ್ರ ಪಾರಂಗತರಾದ, ಮಹಾಭಾಗ್ಯವಂತರಾದ ಸೂತಾಚಾರ್ಯರೇ, ಪರಮಬುದ್ಧಿವಂತರಾದ ನೀವು, ಶೌನಕ ಋಷಿಗಳಾದ ನಮಗೆ ಎಲ್ಲ ಕ್ಷೇತ್ರಗಳಲ್ಲಿಯೂ ಉತ್ತಮವಾದ ಕ್ಷೇತ್ರಯಾವುದು ಎಂಬುದನ್ನು ಹೇಳಿರಿ. ೧

**सूत उवाच –**

श्रृणुध्वं ऋषयः सर्वे ह्यहं वक्ष्यामि सांप्रतम्।
शूर्पालयं महाक्षेत्रं कलौ चास्ति ह्यनुत्तमम्,
शूर्पालयसमं क्षेत्रं न भूतं न भविष्यति ॥ २ ॥

**ಸೂತ ಉವಾಚ –**

ಶೌನಕಾದಿ ಋಷಿಗಳೇ! ಈಗ ನಾನು ಹೇಳುವೆನು ಕೇಳಿರಿ. ಕಲಿಯುಗದಲ್ಲಿ ಅತಿಶಯ ಉತ್ತಮವಾದ ಕ್ಷೇತ್ರವೆಂದರೆ ಮಹಾಕ್ಷೇತ್ರ ಶೂರ್ಪಾಲಯವು. ಶೂರ್ಪಾಲಯ ಸಮಾನವಾದ ಕ್ಷೇತ್ರವು ಹಿಂದೂ ಇಲ್ಲ. ಮುಂದೂ ಆಗುವದಿಲ್ಲ. ೨

तस्मात् शूर्पालयसमं न हि ब्रह्मांडगोलके।
यथाश्वमेधो यज्ञानां पर्वतानां हिमस्तथा ॥ ३ ॥

ಆದಕಾರಣ ಅಖಂಡ ಬ್ರಹ್ಮಾಂಡದಲ್ಲಿಯೇ, ಶೂರ್ಪಾಲಯದ ಸಮಾನಕ್ಷೇತ್ರವು ಇಲ್ಲವೇ ಇಲ್ಲ. ಹೇಗೆ ಎಲ್ಲ ಯಜ್ಞಗಳಲ್ಲಿ ಅಶ್ವಮೇಧ ಯಜ್ಞವು ಶ್ರೇಷ್ಠವೋ, ಎಲ್ಲ ಪರ್ವತಗಳಲ್ಲಿ ಹಿಮಾಲಯ ಪರ್ವತವು ಶ್ರೇಷ್ಠವೋ ಹಾಗೆ. ೩

यथात्मविद्या विद्यानां स्त्रीणां लक्ष्मी यथोत्तमा ॥ ५ ॥

ಎಲ್ಲ ಧರ್ಮಗಳಲ್ಲಿಯೂ ಅಹಿಂಸಾ ಧರ್ಮದಂತೆ, ಎಲ್ಲ ಕಾಮನಾದಲ್ಲಿಯೂ ಧನದಂತೆ, ಎಲ್ಲ ವಿದ್ಯೆಗಳಲ್ಲಿಯೂ (ಬ್ರಹ್ಮ)ಆತ್ಮವಿದ್ಯೆಯಂತೆ, ಎಲ್ಲ ಸ್ತ್ರೀಯರಲ್ಲಿಯೂ ಲಕ್ಷ್ಮೀದೇವಿಯಂತೆ, ಉತ್ತಮವಾದದ್ದು ಈ ಕ್ಷೇತ್ರವು. ೫

देवानां च यथा विष्णुः हरिभक्तो यथा शिवः ।
तथा सर्वेषु क्षेत्रेषु श्रेष्ठं शूर्पालयं विदुः ॥ ६ ॥

ಎಲ್ಲ ದೇವತೆಗಳೊಳಗೆ ವಿಷ್ಣುವು ಹೇಗೆ ಸರ್ವೋತ್ತಮನೋ, ಹರಿಭಕ್ತರಲ್ಲಿ ರುದ್ರದೇವರು ಹೇಗೆ ವೈಷ್ಣವೋತ್ತಮರೋ, ಹಾಗೆ ಎಲ್ಲ ಕ್ಷೇತ್ರಗಳಲ್ಲಿಯೂ ಶೂರ್ಪಾಲಯ ಕ್ಷೇತ್ರವು ಶ್ರೇಷ್ಠವೆಂದು ತಿಳಿಯಿರಿ. ೬

पापसंघौघनाशाय शूर्पाकारोग्निरिष्यते ।
तत्क्षेत्रे अष्ट तीर्थानि संति लोकहितानि च ॥ ७ ॥

ಪಾಪಗಳ ಸಮೂಹವೆಂಬ ಕಟ್ಟಿಗೆಗಳನ್ನು ಸುಟ್ಟು ಬೂದಿಮಾಡಲಿಕ್ಕೆ ಶೂರ್ಪಾಲಯವೆಂಬ ಅಗ್ನಿಯು ಇರುವುದು. ಆ ಅಗ್ನಿಸಮಾನವಾದ ಶೂರ್ಪಾಲಯ ಕ್ಷೇತ್ರದಲ್ಲಿ ಎಂಟು ತೀರ್ಥಗಳು ಜನರ ಹಿತಕ್ಕೋಸ್ಕರ ಇರುವವು. ೭

उत्तमोत्तमसंज्ञानि धर्मकार्याय यानि वै ।
प्रथमं कोटितीर्थं तु चक्रतीर्थं द्वितीयकम् ॥ ८ ॥

ನಿಶ್ಚಯವಾಗಿಯೂ ಧರ್ಮಕಾರ್ಯದ ಸಲುವಾಗಿ ಉತ್ತಮೋತ್ತಮವಾದ ಹೆಸರು ಉಳ್ಳವುಗಳು. ಅದರಲ್ಲಿ ಮೊದಲನೆಯದು ಕೋಟಿತೀರ್ಥವು, ಎರಡನೇಯದು ಚಕ್ರತೀರ್ಥವು. ೮

तृतीयं कंकतीर्थं तु चतुर्थोत्तुंगनामकम् ।
पंचमं मधुतीर्थं च षष्ठं चलकनामकम ॥ ९ ॥

ಹೀಗೆ ಎಂಟು ಪ್ರಕಾರವಾದ ತೀರ್ಥಗಳು. ಶೂರ್ಪಾಲಯ ಕ್ಷೇತ್ರದಲ್ಲಿ ಸುಸ್ಥಿತವಾಗಿದ್ದು ಜನರ ಪಾಪಗಳನ್ನು ನಾಶಮಾಡುವಂಥವುಗಳು. ೧೧

तस्मात् काशीश्वरेणैव जाह्नवी प्रेरिता सदा ।
प्रीत्या शूर्पालयं गत्वा शूर्पदानं चकार ह ॥ ११ ॥

ಆದ ಕಾರಣ ಕಾಶೀ ವಿಶ್ವೇಶ್ವರನಿಂದ ಪ್ರೇರಿತಳಾದ ಭಾಗೀರಥಿ ದೇವಿಯು, ಶೂರ್ಪಾಲಯಕ್ಕೆ ಹೋಗಿ ಮರದಬಾಗಿಣವನ್ನು ಕೊಟ್ಟಳು. ೧೧

तस्मात् शूर्पालयं नाम प्रसिद्धं भुवनत्रये ।

शौनक उवाच –

शूर्पदानं तु शूर्पाले गंगाया केन हेतुना ॥ १२ ॥

ಆದಕಾರಣ ತ್ರಿಲೋಕಗಳಲ್ಲಿಯೂ ಶೂರ್ಪಾಲಯವೆಂದು ಈ ಕ್ಷೇತ್ರವು ಪ್ರಸಿದ್ಧ ವಾಗಿರುವದು. ಶೌನಕ ಋಷಿಗಳು ಕೇಳುವರು. ಶೂರ್ಪಾಲಯದಲ್ಲಿ ಗಂಗಾದೇವಿಯೂ ಮರದಬಾಗಿಣವನ್ನು ಕೊಡಲಿಕ್ಕೆ ಏನು ಕಾರಣ ? ೧೨

कृतं क्षेत्रे ब्राह्मणाय गंगाया महिमां वद ।

सूत उवाच –

जाह्नव्यां जंतवः सर्वे त्यक्त्वा पापं स्वमंजसा ॥ १३ ॥

ಆ ಶೂರ್ಪಾಲಯ ಕ್ಷೇತ್ರದಲ್ಲಿ ಬ್ರಾಹ್ಮಣರಿಗೆ ಮರದ ಬಾಗಿಣ ದಾನ ಮಾಡಿದ ಗಂಗಾದೇವಿಯ ಮಹಿಮೆಯನ್ನು ಹೇಳಿರಿ.

**ಸೂತರು ಹೇಳುವರು.**

ಭಾಗೀರಥಿಯಲ್ಲಿ ಎಲ್ಲರೂ ಸ್ನಾನಮಾತ್ರದಿಂದ ಪಾಪ ಬಿಡುತ್ತಿದ್ದರು. ೧೩

विमुक्ता ह्यभयं तत्र जाह्नव्येवमचिंतयत् ।
सर्वे पापं त्रिधाराश्च मयि गच्छंति सर्वदा ॥ १४ ॥

ಹೇಳಿದಳು. ೧೫

गंगा उवाच –

पापिनोऽत्र समागत्य मयि मज्जंति सर्वदा ।
तेषां पापेन लिप्ताहं आगता भवदन्तिकम् ॥ १६ ॥

ಎಲ್ಲ ಪಾಪಿಗಳೂ ನನ್ನಲ್ಲಿ ಯಾವಾಗಲೂ ಬಂದು ಅವಗಾಹನ ಸ್ನಾನಮಾಡುವರು. ಅವರ ಪಾಪದಿಂದ ನಾನು ಲಿಪ್ತಳಾಗಿ, ನಿಮ್ಮ ಹತ್ತಿರ ಬಂದಿರುವೆನು. ೧೬

शुद्धा भवामि यत्राहं विश्वनाथ वदस्व तत् ।
इत्युक्तो विश्वनाथस्तु गंगा प्राह विचिंत्य च ॥ १७ ॥

ನಾನು ಎಲ್ಲಿ ಹೋದರೆ ಶುದ್ಧಳಾಗುವೆನು. ಹೇಳು. ಎಂದು ಕೇಳಲಾಗಿ ರುದ್ರದೇವರು ವಿಚಾರಮಾಡಿ ಗಂಗಾದೇವಿಗೆ ಹೀಗೆ ಹೇಳಿದರು. ೧೭

विश्वेश्वर उवाच –

अस्ति शूर्पालयं नाम कलौ क्षेत्रं ह्यनुत्तमम् ।
तत्र गच्छ महाभागे सर्वान् कामान् अवाप्स्यसि ॥ १८ ॥

ವಿಶ್ವೇಶ್ವರನು ಅಂದನು. ಕಲಿಯುಗದಲ್ಲಿ ಬಹಳ ಉತ್ತಮವಾದ ಕ್ಷೇತ್ರವೆಂದರೆ ಶೂರ್ಪಾಲಯವೆಂಬ ಕ್ಷೇತ್ರವು. ಪರಮ ಭಾಗ್ಯವಂತಳಾಗಿ ಅಲ್ಲಿಗೆ ಹೋಗು. ಎಲ್ಲ ಇಷ್ಟಾರ್ಥಗಳನ್ನು ಪಡೆಯುವಿ. ೧೮

एवमुक्ता तदा गंगा त्वां विना नाहमुत्सहे ।
गंतुं शूर्पालयं क्षेत्रं इति विश्वेशमब्रवीत् ॥ १९ ॥

ಹೀಗೆ ಹೇಳಿಸಿಕೊಂಡ ಗಂಗೆಯು ನಿನ್ನನ್ನು ಬಿಟ್ಟು, ನಾನು ಶೂರ್ಪಾಲಯಕ್ಷೇತ್ರಕ್ಕೆ ಹೋಗಲು ನನ್ನ ಮನಸ್ಸು ಒಪ್ಪದು, ಎಂದು ವಿಶ್ವೇಶ್ವರನಿಗೆ ಹೇಳಿದಳು. ೧೯

ಆಗ ಮಹಾದೇವರು ಗಂಗಾದೇವಿಗೆ, ಹೇಳಿದರು.

**ವಿಶ್ವೇಶ್ವರ ಉವಾಚ :—**

ಪೂರ್ವದಲ್ಲಿ ಔದುಂಬರನೆಂಬ ಋಷಿಯು ನನ್ನ ದರ್ಶನದ ಅಭಿಲಾಶೆಯಿಂದ ಶೂರ್ಪಾಲಯ ಮಹಾಕ್ಷೇತ್ರಕ್ಕೆ ಬಂದನು. ೨೦

**ऋषिरुग्रं तपस्तेपे तत्र कृष्णाजले शुभे ।**
**ग्रीष्मे पंचाग्निमध्यस्थो वर्षाभ्यां स्थंडिले शयः ॥ २१ ॥**

ಮಂಗಳಕರವಾದ ಕೃಷ್ಣಾಪ್ರವಾಹದಲ್ಲಿ ನಿಂತು ಉಗ್ರವಾದ ತಪಸ್ಸು ಮಾಡಿದನು. ಗ್ರೀಷ್ಮ ಋತುವಿನಲ್ಲಿ ಪಂಚಾಗ್ನಿಯಲ್ಲಿ ನಿಂತು ಮಳೆಗಾಲದಲ್ಲಿ ಭೂಮಿಯ ಮೇಲೆ ಮಲಗಿ ಚಳಿಗಾಲದಲ್ಲಿ ನೀರಿನಲ್ಲಿ ನಿಂತು, ೨೧

**हिमे च जलमध्यस्थो ऋषिणैवं तपः कृतम् ।**
**तस्मै प्रसन्नः तपसे प्रत्यक्षो रूपकोटिभिः ॥ २२ ॥**

ಛಳಿಗಾಲದಲ್ಲಿ ನೀರೊಳಗೆ ನಿಂತು, ತಪಃಸ್ಸು ಮಾಡುತ್ತಿದ್ದನು. ಶೂರ್ಪಾಲಯವು ಮಹಾಕ್ಷೇತ್ರವೆಂದು ತಿಳಿದು ಆ ಋಷಿಯ ತಪಸ್ಸಿಗೆ ಪ್ರಸನ್ನನಾಗಿ ನಾನು ಕೋಟಿರೂಪಗಳಿಂದ ಪ್ರತ್ಯಕ್ಷ ದರ್ಶನ ಕೊಟ್ಟೆನು. ೨೨

**अभवं मां तदा द्रष्टुं अशक्तो प्रार्थितोंजसा ।**
**सुतश्च विविधैस्तोत्रैः मुनिना भावितात्मना ॥ २३ ॥**

ಆಗ ನನ್ನ ನೋಡಲು ಅಸಮರ್ಥನಾಗಿ ಭಕ್ತಿ ಪರವಶನಾಗಿ ಆ ಋಷಿಗಳು ಎಷ್ಟೋರೀತಿಯಿಂದ ಸ್ತೋತ್ರಮಾಡಿದರು. ೨೩

**भक्तिभावेन संयुक्तो मम ध्यानरतेन च ।**

**औदुंबर उवाच –**

**कोटीश्वराय शशिभूषणभूषिताय**
**प्रेमप्रवृद्धगिरिजामितभास्कराय ।**

दक्षाध्वरक्षयकृतेऽखिललोकपात्रे ।
क्रूरासुरत्रिपुरसंहरणाय सर्व-
लोकेश्वराय महिताय नमः शिवाय ॥ २५ ॥

ವಿಶ್ವೇಶ್ವರಾ, ಸಂಸಾರಭಯಪರಿಹಾರಕನೇ, ದಕ್ಷಪ್ರಜಾಪತಿಯ ಯಜ್ಞಕ್ಷಯ ಮಾಡಿ ಎಲ್ಲರಿಂದ ಪೂಜಿತನಾದ ಲೋಕೇಶ್ವರನಾದ, ಕ್ರೂರನಾದ, ತ್ರಿಪುರಾಸುರ ಸಂಹಾರಕನಾದ ಪರಮಪೂಜ್ಯನಾದ ಮಹಾರುದ್ರನೇ! ನಿನಗೆ ಅನಂತಾನಂತ ನಮಸ್ಕಾರಗಳು. ೨೫

कोटिरूपाणि ते स्वामिन् दुर्दर्शानि महात्मनः ।
शक्ष्ये द्रष्टुं कथं तस्मादेकरूपो भव प्रभो ॥ २६ ॥

ಪರಮ ಪೂಜ್ಯರಾದ ರುದ್ರದೇವರೇ, ನೋಡಲು ಅಸಾಧ್ಯವಾದ ನಿಮ್ಮ ಕೋಟಿ ರೂಪಗಳನ್ನು ನೋಡಲು ಹೇಗೆ ಶಕ್ಯವಾದೀತು. ಅದ ಕಾರಣ ಒಂದೇ ರೂಪವುಳ್ಳವನಾಗು. ೨೬

मुनिनेवं प्रार्थितश्च देवी प्रीत्या ततस्त्वहम् ।
प्राप्यैकरूपतां कृष्णा जलमध्ये वसाम्यहम् ॥ २७ ॥

ಹೇ ಭಾಗೀರಥೀ ದೇವೀ, ನಾನು ಆ ಔದುಂಬರ ಋಷಿಗಳಿಂದ ಪ್ರಾರ್ಥಿತನಾಗಿ ಒಂದೇ ರೂಪದಿಂದ ಕೃಷ್ಣಾನದಿಯ ಮಧ್ಯದಲ್ಲಿ ವಾಸಿಸಿರುವೆನು. ೨೭

तत्र गत्वा प्रतिदिनं दद्यात्स्वं शूर्पवायनम् ।
तेन ते पापिनां पापलेपो नैव भविष्यति ॥ २८ ॥

ಆ ಶೂರ್ಪಾಲಯಕ್ಕೆ ನೀನು ಹೋಗಿ ಪ್ರತಿದಿನ ಮರದಬಾಗಿಣ ಕೊಡಬೇಕು. ಆದರ ಮಹಿಮೆಯಿಂದ ನಿನಗೆ ಪಾಪಿಗಳ ಪಾಪಗಳು ಲೇಪವಾಗುವದಿಲ್ಲ. ೨೮

स्नातुमायाति नित्यं तु तीर्थमेनं ह्यनुत्तमम् ॥ ३० ॥

ರಾಮತೀರ್ಥವಾಸಿಯೂ, ರಾಮಶ್ವೇರನ ಪೂಜಾ ಪರಾಯಣನೂ ಆದ ಆ ಭ್ರಾಹ್ಮಣನು ದಿನಾಲೂ ಸ್ನಾನ ಮಾಡಲಿಕ್ಕೆ ಈ ಪವಿತ್ರವಾದ ಈ ಶೂರ್ಪಾಲಯ ತೀರ್ಥಕ್ಕೆ ಬರುತ್ತಿದ್ದನು. ೩೦

दृष्ट्वा गंगा ददौ तस्मै शूर्पदानमनुत्तमम् ।
तपस्विने महाभागा सर्वपापविमुक्तये ॥ ३१ ॥

ಆ ಗಂಗಾದೇವಿಯು ತಪಸ್ವಿಯಾದ ಬ್ರಾಹ್ಮಣನನ್ನು ನೋಡಿ. ಎಲ್ಲ ಪಾಪ ಮುಕ್ತಿಯಾಗುವುದರಕ್ಕೋಸ್ಕರ ಆ ಬ್ರಾಹ್ಮಣನಿಗೆ ಅತಿಶಯ ಉತ್ತಮವಾದ ಮುತ್ತು ರತ್ನಗಳಿಂದ ತುಂಬಿದ ಮರದ ಭಾಗಿಣವನ್ನು ಕೊಟ್ಟಳು. ೩೧

तेन तत्ख्यातिमगमत्क्षेत्रं शूर्पालयं त्विति ।
प्रसिद्धं सर्वलोकेषु मोक्षादिपुरुषार्थदम् ॥ ३२ ॥

ಅವತ್ತಿನಿಂದ ಎಲ್ಲ ಲೋಕಗಳಲ್ಲಿ ಮೋಕ್ಷಾದಿಪುರುಷಾರ್ಥ ಪ್ರದವೆಂದು ಶೂರ್ಪಾಲಯ ಕ್ಷೇತ್ರವು ಪ್ರಸಿದ್ಧಿ ಪಡೆಯಿತು. ೩೨

कदाचित्पृष्टवान् गंगां स द्विजः कौतुकान्वितः ।
का त्वं कल्याणि कस्यासि दयिता कुत्र तिष्ठसि ॥ ३३ ॥

ಒಂದಾನೊಂದು ದಿವಸ ಉತ್ಸಾಹ ಶೀಲನಾದ ಆ ಬ್ರಾಹ್ಮಣನು ಹೇ ಮಂಗಳಕರಳಾದ ಸೌಭಾಗ್ಯವತಿಯಾದ ನೀನು ಯಾರು ? ಎಲ್ಲಿ ವಾಸಿಸುವೆ ಎಂದು ಕೇಳಿದನು. ೩೩

दृष्टा तेनैवमाचष्ट स्वरूपं कृत्स्नशस्तु या ।
कस्मैचिन्नैतदाख्येयं गोप्यत्वाद् द्विजसत्तम ॥ ३४ ॥

ಆ ಬ್ರಾಹ್ಮಣನಿಂದ ಕೇಳಿಸಿಕೊಂಡವಳಾಗಿ ಗಂಗಾ ದೇವಿಯು ಸಂಪೂರ್ಣವಾಗಿ ತನ್ನ

ಇದನ್ನು ತನ್ನ ಮಕ್ಕಳಿಗೆ ೩೫

भार्यायै च शशंसाय स्त्रीपुत्रस्नेहयंत्रितः।
प्रकटोऽभूत् सर्ववृत्तांतः सकलेषु जनेष्वपि ॥ ३६ ॥

ಹಾಗೂ ಹೆಂಡತಿ ಮಕ್ಕಳ ಮೇಲಿನ ಸ್ನೇಹ ಪರವಶನಾಗಿ, ಹೆಂಡತಿಗೂ ಹೇಳಿದನು. ಅದರಂತೆ ಎಲ್ಲ ಜನರ ಮುಂದೆ ಈ ವೃತ್ತಾಂತವು ಪ್ರಕಟವಾಯಿತು. ೩೬

ततः सर्वे समायाता गंगां द्रष्टुं सकौतुकाः।
समागतान् जनान् दृष्ट्वा नितांतं कुपिता तदा ॥ ३७ ॥

ಆಗ ಎಲ್ಲ ಜನರೂ ಬಹಳ ಉತ್ಸಾಹದಿಂದ ಗಂಗಾ ದೇವಿಯನ್ನು ನೋಡಲಿಕ್ಕೆ ಬಂದರು. ಅವರನ್ನು ನೋಡಿ ಆ ಗಂಗಾದೇವಿಯು ಬಹಳ ಸಿಟ್ಟಿಗೆದ್ದಳು. ೩೭

गंगा तं ब्राह्मणं पूर्वं उक्त शापं न्ययोजयत्।
स्वयं चादृश्यतां प्राप स द्विजः शापतः क्षणात् ॥ ३८ ॥

ಮೊದಲೇ ಹೇಳಿದಂತೆ ಗಂಗಾದೇವಿಯು ಆ ಬ್ರಾಹ್ಮಣನಿಗೆ ಬ್ರಹ್ಮರಾಕ್ಷಸನಾಗೆಂದು ಶಾಪ ಕೊಟ್ಟಳು. ತಾನೂ ಅದೃಶ್ಯಳಾದಳು. ಆ ಬ್ರಾಹ್ಮಣನು ಕೂಡಲೇ ಆ ಶಾಪದಿಂದ. ೩೮

प्राप्तश्च राक्षसीं योनीं यज्ञविघ्नं चकार ह।
मुनयः पीडितास्ते तु देवराजमुपस्थिताः ॥ ३९ ॥

ಬ್ರಹ್ಮ ರಾಕ್ಷಸನಾಗಿ ಯಜ್ಞಕಾರ್ಯಗಳಿಗೆ ವಿಘ್ನ ಮಾಡ ಹತ್ತಿದನು. ಋಷಿಗಳಿಗೆ ಬಹಳ ಉಪದ್ರವವಾಯಿತು. ಆಗ ಅವರು ಇಂದ್ರ ದೇವರ ಸಮೀಪ ಬಂದರು. ೩೯

अत्रिर्वसिष्ठो मांडव्यो गौतमो नारदस्तथा।
ऋचीको वामदेवश्च गालवो गर्ग एव च ॥ ४० ॥

विश्वामित्रो मृकंडुश्च मार्कंडेय पराशरः।
एते इंद्रं अवाप्योचुः हत्वा तं ब्रह्मराक्षसम् ॥ ४१ ॥

ದೇವರಾಜನಾದ ಇಂದ್ರ ದೇವರೇ ನಮ್ಮನ್ನೂ ಯಜ್ಞವನ್ನೂ ರಕ್ಷಿಸಬೇಕು. ನೀವು ಪರಮ ಪೂಜ್ಯರು. ಹೀಗೆ ಋಷಿಗಳು ಹೇಳಲಾಗಿ ಇಂದ್ರ ದೇವರು ಋಷಿ ಶ್ರೇಷ್ಠರಿಗೆ ಹೀಗೆ ಹೇಳಿದರು. ೪೨

न मयेदं शक्यमिति ततो ब्रह्माणमाययुः ।
साधँ शक्रेण ते सर्वे दृष्ट्वा ब्रह्माणमूचिरे ॥ ४३ ॥

ಈ ಬ್ರಹ್ಮ ರಾಕ್ಷಸನನ್ನು ಸಂಹರಿಸುವುದು ನನ್ನಿಂದ ಸಾಧ್ಯವಾಗಲಾರದು. ಆಗ ಎಲ್ಲ ಋಷಿಗಳು ಇಂದ್ರ ದೇವರನ್ನು ಕರೆದು ಕೊಂಡು ಬ್ರಹ್ಮ ದೇವರ ಹತ್ತಿರ ಹೋದರು. ೪೩

गंगाशप्तो द्विजो ब्रह्मन् रक्षो भूत्वा प्रबाधते ।
मखं नाशायतेऽस्माकं तं हत्वा ब्रह्मराक्षसम् ॥ ४४ ॥

ಗಂಗಾದೇವಿಯಿಂದ ಶಾಪಗ್ರಸ್ತನಾದ ಬ್ರಾಹ್ಮಣನು ಬ್ರಹ್ಮರಾಕ್ಷಸನಾಗಿ ನಮಗೆ ಬಹಳ ಉಪದ್ರವ ಕೊಡುತ್ತಿದ್ದಾನೆ. ಹಾಗೂ ಯಜ್ಞವನ್ನು ಹಾಳು ಮಾಡುತ್ತಿರುವನು. ಆದ ಕಾರಣ ಬ್ರಹ್ಮ ರಾಕ್ಷಸನನ್ನು ಸಂಹಾರ ಮಾಡಿ ನಮ್ಮನ್ನು ರಕ್ಷಿಸಿರಿ. ೪೪

पालयास्मान् मखं ब्रह्मन् सर्वसृष्टासि भो विभो ।
एवमुक्तस्तदा प्राह ब्रह्मा लोकपितामहः ॥ ४५ ॥

ಸೃಷ್ಟಿಕರ್ತರಾದ ಚತುರ್ಮುಖ ಬ್ರಹ್ಮ ದೇವರೇ, ನಮ್ಮ ಯಜ್ಞವನ್ನೂ ರಕ್ಷಣ ಮಾಡಿರಿ ಹೀಗೆ ಹೇಳಲಾಗಿ ಬ್ರಹ್ಮ ದೇವರು (ಲೋಕಪಿತಾಮಹರಾದ) ಆಗ ಹೇಳಿದರು. ೪೫

ब्रह्मोवाच –

जाह्नवीयं विष्णुपदी विष्णोः प्रियतमा सदा ।
तच्छापमोक्षश्च कथं वद शक्यो मयाऽनघ ॥ ४६ ॥

ಬ್ರಹ್ಮ ದೇವರು ಹೇಳಿದರು. ಭಗವಂತನ ಪಾದದಿಂದ ಹುಟ್ಟಿದ ಈ ಜಾಹ್ನವಿಯು

उक्ताः वयं तस्य सर्वे सरुद्राः सेंद्रकास्तथा ।
काले काले स एवास्मद्रक्षणे दीक्षितः प्रभुः ॥ ४८ ॥

ರುದ್ರೇಂದ್ರಾದಿದೇವತಾಗಣಗಳಿಂದ ಸಹಿತರಾದ ನಾವೆಲ್ಲರೂ ಆವನ ಭಕ್ತರು. ಕಾಲಕಾಲದಲ್ಲಿ ಆ ಸರ್ವೋತ್ತಮನಾದ ವಿಷ್ಣುವು ನಮ್ಮ ರಕ್ಷಣದಲ್ಲಿ ಕಂಕಣ ಬದ್ಧನಾಗಿರುವನು. ೪೮

एवमुक्त्वा मुनिगणैः सुरसंघैश्च संवृतः ।
विरिंचिविष्णुमभ्येत्य प्रणनामानतो भुवि ॥ ४९ ॥

ಹೀಗೆ ಹೇಳಿ, ಋಷಿಗಳಿಂದಲೂ, ದೇವಗಣಗಳಿಂದಲೂ ಕೂಡಿಕೊಂಡು ಬ್ರಹ್ಮ ದೇವರು ವಿಷ್ಣುವಿನ ಹತ್ತಿರ ಬಂದು ಸಾಷ್ಟಾಂಗ ನಮಸ್ಕಾರ ಮಾಡಿದರು. ೪೯

व्याचरत् सर्ववृत्तांतं विष्णवे प्रभविष्णवे ।
निवेदितो वेधसैवं भगवान् प्राह सस्मितः ॥ ५० ॥

ಸರ್ವೋತ್ತಮನಾದ ಶ್ರೀ ವಿಷ್ಣುವಿಗೆ ಎಲ್ಲ ವೃತ್ತಾಂತವನ್ನು ಸವಿಸ್ತಾರವಾಗಿ ಹೇಳಿದರು. ಬ್ರಹ್ಮದೇವರ ಮಾತು ಕೇಳಿ ನಾರಾಯಣನು ಮಂದಹಾಸದಿಂದ ಉತ್ತರ ಕೊಟ್ಟನು. ೫೦

मेघगंभीरया वाचा हर्षयन् सर्वदेवताः ।
दयालुः सर्वलोकानां उपकाराय वै प्रभुः ॥ ५१ ॥

ಸರ್ವರಿಗೂ ಉಪಕಾರ ಮಾಡುವ ದಯಾಘನನಾದ ನಾರಾಯಣನು ಎಲ್ಲ ದೇವತೆಗಳಿಗೂ ಸಂತೋಷವಾಗುವಂತೆ ಮೇಘಗಳಂತೆ ಗಂಭೀರವಾದ ಶಬ್ದಗಳಿಂದ ಹೇಳಿದನು. ೫೧

श्रीभगवानुवाच –

कार्यो वधो मया तस्य मुनीनां रक्षणं तथा ।

ब्रह्मन्न तत्स्वमेवाप्य क्षेत्रं नामौरकुत्सकम् ।
कृष्णातीरगतं तत्र यज्ञं कुरु महामते ॥ ५३ ॥

ಬುದ್ಧಿವಂತನಾದ ಬ್ರಹ್ಮನೇ, ನೀನು ಸ್ವತಃ (ಔರಕುತ್ಸ) ಅವರ ಖೋಡ ಎಂಬ ಕ್ಷೇತ್ರವು ಕೃಷ್ಣಾ ತಟಾಕದಲ್ಲಿ (ಕೃಷ್ಣವೇಣೀ) ಇರುವದು ಅಲ್ಲಿ ನೀನು ಯಜ್ಞ ಆರಂಭಿಸು. ೫೪

तत्र भार्गवरूपोहं आगमिष्ये मखं प्रति ।
तदा भूयात्तस्य मोक्षो ब्रह्मराक्षसजन्मनः ॥ ५४ ॥

ಅವರಖೋಡಕ್ಕೆ ಪರಶುರಾಮರೂಪದಿಂದ ಯಜ್ಞಕ್ಕೆ ನಾನು ಬರುವೆನು. ಆಗ ಆ ಬ್ರಾಹ್ಮಣನಿಗೆ ಬ್ರಹ್ಮರಾಕ್ಷಸಜನ್ಮದಿಂದ ಬಿಡುಗಡೆಯಾಗುವದು. ೫೪

एवमुक्तस्ततो ब्रह्मा कृष्णातीरं ययौ कले ।
क्षेत्रं ददर्शोरुकुत्सं पुण्यं भुवि मनोहरम् ॥ ५५ ॥

ಹೀಗೆ ವಿಷ್ಣುವಿನಿಂದ ಆಜ್ಞೆ ಪಡೆದು ಕೊಂಡು ಆಮೇಲೆ ಬ್ರಹ್ಮದೇವರು ಕಲಿಯುಗದಲ್ಲಿ ಕೃಷ್ಣವೇಣೀ ತಟಾಕಕ್ಕೆ ಬಂದರು. ಅಲ್ಲಿ ಅವರಖೋಡವೆಂಬ ಪುಣ್ಯಕರವಾದ ಮನೋಹರವಾದ ಕ್ಷೇತ್ರವನ್ನು ಭೂಮಂಡಲದಲ್ಲಿ ನೋಡಿದರು. ೫೫

ततान यज्ञवाटं च तत्र ब्रह्मासुरैः सह ।
आहूता ऋषयः सर्वे ब्रह्मणा पद्मयोनिना ॥ ५६ ॥

ಕಮಲಾಸನರಾದ ಬ್ರಹ್ಮದೇವರು ಋಷಿಗಳನ್ನು ದೇವತೆಗಳನ್ನೂ ಕರೆದುಕೊಂಡು ಬಂದು ಅವರಖೋಡದಲ್ಲಿ ಯಜ್ಞಮಂಟಪವನ್ನು ಸಿದ್ಧಮಾಡಿ ಯಜ್ಞ ಆರಂಭಿಸಿದರು. ೫೬

आजग्मुश्च महाभागाः तत्र विद्याविशारदाः ।
तत्र श्रीभार्गवो रामो मखं द्रष्टुं जगाम ह ॥ ५७ ॥

ವೇದ ವಿದ್ಯಾ ಪಾರಂಗತರಾದ ಭಾಗ್ಯವಂತರಾದವರೆಲ್ಲರೂ ಆ ಯಜ್ಞಕ್ಕೆ ಬಂದರು.

दिव्यदेहधरः सद्यो ननाम शिरसा भुवि।
तुष्टाव भार्गवं देवं कृतांजलिपुटो द्विजः ॥ ५९ ॥

ಆ ಬ್ರಾಹ್ಮಣನು ದಿವ್ಯ ದೇಹಧಾರಿಯಾಗಿ ಆ ಪರಶುರಾಮದೇವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ಆ ಬ್ರಾಹ್ಮಣನು ಎರಡೂ ಕೈ ಮುಗಿದು ಕೊಂಡು ಆ ಪರಶುರಾಮದೇವರನ್ನು ಸ್ತೋತ್ರ ಮಾಡಿದನು. ೫೯

विप्र उवाच –

नमो नमो भार्गवराम तुभ्यं
जगत्प्रसूतिस्थितिनाशहेतवे।
क्षत्राधमान् संहतवान् त्वमेकः
कृते कृते धर्मसमुद्यमानः ॥ ६० ॥

ಬ್ರಾಹ್ಮಣನು ಅಂದನು. ಜಗತ್ತಿನ ಸೃಷ್ಟಿಸ್ಥಿತಿಲಯ ಕಾರಣ ಪುರುಷನೇ, ಪರಶುರಾಮನೇ, ನಿನಗೆ ಅನಂತಾನಂತ ನಮಸ್ಕಾರಗಳು. ಅಧಮಾಧಮರಾದ ಕ್ಷತ್ರಿಯರನ್ನು ಸಂಹಾರ ಮಾಡಿ ಧರ್ಮ ರಕ್ಷಣ ಮಾಡತಕ್ಕವನು ನೀನೊಬ್ಬನೇ. ೬೦

यः कार्तवीर्यं व्यजयत् –
सहस्रबाहुं महावीर्यमुदारकर्मा।
त्रिःसप्तकृत्वः कुपितो धरां यो
निःक्षत्रितां तामकरोद्धि सिद्धम् ॥ ६१ ॥

ಯಾರು ಮಹಾಪರಾಕ್ರಮಿಯಾದ ಸಹಸ್ರಬಾಹು ಉಳ್ಳ ಕಾರ್ತವೀರ್ಯಾರ್ಜುನನನ್ನು ನಿಗ್ರಹ ಮಾಡಿ ಸಿಟ್ಟಿನಿಂದ ಇಪ್ಪತ್ತೊಂದು ಸಲ ಬೆನ್ನು ಹತ್ತಿ ನಿಃಕ್ಷತ್ರಿಯ ಪೃಥ್ವೀ ಮಾಡಿ ಸಿದ್ಧಿಯನ್ನು ಪಡೆದನೋ ಅಂಥ ಪರಶುರಾಮದೇವರಿಗೆ ನಮಸ್ಕಾರವು. ೬೧

दीप्तां परश्वधमयीं वरहेतिमाजौ
बिभ्रन्नसृङ्मयमपूर्वमुकुंडमुत्तमम्।

मोचितोहं महादु:खात् स्वामिन् वरकृपालुना।
अस्मिन् क्षेत्रे महाबाहो सदा वासं कुरुप्रभो ॥ ६३ ॥

ಹೀಗೆ ಸ್ತೋತ್ರ ಮಾಡಿ ಪರಮ ಪೂಜ್ಯರಾದ ಪರಶುರಾಮ ದೇವರೇ, ಅತ್ಯಂತ ಕೃಪಾಳುಗಳಾಗಿ ಮಹದ್ದುಃಖದಿಂದ ನನ್ನನ್ನು ಬಿಡುಗಡೆ ಮಾಡಿದಿರಿ. ಪರಮ ಪೂಜ್ಯರೇ ನೀವು ಈ ಶೂರಪಾಲಯ ಕ್ಷೇತ್ರದಲ್ಲಿ ವಾಸಮಾಡುತ್ತಿರಬೇಕು. ೬೩

क्षेत्रे शूर्पालये देव सर्वाभीष्टान् प्रपूरयन्।
अयमेव वरो मेऽस्तु श्रेष्ठो वंद्य: सुरादिभि: ॥ ६४ ॥

ದೇವಾನು ದೇವತೆಗಳಿಂದ ಪೂಜಿತರಾದ ಪರಮ ಸರ್ವೋತ್ತಮರಾದ ನೀವು ಎಲ್ಲರ ಅಭೀಷ್ಟವನ್ನು ಪೂರ್ಣಮಾಡುತ್ತ ಈ ಶೂರಪಾಲಯ ಕ್ಷೇತ್ರದಲ್ಲಿಯೇ ಇರಬೇಕು. ಈ ಶ್ರೇಷ್ಠವಾದ ವರವನ್ನು ನನಗೆ ಕೊಡಿರಿ. ೬೪

एवं स्तुत: सविप्रेण भगवान् करुणाकर:।
तथास्त्वित्थं ब्रवीच्चैनं कृष्णातीरमथा ययौ ॥ ६५ ॥

ಹೀಗೆ ಭಕ್ತ ವತ್ಸಲನಾದ ಕರುಣಾ ಪೂರ್ಣನಾದ ಭಗವಾನ್ ನಾರಾಯಣನು ಬ್ರಾಹ್ಮಣನಿಂದ ಸ್ತುತ್ಯನಾಗಿ, ಹಾಗೇ ಆಗಲಿ ಎಂದು ಹೇಳಿ ಕೃಷ್ಣಾ ತೀರದ ಗುಂಟ ಬಂದನು. ೬೫

यत्र लिंगत्रयेणास्ते महादेवश्चतुर्युगे।
कृष्णापात्रस्थ एवासौ भागीरथ्यादिसेवित: ॥ ६६ ॥

ಭಾಗೀರಥೀ ಮುಂತಾದ ತೀರ್ಥಾಭಿಮಾನಿ ದೇವತಾಸ್ತ್ರೀಯರಿಂದ ಸೇವ್ಯರಾದ ರುದ್ರ ದೇವರು ನಾಲ್ಕೂ ಯುಗಗಳಲ್ಲಿ ಯಾವ ಸ್ಥಳದಲ್ಲಿ ಲಿಂಗತ್ರಯಗಳಿಂದ ಕೃಷ್ಣಾತಟಾಕದಲ್ಲಿ ಇರುವರೋ, ೬೬

तत्रैव कुंडतीर्थे तु भानुवारे ज्वरापहे।
शर्वस्य सन्निधिं ज्ञात्वा य: स्नानं कुरुते जन: ॥ ६७ ॥

ಜ್ವರಪರಿಹಾರಕವಾದ ಆ ಕುಂಡ ತೀರ್ಥದಲ್ಲಿ ಭಾನುವಾರ ದಿವಸ, ಅಲ್ಲಿ ರುದ್ರ

ದೇವರು ಇರುವರು. ಕೃಷ್ಣವೇಣೀ ತಟಾಕದ ದಕ್ಷಿಣ ದಂಡೆಯಲ್ಲಿ ನಿಂತು ಕೃಷ್ಣವೇಣೀ ನದಿಯನ್ನು ನೋಡಲಾಗಿ ಪರಮಾನಂದದಿಂದ ಆನಂದ ಭಾಷ್ಪವನ್ನು ಉದುರಿಸಿದರು. ೬೮

तद्बाष्पजलबिंदुभ्योऽश्वत्थवृक्षः समुद्गतः ।
विचित्रपत्रस्कंधैश्च युक्त आश्चर्यकारकः ॥ ६९ ॥

ಆನಂದ ಭಾಷ್ಪಗಳ ಹನಿಯಿಂದ ಚಿತ್ರ ವಿಚಿತ್ರವಾದ ಎಲೆಗಳೂ ಟೊಂಗಿಗಳೂ ಉಳ್ಳ ಬಹಳ ಆಶ್ಚರ್ಯ ಕಾರಕವಾದ ಒಂದು ಅಶ್ವತ್ಥ ವೃಕ್ಷವು ಹುಟ್ಟಿತು. ೬೯

सेवयाऽश्वत्थवृक्षस्य नमस्कारप्रदक्षिणैः ।
धर्मार्थकाममोक्षाणां फलं विंदंति मानवाः ॥ ७० ॥

ಆ ಅಶ್ವತ್ಥ ವೃಕ್ಷದ ಪ್ರದಕ್ಷಿಣ ನಮಸ್ಕಾರದ ಸೇವೆಯಿಂದ ಮನುಷ್ಯರು ಧರ್ಮ, ಅರ್ಥ, ಕಾಮ, ಮೋಕ್ಷಾದಿಫಲಗಳನ್ನು ಪಡೆಯುವರು. ೭೦

मंदवारादिनियमो यत्र नास्ति द्विजोत्तमाः ।
न च निर्माल्यपुष्पाद्यैः पूजा कार्या कदाचन ॥ ७१ ॥

ಹೇ ಬ್ರಾಹ್ಮಣೋತ್ತಮರೇ ಅಲ್ಲಿ ಮಂದವಾರಾದಿ ನಿಯಮಗಳೂ ಇಲ್ಲ. ಯಾವ ಕಾಲಕ್ಕೂ ಇಲ್ಲ. ಯಾವ ಕಾಲಕ್ಕೂ ನಿರ್ಮಾಲ್ಯ ಪುಷ್ಪಾದಿಗಳಿಂದ ಪೂಜಾ ಕಾರ್ಯ ನಡೆಯುವುದೂ ಇಲ್ಲ. ೭೧

प्रतिमा भार्गवस्यायं अश्वत्थः सुरपूजितः ।
कोटितीर्थे नरः स्नात्वा दृष्ट्वा श्रीभार्गवं तथा ॥ ७२ ॥
अश्वत्थरूपिणं श्रीशं कृतकृत्यो न संशयः ।
महेश्वरोऽपि तत्र श्रीराममाराधयन् सदा ॥ ७३ ॥

ದೇವತೆಗಳಿಂದ ಪರಮ ಪೂಜಿತವಾದ ಈ ಅಶ್ವತ್ಥ ವೃಕ್ಷದ ಶ್ರೀ ಪರಶುರಾಮದೇವ ಸಾಕ್ಷಾತ್ ಪ್ರತಿಮೆಯು ಕೋಟಿತೀರ್ಥದಲ್ಲಿ ಸ್ನಾನ ಮಾಡಿ ಯಾವ ಮನುಷ್ಯನು ಶ್ರೀ ಪರಶುರಾಮದೇವರನ್ನು ನೋಡಿ ಅಶ್ವತ್ಥರೂಪಿ ಶ್ರೀಶನಾದ ನಾರಾಯಣನ್ನು

ಕೋಟಿರೂಪರಾದ ರುದ್ರದೇವರು, ಈಗ ಬೇರೆ ರೂಪದಿಂದ ಇಲ್ಲಿ ಯಾವಾಗಲೂ ಸನ್ನಿಹಿತರಾಗಿರುವರು. ಕಲಿಯುಗದಲ್ಲಿ ಶೂರ್ಪಾಲಯ ಕ್ಷೇತ್ರದಲ್ಲಿ ಶ್ರೀ ಕೃಷ್ಣವೇಣೀ ತಟಾಕದಲ್ಲಿ ಅಶ್ವತ್ಥವೃಕ್ಷದಲ್ಲಿ ಪರಶುರಾಮದೇವರು ಶ್ರೀ ಲಕ್ಷ್ಮೀ ನರಸಿಂಹರೂಪದಿಂದ ಅಭಿವ್ಯಕ್ತರಾಗಿ ಪೂಜಿತರಾಗಿರುತ್ತಾರೆ. ೭೪

कृष्णामध्यस्थकोटीशो शंकरो भक्तवत्सलः ।
प्रार्थितो मुनिभिर्देवो कृष्णातीरे बहिस्थितः ॥ ೭೫ ॥

ಕೃಷ್ಣವೇಣೀ ನದಿಯ ಮಧ್ಯದಲ್ಲಿ ಇರುವ ಕೋಟೀಶ್ವರನಾದ ಭಕ್ತವತ್ಸಲನು ಋಷಿಗಳಿಂದ ಪ್ರಾರ್ಥಿತನಾಗಿ ಕೃಷ್ಣವೇಣೀ ತೀರದ ಹೊರಗೆ ಬಂದು ನಿಂತನು. ೭೫

लक्ष्मीनृसिंहपूजार्थं सदा सन्निहितो हरः ।
बलेश्वरेति विख्यातो भक्तानां वरदायकः ॥ ೭೬ ॥

ಶ್ರೀ ಲಕ್ಷ್ಮೀನರಸಿಂಹದೇವರ ಪೂಜೆಯಗೋಸ್ಕರ ರುದ್ರದೇವರ ಸದಾ ಸನ್ನಿಹಿತ ರಾಗಿ ಬೈಲೇಶ್ವರ ಎಂಬ ಹೆಸರಿನಿಂದ ಭಕ್ತರಿಗೆ ವರಪ್ರದರಾಗಿರುವರು. ೭೬

शीतवाता तपसहो हेरंबीति निषेवितः ।
समीपे श्रीनृसिंहस्य चास्ते तद्ध्यानतत्परः ॥ ೭೭ ॥

ಗಾಳಿ, ಬಿಸಿಲು ಸಹಿಸುತ್ತ ಗಣನಾಯಕನಿಂದ ಸೇವಿತನಾಗಿ, ಶ್ರೀ ಲಕ್ಷ್ಮೀನರಸಿಂಹ ದೇವರ ಸಮೀಪದಲ್ಲಿ ಅವರ ಧ್ಯಾನಪರರಾಗಿ ಇರುವರು. ೭೭

शूलिना सहितो रामः पाति सर्वान् उपस्थितान् ।
लयं यास्यंति पापानि यातः शूर्पालयं विदुः ॥ ೭೮ ॥

ಶೂಲಪಾಣಿಯಾಗಿ ಎಲ್ಲರನ್ನೂ ಪಾಲಿಸುತ್ತ ಪಾಪಗಳನ್ನು ಲಯ ಮಾಡುತ್ತ ಪರಶುರಾಮದೇವರು ಇಲ್ಲೇ ಇರುವರು. ಆದ್ದರಿಂದ ಈ ಕ್ಷೇತ್ರವು ಶೂರ್ಪಾಲಯವೆಂದು ಪ್ರಸಿದ್ಧವಾಯಿತು. ೭೮

प्रार्थितो बालकेनापि प्रल्हादेन विशेषतः ॥ ८० ॥

शूर्पाकारे महाक्षेत्रे श्रीनृसिंहः स्थिरो भवत्।
तत्र स्नानं च दानं च काश्याः कोटिगुणं भवेत् ॥ ८१ ॥

ಬ್ರಹ್ಮ ರುದ್ರ ಇಂದ್ರಾದಿದೇವತೆಗಳಿಂದಲೂ ಬಾಲಕನಾದ ಪ್ರಹ್ಲಾದರಾಜನಿಗೂ ಪ್ರಾರ್ಥಿತರಾಗಿ ಹಿರಣ್ಯಕಶಿಪುವನ್ನು ಸಂಹಾರ ಮಾಡಿ ಶೂರ್ಪಾಲಯ ಕ್ಷೇತ್ರದಲ್ಲಿ ಸ್ಥಿರವಾಗಿ ಶ್ರೀ ಲಕ್ಷ್ಮೀನರಸಿಂಹ ದೇವರು ವಾಸ ಮಾಡಿರುವರು. ಅಲ್ಲಿಯ ಸ್ನಾನ ದಾನಾದಿಗಳು ಕಾಶೀ ಕ್ಷೇತ್ರದ ಕೋಟಿ ಪಟ್ಟು ಹೆಚ್ಚು ಫಲ ಕೊಡುವವು. ೮೧

कृष्णातरंगसंभूतपवनस्पर्शमात्रतः।
निर्धूतपातकाः सर्वे जना विष्णुपदं ययौ ॥ ८२ ॥

ಕೃಷ್ಣವೇಣೀ ತರಂಗಗಳಿಂದ ಹುಟ್ಟಿದ ಗಾಳಿಯ ಸ್ಪರ್ಶ ಮಾತ್ರದಿಂದ ಎಲ್ಲ ಪಾತಕಗಳನ್ನೂ ಕಳೆದುಕೊಂಡು ಜನರು ವೈಕುಂಠಕ್ಕೆ ಹೋದರು. ೮೨

मा यातु पुष्करप्रयागगयामुखानि
तीर्थान्यतो बदरिकाश्रममप्यसाध्यम्।
सेतुं च राघवकृतं वरकृष्णवेणी
तीरस्थमाश्रयत तीर्थवरं विमुक्तैः ॥ ८३ ॥

ಮುಕ್ತಿಯನ್ನು ಬಯಸುವವರು, ಪುಷ್ಕರ, ಪ್ರಯಾಗ, ಗಯಾ, ಮುಂತಾದ ಅಸಾಧ್ಯವಾದ ಬದರೀಕಾಶ್ರಮ, ರಾಮೇಶ್ವರ ಸೇತುವೆಯಾತ್ರಾ ಈ ತೀರ್ಥ ಕ್ಷೇತ್ರಗಳ ಕಿಂತಲೂ ಬಹಳ ಶ್ರೇಷ್ಠವಾದದ್ದೆಂದು ತಿಳಿದು ಮುಕ್ತಿ ಯೋಗ್ಯರು ಶೂರ್ಪಾಲಯ ಕ್ಷೇತ್ರವನ್ನು ಆಶ್ರಯಿಸಿರುತ್ತಾರೆ. ೮೩

शूर्पाले संगमे चैव छायायां श्रीगिरौ तथा।
सर्वत्र सुलभा कृष्णा चतुस्थानेषु दुर्लभा ॥ ८४ ॥

ಕ್ಷೇತ್ರವು ಬಹಳ ಶ್ರೇಷ್ಠವಾದದ್ದು. ೮೫

शूर्पालये महाक्षेत्रे कलिकाले विशेषतः ।
सर्वाभीष्टफलावाप्तिर्भविष्यति चिरादिह ॥ ८६ ॥

ಈ ದುರ್ಧರವಾದ ಕಲಿಕಾಲದಲ್ಲಿ ವಿಶೇಷತಃ ಮಹಾ ಕ್ಷೇತ್ರವಾದ ಶೂರ್ಪಾಲಯದಲ್ಲಿ ಬೇಗನೇ ಸಕಲ ಅಭೀಷ್ಟಾರ್ಥಗಳು ಪ್ರಾಪ್ತಿಯಾಗುವವು. ೮೬

चतुर्ष्वपि युगेष्वेतत् प्रसिद्धं क्षेत्रमुत्तमम् ।
न चास्य सदृशं क्षेत्रं त्रिषु लोकेषु विद्यते ॥ ८७ ॥

ನಾಲ್ಕೂ ಯುಗಗಳಲ್ಲಿ ಈ ಉತ್ತಮೋತ್ತಮವಾದ ಶೂರ್ಪಾಲಯ ಕ್ಷೇತ್ರವು ಪ್ರಸಿದ್ಧವಾದದ್ದು. ೮೭

पुरा त्रेतायुगे रामोऽप्यटन् वनमिहागतः ।
सीतया लक्ष्मणेनापि सहितः शत्रुसूदनः ॥ ८८ ॥

ಪೂರ್ವದಲ್ಲಿ ರಾಮಚಂದ್ರ ದೇವರು ವನವಾಸ ಮಾಡುತ್ತ, ಸೀತಾದೇವಿಯಿಂದಲೂ, ಲಕ್ಷ್ಮಣನಿಂದಲೂ ಕೂಡಿಕೊಂಡು ಶತ್ರುಗಳನ್ನು ನಿಗ್ರಹ ಮಾಡುತ್ತ ಈ ಶೂರ್ಪಾಲಯ ಕ್ಷೇತ್ರಕ್ಕೆ ಬಂದನು. ೮೮

दृष्ट्वा क्षेत्रं महापुण्यं प्रीत्या चोवास नित्यतः ।
बलरामोऽपि क्षेत्रेऽस्मिन् यात्रां कृत्वाऽऽगतो यतः ॥ ८९ ॥

ಶ್ರೀ ರಾಮಚಂದ್ರ ದೇವರು ಮಹಾ ಪುಣ್ಯಕರವಾದ ಈ ಕ್ಷೇತ್ರವನ್ನು ನೋಡಿ ಇಲ್ಲೇ ಅಖಂಡವಾಸ ಮಾಡಿದರು. ಬಲರಾಮನೂ ಕೂಡ ಯಾತ್ರಾರ್ಥಿಯಾಗಿ ಈ ಕ್ಷೇತ್ರಕ್ಕೆ ಬಂದು ಹೋದನು. ೮೯

मूलरूपांघ्रि प्रद्युम्न चतुर्मूर्त्यात्मना हरिः ।
मत्स्यादिदशरूपेण नारायणशतेन च ॥ ९० ॥

ಸಾಕ್ಷಾತ್ ಶ್ರೀಮನ್ನಾರಾಯಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ, ಸಂಕರ್ಷಣ,

ಮಹಾ ಪ್ರಭು, ನಾರಾಯಣನು, ಕೇಶವಾದಿ ಇಪ್ಪತ್ತು ನಾಲ್ಕು ರೂಪಗಳಿಂದಲೂ, ವಿಶ್ವಂ ವಿಷ್ಣು ವಷಟ್ಕಾರಾದಿ ಮುಖ್ಯ ಸಹಸ್ರರೂಪಗಳಿಂದಲೂ, ಅನಂತ ರೂಪಗಳಿಂದಲೂ ಕೂಡಿಕೊಂಡು, ಕ್ಷೇತ್ರ ಮೂರ್ತಿಯಾಗಿ ಈ ಕೃಷ್ಣವೇಣೀ ತಟಾಕದಲ್ಲಿ ಶೂರ್ಪಾಲಯ ಕ್ಷೇತ್ರದಲ್ಲಿ, ೬೧

वसत्यमितरूपोऽसौ भगवानखिलेष्टदः ।
एवं श्रीवेंकटेशादिरूपैः तत्रार्थितो द्विजैः ॥ ९२ ॥

ಸಕಲಾಭೀಷ್ಟವನ್ನು ಪೂರ್ಣಮಾಡುವವನಾಗಿ ಭಗವಾನ್ ನಾರಾಯಣನು ಅಮಿತವಾದ ರೂಪವುಳ್ಳವನಾಗಿ ಬ್ರಾಹ್ಮಣರಿಂದ ಪ್ರಾರ್ಥಿತನಾಗಿ ಹೀಗೆ ವೆಂಕಟೇಶಾದಿ ರೂಪಗಳಿಂದ ವಾಸಮಾಡುತ್ತಿರುವನು. ೬೨

कृष्णाभिमुखमासीनो क्षेत्रे देवो बभूव सः ।
एवं प्रोक्तं द्विजश्रेष्ठाः माहात्म्यं पापनाशनम् ॥ ९३ ॥

ಕೃಷ್ಣವೇಣಿಗೆ ಅಭಿಮುಖನಾಗಿ ಈ ಕ್ಷೇತ್ರದಲ್ಲಿ ಭಗವಾನ್ ನಾರಾಯಣನು ಶ್ರೀ ಲಕ್ಷ್ಮೀನೃಸಿಂಹರೂಪದಿಂದ ಇರುವನು. ಹೇ ಬ್ರಾಹ್ಮಣೋತ್ತಮರಾದ ಶೌನಕ ಋಷಿಗಳೇ ಹೀಗೆ ಪಾಪನಾಶಕರವಾದ ಶೂರ್ಪಾಲಯ ಕ್ಷೇತ್ರದ ಮಹಾತ್ಮ್ಯವನ್ನು ಹೇಳಿರುವೆನು. ೬೩

लेशतो हि मयाख्यातुं श्रृणुध्वं मुनिसत्तमाः ।
वक्तुं विस्तरतो नैतच्छक्यं वर्षशतैरपि ॥ ९४ ॥

ಋಷಿಗಳೇ ಈ ಕ್ಷೇತ್ರ ಮಹಾತ್ಮ್ಯವನ್ನು ಬಹಳ ಸಂಕ್ಷೇಪವಾಗಿ ಹೇಳಿದ್ದೇನೆ. ಕೇಳಿರಿ. ವಿಸ್ತಾರವಾಗಿ ಹೇಳಲಿಕ್ಕೆ ನೂರಾರು ವರ್ಷಗಳಾದರೂ ಸಾಲುವುದಿಲ್ಲ. ೬೪

यात्रां तु कृतवान्यस्तु स्नानदानादिकं तथा ।
अवश्यं क्षेत्रमाहात्म्यं भक्त्या श्रवणमाचरेत् ॥ ९५ ॥

ನಿಃಸಂಶಯವಾಗಿ ಮೋಕ್ಷಾದಿ ಪುರುಷಾರ್ಥಗಳ್ನು, ಶುಭಕರವಾದ ಇಷ್ಟಾರ್ಥಗಳನ್ನು ಪಡೆಯುವರು. ೯೬

श्रुणोति प्रयतो धीमान् माहात्म्यं यस्तु सर्वदा ।
स क्षेत्रवासजं पुण्यं सौभाग्यं लभते ध्रुवम् ॥ ९७ ॥

ಯಾವ ಬುದ್ಧಿವಂತನು ಈ ಕ್ಷೇತ್ರವು ಮಾಹಾತ್ಮ್ಯ ಪ್ರಯತ್ನ ಪೂರ್ವಕವಾಗಿ ಶ್ರವಣ ಮಾಡುವನೋ ಅವನು ಕ್ಷೇತ್ರವಾಸದಿಂದ ಬರುವ ಪುಣ್ಯವನ್ನು ಸೌಭಾಗ್ಯವನ್ನು ಬೇಗನೇ ಪಡೆಯುವರು. ೯೭

॥ इति स्कंदपुराणे कृष्णामाहात्म्ये शूर्पाकारक्षेत्रमाहात्म्ये प्रथमोध्यायः ॥

❀ ❀ ❀

